| ಕ್ರ ಸಂ. | ಮಾರುಕಟ್ಟೆ ಕ್ಷೇತ್ರ | ಮಾರುಕಟ್ಟೆ ಕ್ಷೇತ್ರದ ಪರಿಮಿತಿ | ಕೃಷಿ ಉತ್ಪನ್ನಗಳು |
|---|---|---|---|
| 1 | 2 | 3 | 4 |
| | | | 82.ಕಾಯಿಗಳು, 83.ಹಸಿರುಮೆಣಸಿನಕಾಯಿ, 84.ಈರುಳ್ಳಿ, 85.ಆಲೂಗಡ್ಡೆ, 86.ಸುವರ್ಣಗೆಡ್ಡೆ, 87.ಸಿಹಿಗೆಣಸು (ಗೆಣಸು), 88.ಟೊಮ್ಯಾಟೋ, 89.ಬೀಟೆ (ರೋಸ್‌ವುಡ್), 90.ಬಿಲ್ವಾಲ, 91.ಗಂಜಾನ್, 92.ಹಡಗ, 93.ಹಳದಿ, 94.ಹನಿಮತ್ತಲ್, 95.ಹೊನ್ನೆ, 96.ಐಯಾನಿ, 97.ಹಲಸಿನಮರ, 98.ಜಂಬೆ, 99.ಕಲನ್, 100.ಕಿಂಡಲ್, 101.ಮಾವಿನಮರ, 102.ಮತ್ತಿ, 103.ನಂದಿ, 104.ರಾಂಪತ್ರೆ, 105.ತೇಗ (ಸಾಗವಾನಿ), 106.ಬಿಳಿ ದೇವದಾರು (ಕೇದರ), 107.ಸಿಲ್ವರ್ ಓಕ್, 108.ನೀಲಗಿರಿ, 109.ವೀಳ್ಯೆದೆಲೆ, 110.ಬೆಲ್ಲ, 111.ತೆಂಗಿನಕಡ್ಡಿ, 112.ಒಣದ್ರಾಕ್ಷಿ. |

ಮೇಲಿನ ಉದ್ದೇಶಿತ ಪ್ರಸ್ತಾವಕ್ಕೆ ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ ವ್ಯವಹಾರ (ನಿಯಂತ್ರಣ ಮತ್ತು ಅಭಿವೃದ್ಧಿ) ಅಧಿನಿಯಮ 1966 ರ ಕಲಂ 3 ರನ್ವಯ ಆಕ್ಷೇಪಣೆ / ಸಲಹೆಗಳನ್ನು ಆಹ್ವಾನಿಸಿದ್ದು, ಯಾವುದೇ ಆಕ್ಷೇಪಣೆಗಳು / ಸಲಹೆಗಳು ಇದ್ದಲ್ಲಿ ಈ ಅಧಿಸೂಚನೆಯು ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ ದಿನಾಂಕದಿಂದ ಅಥವಾ ಕನ್ನಡದಿನಪತ್ರಿಕೆಯಲ್ಲಿ ಯಾವುದರಲ್ಲಿ ತಡವಾಗಿ ಪ್ರಕಟವಾಗುವುದೋ ಆ ದಿನಾಂಕದಿಂದ 32 ದಿವಸದೊಳಗಾಗಿ ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ಸಹಕಾರ ಇಲಾಖೆ, ಕರ್ನಾಟಕ ಸರ್ಕಾರ, ಬಹುಮಹಡಿಗಳ ಕಟ್ಟಡ, ಬೆಂಗಳೂರು 560 001 ಇವರಿಗೆ ಸಲ್ಲಿಸಲು ಸೂಚನೆ ನೀಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಸಿ.ಕೆ. ವಾಸುದೇವ ಮೂರ್ತಿ**
ಸರ್ಕಾರದ ಅಧೀನ ಕಾರ್ಯದರ್ಶಿ
ಸಹಕಾರ ಇಲಾಖೆ.

## ವಿಶೇಷ ಪತ್ರಿಕೆ

| ಭಾಗ – IV-A | ಬೆಂಗಳೂರು, ಗುರುವಾರ, ಏಪ್ರಿಲ್ ೧, ೨೦೧೦ (ಚೈತ್ರ ೧೧, ಶಕ ವರ್ಷ ೧೯೩೨) | ನಂ. ೩೨೬ |
|---|---|---|

**ಕರ್ನಾಟಕ ವಿಧಾನಸಭೆ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ: ವಿಸಸ:ಶಾರಶಾ:ನಿಸ:58:2009–10, ಬೆಂಗಳೂರು, ದಿನಾಂಕ: 12ನೇ ಮಾರ್ಚ್, 2010**

ಕರ್ನಾಟಕ ವಿಧಾನಸಭೆಯ ಕಾರ್ಯವಿಧಾನ ಮತ್ತು ನಡವಳಿಕೆಯ ನಿಯಮ 369(3) ಅಡಿಯಲ್ಲಿ ಅವಶ್ಯವಿರುವಂತೆ ಕರ್ನಾಟಕ ವಿಧಾನಸಭೆಯ ಕಾರ್ಯವಿಧಾನ ಮತ್ತು ನಡವಳಿಕೆಯ ನಿಯಮಗಳಿಗೆ ದಿನಾಂಕ 12ನೇ ಮಾರ್ಚ್ 2010 ರಂದು ಅಂಗೀಕರಿಸಲಾದ ತಿದ್ದುಪಡಿಗಳನ್ನು ಈ ಮೂಲಕ ಪ್ರಕಟಿಸಲಾಗಿದೆ.

ಬೆಂಗಳೂರು, **ಎಸ್.ಬಿ.ಪಾಟೀಲ್**
ದಿನಾಂಕ: 31.3.2010 ಕಾರ್ಯದರ್ಶಿ,
ಕರ್ನಾಟಕ ವಿಧಾನಸಭೆ

**ಕರ್ನಾಟಕ ವಿಧಾನಸಭೆಯ ಕಾರ್ಯವಿಧಾನ ಮತ್ತು ನಡವಳಿಕೆಯ ನಿಯಮಗಳಿಗೆ ತಿದ್ದುಪಡಿ**

**ಅ. ಸ್ಥಳೀಯ ಸಂಸ್ಥೆಗಳ ಮತ್ತು ಪಂಚಾಯತ್‌ರಾಜ್ ಸಂಸ್ಥೆಗಳ ಸಮಿತಿ**

**ನಿಯಮ 266 ಎ**

**1. ಸಮಿತಿಯ ರಚನೆ:**

ಸ್ಥಳೀಯ ಸಂಸ್ಥೆಗಳ ಮತ್ತು ಪಂಚಾಯತ್‌ರಾಜ್ ಸಂಸ್ಥೆಗಳ ಸಮಿತಿಯು 20 (ಇಪ್ಪತ್ತು ಮಾತ್ರ) ಕ್ಕಿಂತ ಹೆಚ್ಚಿನ ಸದಸ್ಯರನ್ನೊಳಗೊಂಡಿರತಕ್ಕುದಲ್ಲ. ಆ ಪೈಕಿ 15 ಮಂದಿ ಸದಸ್ಯರನ್ನು ವಿಧಾನಸಭೆಯ ಅಧ್ಯಕ್ಷರು ನಾಮನಿರ್ದೇಶನ ಮಾಡುವ ಮೂಲಕ ಹಾಗೂ 5 ಮಂದಿ ಸದಸ್ಯರನ್ನು ವಿಧಾನ ಪರಿಷತ್ತಿನ ಸಭಾಪತಿಯವರು ನಾಮನಿರ್ದೇಶನ ಮಾಡುವ ಮೂಲಕ ನೇಮಕ ಮಾಡತಕ್ಕುದು.

**2. ಸಮಿತಿಯ ಅಧಿಕಾರಾವಧಿಃ**

ಸಮಿತಿಯ ಅಧಿಕಾರಾವಧಿಯು ಒಂದು ವರ್ಷಕ್ಕೆ ಮೀರತಕ್ಕುದಲ್ಲ;

**3. ಗಣಪೂರ್ತಿಃ**

ಸಮಿತಿಯ ಸಭೆ ನಡೆಯಬೇಕಾದರೆ ಕನಿಷ್ಠಪಕ್ಷ ಮೂರನೇ ಒಂದು ಭಾಗದಷ್ಟು ಸದಸ್ಯರು ಹಾಜರಿರತಕ್ಕದ್ದು;

**4. ಸಮಿತಿಯ ಪ್ರಕಾರ್ಯಗಳುಃ**

(ಅ) ಸ್ಥಳೀಯ ಸಂಸ್ಥೆಗಳ ಮತ್ತು ಪಂಚಾಯತ್‌ರಾಜ್ ಸಂಸ್ಥೆಗಳ ವೆಚ್ಚಕ್ಕಾಗಿ ಮಂಜೂರು ಮಾಡಿದ್ದ ಮೊಬಲಗುಗಳ ವಿನಿಯೋಗದ ವಿವರಗಳನ್ನು ತೋರಿಸುವ ಲೆಕ್ಕಗಳನ್ನು ರಾಜ್ಯ ಸರ್ಕಾರದ ಹಣಕಾಸಿಗೆ ಸಂಬಂಧಿಸಿದ ವಾರ್ಷಿಕ ಲೆಕ್ಕಗಳನ್ನು ಹಾಗೂ ಸಮಿತಿಯು ಸೂಕ್ತವೆಂದು ಭಾವಿಸಬಹುದಾದಂಥ ಇತರ ಲೆಕ್ಕಗಳನ್ನು ಪರಿಶೀಲಿಸುವುದು;

(ಆ) ರಾಜ್ಯ ಸರ್ಕಾರದ ವಿನಿಯೋಗದ ಲೆಕ್ಕಗಳನ್ನು ಮತ್ತು ಆ ಲೆಕ್ಕಗಳ ಬಗ್ಗೆ ನಿಯಂತ್ರಣ ಹಾಗೂ ಮಹಾಲೇಖಪಾಲರು ನೀಡಿದ ಮತ್ತು ಸದನದ ಮುಂದೆ ಮಂಡಿಸಲಾದ ವರದಿಗಳನ್ನು ಪರಿಶೀಲಿಸುವುದು;

(ಇ) ಸ್ಥಳೀಯ ಸಂಸ್ಥೆಗಳ ಮತ್ತು ಪಂಚಾಯತ್‌ರಾಜ್ ಸಂಸ್ಥೆಗಳ ಸ್ವಾಯತ್ತತೆಯನ್ನು ಗಮನದಲ್ಲಿಟ್ಟುಕೊಂಡು, ಸ್ಥಳೀಯ ಸಂಸ್ಥೆಗಳ ಮತ್ತು ಪಂಚಾಯತ್‌ರಾಜ್ ಸಂಸ್ಥೆಗಳ ಕಾನೂನಿಗೆ ಅನುಸಾರವಾಗಿ ವ್ಯವಹಾರದ ಕರ್ತವ್ಯಗಳನ್ನು ನಿರ್ವಹಿಸುತ್ತಿವೆಯೇ ಎಂಬುದನ್ನು ಪರಿಶೀಲಿಸುವುದು.

(ಈ) ಸ್ಥಳೀಯ ಸಂಸ್ಥೆಗಳ ಅಥವಾ ಪಂಚಾಯತ್‌ರಾಜ್ ಸಂಸ್ಥೆಗಳ ಕಾರ್ಯನೀತಿಯ ಇತರೆ ಯಾವುದೇ ಅಂಶವನ್ನು ಮಾನ್ಯ ಸಭಾಧ್ಯಕ್ಷರು ಸಮಿತಿಗೆ ವಹಿಸಿದಲ್ಲಿ ಪರಿಶೀಲಿಸುವುದು;

ಪರಂತು ಈ ಕೆಳಕಂಡ ವಿಷಯಗಳನ್ನು ಸಮಿತಿಯು ಪರಿಶೀಲಿಸತಕ್ಕುದಲ್ಲ ಮತ್ತು ಆ ಬಗ್ಗೆ ತನಿಖೆ ನಡೆಸತಕ್ಕುದಲ್ಲ;

(ಅ) ಸ್ಥಳೀಯ ಸಂಸ್ಥೆಗಳ ಹಾಗೂ ಪಂಚಾಯತ್‌ರಾಜ್ ಸಂಸ್ಥೆಗಳ ವ್ಯವಹಾರಗಳಿಂದ ವಿಭಿನ್ನವಾದ ಸರ್ಕಾರದ ಮುಖ್ಯ ಕಾರ್ಯನೀತಿಗಳು;

(ಆ) ಸ್ಥಳೀಯ ಸಂಸ್ಥೆಗಳ ಹಾಗೂ ಪಂಚಾಯತ್‌ರಾಜ್ ಸಂಸ್ಥೆಗಳ ದೈನಂದಿನ ಆಡಳಿತ ವಿಷಯಗಳು;

(ಇ) ಯಾವುದೇ ವಿಶೇಷ ಶಾಸನದಡಿ ಸ್ಥಾಪಿತವಾದ ಸ್ಥಳೀಯ ಸಂಸ್ಥೆಗಳ ಹಾಗೂ ಪಂಚಾಯತ್‌ರಾಜ್ ಸಂಸ್ಥೆಗಳ ವಿಷಯಗಳನ್ನು ಪರಿಶೀಲಿಸಲು ಸ್ಥಾಪಿಸಲಾದ ಆಡಳಿತ ವ್ಯವಸ್ಥೆಯ ವಿಷಯಗಳು;

**5. ಸ್ಥಳೀಯ ಸಂಸ್ಥೆಗಳ ಮತ್ತು ಪಂಚಾಯತ್‌ರಾಜ್ ಸಂಸ್ಥೆಗಳ ಸಮಿತಿಯ ವರದಿಯನ್ನು ಮಂಡಿಸುವುದು :–** ಸ್ಥಳೀಯ ಸಂಸ್ಥೆಗಳ ಮತ್ತು ಪಂಚಾಯತ್‌ರಾಜ್ ಸಂಸ್ಥೆಗಳ ಸಮಿತಿಯ ವರದಿಯನ್ನು ಮತ್ತು ಅದರ ಮೇಲಣ ನಿಯಂತ್ರಕ ಮತ್ತು ಮಹಾಲೇಖಪಾಲರ ವರದಿಯನ್ನು ಸದನದ ಸದಸ್ಯರೇ ಸಮಿತಿಯ ಅಧ್ಯಕ್ಷರಾಗಿದ್ದರೆ ಅವರು ಅಥವಾ ಅದನ್ನು ಮಂಡಿಸಲು ಅಧ್ಯಕ್ಷರಿಂದ ಅಧಿಕಾರ ಪಡೆದಿರಬಹುದಾದ ಯಾರೇ ಸದಸ್ಯರು ಮಂಡಿಸತಕ್ಕುದು.

**ಆ. ಖಾಸಗಿ ಕಾರ್ಯಕಲಾಪಗಳಿಗೆ ಕಾಲವನ್ನು ಗೊತ್ತುಮಾಡುವ ಬಗ್ಗೆ ತಿದ್ದುಪಡಿ**

**ಕರ್ನಾಟಕ ವಿಧಾನಸಭೆಯ ಕಾರ್ಯವಿಧಾನ ಮತ್ತು ನಡವಳಿಕೆಯ ನಿಯಮಗಳು**

| **ಅಸ್ತಿತ್ವದಲ್ಲಿರುವ ನಿಯಮಗಳು** | **ಸಮಿತಿಯ ಶಿಫಾರಸ್ಸಿನಂತೆ ತಿದ್ದುಪಡಿಯಾದ ನಿಯಮಗಳು** |
|---|---|
| **ನಿಯಮ 30 ಖಾಸಗಿ ಕಾರ್ಯಕಲಾಪಗಳಿಗೆ ಕಾಲವನ್ನು ಗೊತ್ತುಮಾಡುವುದು (ಪುಟ ಸಂಖ್ಯೆ: 14):** | |
| ಶುಕ್ರವಾರದ ಉಪವೇಶನದ ಕಡೆಯ ಎರಡೂವರೆ ಗಂಟೆಗಳ ಕಾಲವನ್ನು ಖಾಸಗಿ ಸದಸ್ಯರ ಕಾರ್ಯಕಲಾಪಗಳಿಗೆ ಗೊತ್ತುಪಡಿಸತಕ್ಕುದು. | ಗುರುವಾರದ ಉಪವೇಶನದ ಕಡೆಯ ಎರಡೂವರೆ ಗಂಟೆಗಳ ಕಾಲವನ್ನು ಖಾಸಗಿ ಸದಸ್ಯರ ಕಾರ್ಯಕಲಾಪಗಳಿಗೆ ಗೊತ್ತುಪಡಿಸತಕ್ಕುದು. |
| ಅಲ್ಲದೆ ಸಭಾಧ್ಯಕ್ಷರು, ಬೇರೆ ಬೇರೆ ವರ್ಗಗಳ ಕಾರ್ಯಕಲಾಪಗಳ ಇತ್ಯರ್ಥಕ್ಕೆ ಬೇರೆ ಬೇರೆ ಶುಕ್ರವಾರಗಳನ್ನು ಗೊತ್ತುಪಡಿಸಬಹುದು ಮತ್ತು ಯಾವುದೇ ನಿರ್ದಿಷ್ಟ ವರ್ಗದ ಕಾರ್ಯಕಲಾಪಕ್ಕಾಗಿ ಗೊತ್ತುಪಡಿಸಿರುವ ಶುಕ್ರವಾರದಂದು ಆ ವರ್ಗದ ಕಾರ್ಯಕಲಾಪಗಳಿಗೆ ಆದ್ಯತೆಯಿರತಕ್ಕುದು; | ಅಲ್ಲದೆ ಸಭಾಧ್ಯಕ್ಷರು, ಬೇರೆ ಬೇರೆ ವರ್ಗಗಳ ಕಾರ್ಯಕಲಾಪಗಳ ಇತ್ಯರ್ಥಕ್ಕೆ ಬೇರೆ ಬೇರೆ ಗುರುವಾರಗಳನ್ನು ಗೊತ್ತುಪಡಿಸಬಹುದು ಮತ್ತು ಯಾವುದೇ ನಿರ್ದಿಷ್ಟ ವರ್ಗದ ಕಾರ್ಯಕಲಾಪಕ್ಕಾಗಿ ಗೊತ್ತುಪಡಿಸಿರುವ ಗುರುವಾರದಂದು ಆ ವರ್ಗದ ಕಾರ್ಯಕಲಾಪಗಳಿಗೆ ಆದ್ಯತೆಯಿರತಕ್ಕುದು;<br><br>ಅಷ್ಟೇ ಅಲ್ಲದೆ ಅಧ್ಯಕ್ಷರು ಸಭಾನಾಯಕರೊಂದಿಗೆ ಸಮಾಲೋಚಿಸಿ ಗುರುವಾರಗಳಲ್ಲದೆ ಇತರ ಯಾವುದೇ |

| ಅಸ್ತಿತ್ವದಲ್ಲಿರುವ ನಿಯಮಗಳು | ಸಮಿತಿಯ ಶಿಫಾರಸ್ಸಿನಂತೆ ತಿದ್ದುಪಡಿಯಾದ ನಿಯಮಗಳು |
|---|---|
| ಅಷ್ಟೇ ಅಲ್ಲದೆ ಅಧ್ಯಕ್ಷರು ಸಭಾನಾಯಕರೊಂದಿಗೆ ಸಮಾಲೋಚಿಸಿ ಶುಕ್ರವಾರಗಳಲ್ಲದೆ ಇತರ ಯಾವುದೇ ದಿನವನ್ನು ಖಾಸಗಿ ಸದಸ್ಯರ ಕಾರ್ಯಕಲಾಪಗಳಿಗೆ ಗೊತ್ತುಪಡಿಸಬಹುದು. | ದಿನವನ್ನು ಖಾಸಗಿ ಸದಸ್ಯರ ಕಾರ್ಯಕಲಾಪಗಳಿಗೆ ಗೊತ್ತುಪಡಿಸಬಹುದು. |
| ಅಷ್ಟೇ ಅಲ್ಲದೆ, ಶುಕ್ರವಾರದಂದು ಸದನವು ಉಪವೇಶನದಲ್ಲಿಲ್ಲದಿದ್ದರೆ ಅಧ್ಯಕ್ಷರು ವಾರದ ಯಾವುದೇ ಇತರ ದಿನದ ಎರಡೂವರೆ ಗಂಟೆಗಳನ್ನು ಖಾಸಗಿ ಸದಸ್ಯರ ಕಾರ್ಯಕಲಾಪಗಳಿಗೆ ಗೊತ್ತುಪಡಿಸಬಹುದೆಂದು ನಿರ್ದೇಶಿಸಬಹುದು. | ಅಷ್ಟೇ ಅಲ್ಲದೆ, ಗುರುವಾರದಂದು ಸದನವು ಉಪವೇಶನದಲ್ಲಿಲ್ಲದಿದ್ದರೆ ಅಧ್ಯಕ್ಷರು ವಾರದ ಯಾವುದೇ ಇತರ ದಿನದ ಎರಡೂವರೆ ಗಂಟೆಗಳನ್ನು ಖಾಸಗಿ ಸದಸ್ಯರ ಕಾರ್ಯಕಲಾಪಗಳಿಗೆ ಗೊತ್ತುಪಡಿಸಬಹುದೆಂದು ನಿರ್ದೇಶಿಸಬಹುದು.<br><br>ಖಾಸಗಿ ಸದಸ್ಯರ ಕಾರ್ಯಕಲಾಪಗಳನ್ನು ಗುರುವಾರದಂದು ಚರ್ಚೆಗೆ ತೆಗೆದುಕೊಂಡು, ನಿರ್ಣಯ ಮಂಡಿಸಿದ ಸದಸ್ಯರಿಗೆ ಮತ್ತು ಇತರ ಸದಸ್ಯರಿಗೆ ಚರ್ಚಿಸಲು ಸಮಯ ನಿಗದಿಗೊಳಿಸಿ, ಸಭಾಧ್ಯಕ್ಷರು ನಿಗದಿಗೊಳಿಸಿದ ಕಾಲಾವಧಿಯೊಳಗೆ ಚರ್ಚೆಯನ್ನು ಮುಕ್ತಾಯಗೊಳಿಸಿ, ಅದೇ ದಿನ ಸರ್ಕಾರವು ಉತ್ತರ ನೀಡಿ ಚರ್ಚೆಯನ್ನು ಮುಕ್ತಾಯಗೊಳಿಸತಕ್ಕುದು. ನಿರ್ಣಯ ಮಂಡಿಸಿದ ಸದಸ್ಯರು ಸದನದಲ್ಲಿ ಹಾಜರಿಲ್ಲದಿದ್ದಲ್ಲಿ ಮುಂದಿನ ದಿನ ಚರ್ಚೆಗೆ ಅವಕಾಶ ಮಾಡಿಕೊಡತಕ್ಕುದು ಹಾಗೂ ಸರ್ಕಾರದ ಉತ್ತರದೊಂದಿಗೆ ಅದೇ ದಿನ ಚರ್ಚೆಯನ್ನು ಮುಕ್ತಾಯಗೊಳಿಸತಕ್ಕುದು. |

**ಇ. ಸಮಿತಿ ಸಭೆ ನಡೆಸಲು ಎಲ್ಲಾ ಸಮಿತಿಗಳ ಸಭೆಗೆ ಕನಿಷ್ಟ ಪಕ್ಷ ಹಾಜರಾಗಬೇಕಾದ ಸದಸ್ಯರ ಸಂಖ್ಯೆ ನಿಗದಿಗೊಳಿಸುವ ತಿದ್ದುಪಡಿ (ಗಣಪೂರ್ತಿ)**

| ಅಸ್ತಿತ್ವದಲ್ಲಿರುವ ನಿಯಮಗಳು | ಸಮಿತಿಯ ಶಿಫಾರಸ್ಸಿನಂತೆ ತಿದ್ದುಪಡಿಯಾದ ನಿಯಮಗಳು |
|---|---|
| **ಸಮಿತಿಗಳ ಸಾಮಾನ್ಯಾಂಶಗಳು:**<br><br>ನಿಯಮ 212(1) ಸಭೆಯು ನಡೆಯಲು ಕನಿಷ್ಠಪಕ್ಷ ಹಾಜರಾಗಬೇಕಾದ ಸದಸ್ಯರ ಸಂಖ್ಯೆ(ಗಣಪೂರ್ತಿ) (ಪುಟ ಸಂಖ್ಯೆ: 96); | |
| ಅನ್ಯಥಾ ಉಪಬಂಧಿಸಿದ್ದ ಹೊರತು ಸಮಿತಿಯ ಉಪವೇಶನ ನಡೆಯಲು ಕನಿಷ್ಠಪಕ್ಷ ಹಾಜರಾಗಿರಬೇಕಾದ ಸದಸ್ಯರ ಸಂಖ್ಯೆ, ಆದಷ್ಟು ಮಟ್ಟಿಗೆ, ಸಮಿತಿಯ ಸದಸ್ಯರ ಒಟ್ಟು ಸಂಖ್ಯೆಯ ಸರಿ ಸುಮಾರು ನಾಲ್ಕನೆಯ ಒಂದು ಭಾಗವಾಗಿರಬೇಕು. | ಅನ್ಯಥಾ ಉಪಬಂಧಿಸಿದ್ದ ಹೊರತು ಸಮಿತಿಯ ಉಪವೇಶನ ನಡೆಯಲು ಕನಿಷ್ಠಪಕ್ಷ ಹಾಜರಾಗಿರಬೇಕಾದ ಸದಸ್ಯರ ಸಂಖ್ಯೆ, ಆದಷ್ಟು ಮಟ್ಟಿಗೆ, ಸಮಿತಿಯ ಸದಸ್ಯರ ಒಟ್ಟು ಸಂಖ್ಯೆಯ ಸರಿ ಸುಮಾರು ಮೂರನೆಯ ಒಂದು ಭಾಗವಾಗಿರಬೇಕು. |
| **(ಈ) ಅರ್ಜಿಗಳ ಪರಿಶೀಲನಾ ಸಮಿತಿ**<br><br>ನಿಯಮ 262(3) ಗಣಪೂರ್ತಿ (ಪುಟಸಂಖ್ಯೆ: 111); | **(ಈ) ಅರ್ಜಿಗಳ ಪರಿಶೀಲನಾ ಸಮಿತಿ** |
| ಸಮಿತಿಯ ಸಭೆ ನಡೆಯಬೇಕಾದರೆ ಅಧ್ಯಕ್ಷರೂ ಸೇರಿದಂತೆ ನಾಲ್ಕು ಮಂದಿ ಸದಸ್ಯರ ಕೋರಂ ಇರತಕ್ಕದು. | ನಿಯಮ 262(3) ಬಿಟ್ಟುಬಿಡುವುದು. |
| **(ಎಫ್) ಸಾರ್ವಜನಿಕ ಲೆಕ್ಕಪತ್ರಗಳ ಸಮಿತಿ**<br><br>ನಿಯಮ 265(3) ಗಣಪೂರ್ತಿ (ಪುಟಸಂಖ್ಯೆ:114); | **(ಎಫ್) ಸಾರ್ವಜನಿಕ ಲೆಕ್ಕಪತ್ರಗಳ ಸಮಿತಿ** |
| ಸಮಿತಿಯ ಸಭೆ ನಡೆಯಬೇಕಾದರೆ ಅಧ್ಯಕ್ಷರೂ ಸೇರಿದಂತೆ ಐದು ಮಂದಿ ಸದಸ್ಯರ ಕೋರಂ ಇರತಕ್ಕದು. | ನಿಯಮ 265(3) ಬಿಟ್ಟುಬಿಡುವುದು. |

| ಅಸ್ತಿತ್ವದಲ್ಲಿರುವ ನಿಯಮಗಳು | ಸಮಿತಿಯ ಶಿಫಾರಸ್ಸಿನಂತೆ ತಿದ್ದುಪಡಿಯಾದ ನಿಯಮಗಳು |
| --- | --- |
| **(ಜಿ) ಅಂದಾಜುಗಳ ಸಮಿತಿ** | **(ಜಿ) ಅಂದಾಜುಗಳ ಸಮಿತಿ** |
| ನಿಯಮ 268(3) ಗಣಪೂರ್ತಿ<br>ಸಮಿತಿಯ ಐದು ಮಂದಿ ಸದಸ್ಯರು ಹಾಜರಿದ್ದರೆ ಸಮಿತಿಯ ಉಪವೇಶನಕ್ಕೆ ಗಣಪೂರ್ತಿಯಾಗುತ್ತದೆ. | ನಿಯಮ 268(3)ನ್ನು ಬಿಟ್ಟುಬಿಡುವುದು. |
| **(ಐ) ಹಕ್ಕುಭಾಧ್ಯತೆಗಳ ಸಮಿತಿ**<br>ನಿಯಮ 272(2) ಗಣಪೂರ್ತಿ (ಪುಟಸಂಖ್ಯೆ:117);<br>ಸಮಿತಿಯ ಐದು ಮಂದಿ ಸದಸ್ಯರು ಹಾಜರಿದ್ದರೆ ಸಮಿತಿಯ ಉಪವೇಶನಕ್ಕೆ ಗಣಪೂರ್ತಿಯಾಗುತ್ತದೆ. | ನಿಯಮ 272(2)ನ್ನು ಬಿಟ್ಟುಬಿಡುವುದು. |
| **(ಎಂ) ಅನುಸೂಚಿತ ಜಾತಿ ಹಾಗೂ ಅನುಸೂಚಿತ ಪಂಗಡಗಳ ಕಲ್ಯಾಣ ಸಮಿತಿ**<br>ನಿಯಮ 287(3) ಕೋರಂ (ಪುಟಸಂಖ್ಯೆ:123);<br>ಸಮಿತಿಯ ಉಪವೇಶನವು ನಡೆಯಬೇಕಾದರೆ ಕನಿಷ್ಟಪಕ್ಷ ಐವರು ಸದಸ್ಯರುಗಳ ಹಾಜರಾತಿ ಆಗಿರತಕ್ಕದ್ದು. | ನಿಯಮ 287(3)ನ್ನು ಬಿಟ್ಟುಬಿಡುವುದು. |
| **(ಎನ್) ಹಿಂದುಳಿದ ವರ್ಗಗಳು ಮತ್ತು ಅಲ್ಪಸಂಖ್ಯಾತರ ಕಲ್ಯಾಣ ಸಮಿತಿ**<br>ನಿಯಮ 289(3) ಕೋರಂ (ಪುಟಸಂಖ್ಯೆ:124);<br>ಸಮಿತಿಯ ಉಪವೇಶನವು ನಡೆಯಬೇಕಾದರೆ ಕನಿಷ್ಟಪಕ್ಷ ಐವರು ಸದಸ್ಯರುಗಳ ಹಾಜರಾತಿ ಆಗಿರತಕ್ಕದ್ದು. | ನಿಯಮ 289(3)ನ್ನು ಬಿಟ್ಟುಬಿಡುವುದು. |

**ಈ. ಮಂತ್ರಿಯಾಗಿ ನೇಮಕವಾದ ಸಮಿತಿ ಸದಸ್ಯರ ಸದಸ್ಯತ್ವ ನಿಂತುಹೋಗುವ ಬಗ್ಗೆ ತಿದ್ದುಪಡಿ**

| ಅಸ್ತಿತ್ವದಲ್ಲಿರುವ ನಿಯಮಗಳು | ಸಮಿತಿಯ ಶಿಫಾರಸ್ಸಿನಂತೆ ತಿದ್ದುಪಡಿಯಾದ ನಿಯಮಗಳು |
| --- | --- |
| **ಅರ್ಜಿಗಳ ಪರಿಶೀಲನಾ ಸಮಿತಿ**<br>ನಿಯಮ 262(1) ಸಮಿತಿಯ ರಚನೆ (ಪುಟಸಂಖ್ಯೆ: 111);<br>ಅರ್ಜಿಗಳ ಪರಿಶೀಲನಾ ಸಮಿತಿಯು ಇರತಕ್ಕುದು ಮತ್ತು ಆ ಸಮಿತಿಯು ವಿಧಾನಸಭಾ ಉಪಾಧ್ಯಕ್ಷರು ಹಾಗೂ ಅಧ್ಯಕ್ಷರಿಂದ ನಾಮನಿರ್ದೇಶನ ಮಾಡಲ್ಪಟ್ಟ ಹದಿನೈದು ಮಂದಿ ಸದಸ್ಯರನ್ನೊಳಗೊಂಡಿರತಕ್ಕುದು. | ನಿಯಮ 262(1)ರ ಪದಗಳ ನಂತರ ಈ ಕೆಳಗಿನ ಪದಗಳನ್ನು ಸೇರಿಸಿಕೊಳ್ಳತಕ್ಕದ್ದು.<br>“ಪರಂತು, ಯಾರೇ ಮಂತ್ರಿಯು ಸಮಿತಿಯ ಸದಸ್ಯರಾಗಿ ಚುನಾಯಿತರಾಗತಕ್ಕುದಲ್ಲ ಮತ್ತು ಸಮಿತಿಗೆ ಚುನಾಯಿತರಾದ ಮೇಲೆ ಯಾರೇ ಸದಸ್ಯರು ಮಂತ್ರಿಯಾಗಿ ನೇಮಕಗೊಂಡರೆ ಅವರು ಆ ರೀತಿ ನೇಮಕವಾದ ದಿನಾಂಕದಿಂದ ಸಮಿತಿಯ ಸದಸ್ಯರಾಗಿರುವುದು ನಿಂತುಹೋಗತಕ್ಕುದು". |
| **ಹಕ್ಕು ಬಾಧ್ಯತೆಗಳ ಸಮಿತಿ**<br>ನಿಯಮ 272(1) ಸಮಿತಿಯ ರಚನೆ (ಪುಟಸಂಖ್ಯೆ:117);<br>ಸದನಕ್ಕೆ ಹನ್ನೊಂದು ಮಂದಿಗಿಂತ ಹೆಚ್ಚಿಲ್ಲದ ಸದಸ್ಯರಿಂದ ಹಕ್ಕು ಬಾಧ್ಯತೆಗಳ ಸಮಿತಿಯನ್ನು ನೇಮಕ ಮಾಡತಕ್ಕುದು. ಅವರಲ್ಲಿ ಒಂಬತ್ತು ಮಂದಿ ಸದಸ್ಯರುಗಳನ್ನು ವರ್ಗಾಯಿಸಬಹುದಾದ ಒಂಟಿ ಮತದ ಮೂಲಕ ದಾಮಾಷಾ ಪ್ರಾತಿನಿಧ್ಯ ತತ್ವದ ಮೇರೆಗೆ ಸದನವು ಚುನಾಯಿಸತಕ್ಕುದು ಮತ್ತು ಇಬ್ಬರು ಸದಸ್ಯರುಗಳನ್ನು ಅಧ್ಯಕ್ಷರು, ತಮ್ಮ ವಿವೇಚನಾನುಸಾರವಾಗಿ, ನಾಮನಿರ್ದೇಶನದ ಮೂಲಕ ನೇಮಕ ಮಾಡತಕ್ಕುದು. | ನಿಯಮ 272(1)ರ ಪದಗಳ ನಂತರ ಈ ಕೆಳಗಿನ ಪದಗಳನ್ನು ಸೇರಿಸಿಕೊಳ್ಳತಕ್ಕದ್ದು.<br>"ಪರಂತು, ಯಾರೇ ಮಂತ್ರಿಯು ಸಮಿತಿಯ ಸದಸ್ಯರಾಗಿ ಚುನಾಯಿತರಾಗತಕ್ಕುದಲ್ಲ ಮತ್ತು ಸಮಿತಿಗೆ ಚುನಾಯಿತರಾದ ಮೇಲೆ ಯಾರೇ ಸದಸ್ಯರು ಮಂತ್ರಿಯಾಗಿ ನೇಮಕಗೊಂಡರೆ ಅವರು ಆ ರೀತಿ ನೇಮಕವಾದ ದಿನಾಂಕದಿಂದ ಸಮಿತಿಯ ಸದಸ್ಯರಾಗಿರುವುದು ನಿಂತುಹೋಗತಕ್ಕುದು". |

| ಅಸ್ತಿತ್ವದಲ್ಲಿರುವ ನಿಯಮಗಳು | ಸಮಿತಿಯ ಶಿಫಾರಸ್ಸಿನಂತೆ ತಿದ್ದುಪಡಿಯಾದ ನಿಯಮಗಳು |
|---|---|
| **ಅಧೀನ ಶಾಸನ ರಚನಾ ಸಮಿತಿ**<br>ನಿಯಮ 277(1) ಸಮಿತಿಯ ರಚನೆ (ಪುಟಸಂಖ್ಯೆ:119);<br>ಸಮಿತಿಯು, 20 ಸದಸ್ಯರನ್ನು ಒಳಗೊಂಡಿರತಕ್ಕುದು. ಈ ಪೈಕಿ ದಾಮಾಷಾ ಪ್ರಾತಿನಿಧ್ಯದ ತತ್ವಕ್ಕನುಸಾರವಾಗಿ ವರ್ಗಾಯಿಸಬಹುದಾದ ಒಂಟಿ ಮತದ ಮೂಲಕ 15 ಸದಸ್ಯರನ್ನು ವಿಧಾನಸಭಾ ಸದಸ್ಯರಲ್ಲಿ ಯಾರನ್ನಾದರೂ ಚುನಾಯಿಸತಕ್ಕುದು, ಮತ್ತು ಉಳಿದ 5 ಸದಸ್ಯರನ್ನು ವಿಧಾನಪರಿಷತ್ತಿನ ಸದಸ್ಯರಲ್ಲಿ ಯಾರನ್ನಾದರೂ ಚುನಾಯಿಸತಕ್ಕುದು. | ನಿಯಮ 277(1)ರ ಪದಗಳ ನಂತರ ಈ ಕೆಳಗಿನ ಪದಗಳನ್ನು ಸೇರಿಸಿಕೊಳ್ಳತಕ್ಕದ್ದು.<br>“ಪರಂತು, ಯಾರೇ ಮಂತ್ರಿಯು ಸಮಿತಿಯ ಸದಸ್ಯರಾಗಿ ಚುನಾಯಿತರಾಗತಕ್ಕುದಲ್ಲ ಮತ್ತು ಸಮಿತಿಗೆ ಚುನಾಯಿತರಾದ ಮೇಲೆ ಯಾರೇ ಸದಸ್ಯರು ಮಂತ್ರಿಯಾಗಿ ನೇಮಕಗೊಂಡರೆ ಅವರು ಆ ರೀತಿ ನೇಮಕವಾದ ದಿನಾಂಕದಿಂದ ಸಮಿತಿಯ ಸದಸ್ಯರಾಗಿರುವುದು ನಿಂತುಹೋಗತಕ್ಕುದು". |
| **ಸರ್ಕಾರಿ ಭರವಸೆಗಳ ಸಮಿತಿ**<br>ನಿಯಮ 281 ಸಮಿತಿಯ ರಚನೆ (ಪುಟಸಂಖ್ಯೆ:120);<br>ಸಮಿತಿಯು, ಮತದಾನದ ದಾಮಾಷ ಪ್ರಾತಿನಿಧ್ಯದ ತತ್ವಕ್ಕನುಸಾರವಾಗಿ ವರ್ಗಾಯಿಸಬಹುದಾದ ಒಂಟಿ ಮತದ ಮೂಲಕ ಸದನವು ತನ್ನ ಸದಸ್ಯರ ಪೈಕಿ ಚುನಾಯಿಸಿದ 15ಕ್ಕೆ ಮೀರದ ಸದಸ್ಯರನ್ನೊಳಗೊಂಡಿರತಕ್ಕದ್ದು. | ನಿಯಮ 281ರ ಪದಗಳ ನಂತರ ಈ ಕೆಳಗಿನ ಪದಗಳನ್ನು ಸೇರಿಸಿಕೊಳ್ಳತಕ್ಕದ್ದು.<br>"ಪರಂತು, ಯಾರೇ ಮಂತ್ರಿಯು ಸಮಿತಿಯ ಸದಸ್ಯರಾಗಿ ಚುನಾಯಿತರಾಗತಕ್ಕುದಲ್ಲ ಮತ್ತು ಸಮಿತಿಗೆ ಚುನಾಯಿತರಾದ ಮೇಲೆ ಯಾರೇ ಸದಸ್ಯರು ಮಂತ್ರಿಯಾಗಿ ನೇಮಕಗೊಂಡರೆ ಅವರು ಆ ರೀತಿ ನೇಮಕವಾದ ದಿನಾಂಕದಿಂದ ಸಮಿತಿಯ ಸದಸ್ಯರಾಗಿರುವುದು ನಿಂತುಹೋಗತಕ್ಕುದು". |
| **ಸದಸ್ಯರುಗಳ ಖಾಸಗಿ ವಿಧೇಯಕಗಳ ಮತ್ತು ನಿರ್ಣಯಗಳ ಸಮಿತಿ**<br>ನಿಯಮ 283(1) ಸಮಿತಿಯ ರಚನೆ (ಪುಟ ಸಂಖ್ಯೆ:121);<br>ಸದಸ್ಯರುಗಳ ಖಾಸಗಿ ವಿಧೇಯಕಗಳ ಮತ್ತು ನಿರ್ಣಯಗಳ ಸಮಿತಿ ಇರತಕ್ಕುದು, ಮತ್ತು ಅದರಲ್ಲಿ ಸಮಿತಿಯ ಅಧ್ಯಕ್ಷರಾಗಿ ಉಪಾಧ್ಯಕ್ಷರು ಮತ್ತು ಮತದಾನದ ದಾಮಾಷ ಪ್ರಾತಿನಿಧ್ಯದ ತತ್ವಕ್ಕನುಸಾರವಾಗಿ ವರ್ಗಾಯಿಸಬಹುದಾದ ಒಂಟಿ ಮತದ ಮೂಲಕ ಸದನವು ತನ್ನ ಸದಸ್ಯರ ಪೈಕಿ ಚುನಾಯಿಸಿದ 10 ಇತರ ಸದಸ್ಯರು ಇರತಕ್ಕುದು. | ನಿಯಮ 283(1)ರ ಪದಗಳ ನಂತರ ಈ ಕೆಳಗಿನ ಪದಗಳನ್ನು ಸೇರಿಸಿಕೊಳ್ಳತಕ್ಕದ್ದು.<br>"ಪರಂತು, ಯಾರೇ ಮಂತ್ರಿಯು ಸಮಿತಿಯ ಸದಸ್ಯರಾಗಿ ಚುನಾಯಿತರಾಗತಕ್ಕುದಲ್ಲ ಮತ್ತು ಸಮಿತಿಗೆ ಚುನಾಯಿತರಾದ ಮೇಲೆ ಯಾರೇ ಸದಸ್ಯರು ಮಂತ್ರಿಯಾಗಿ ನೇಮಕಗೊಂಡರೆ ಅವರು ಆ ರೀತಿ ನೇಮಕವಾದ ದಿನಾಂಕದಿಂದ ಸಮಿತಿಯ ಸದಸ್ಯರಾಗಿರುವುದು ನಿಂತುಹೋಗತಕ್ಕುದು". |
| **ಸಭೆಯ ಮುಂದಿಡಲಾಗುವ ಕಾಗದ ಪತ್ರಗಳ ಸಮಿತಿ**<br>ನಿಯಮ 290(2) ಸಮಿತಿಯ ರಚನೆ (ಪುಟ ಸಂಖ್ಯೆ: 124);<br>ಸಮಿತಿಯು 20 ಸದಸ್ಯರನ್ನು ಒಳಗೊಂಡಿರತಕ್ಕದು. ಈ ಪೈಕಿ 15 ಸದಸ್ಯರನ್ನು ವಿಧಾನಸಭೆಯ ಅಧ್ಯಕ್ಷರು ನಾಮನಿರ್ದೇಶನ ಮೂಲಕ ಹಾಗೂ 5 ಸದಸ್ಯರನ್ನು ವಿಧಾನಪರಿಷತ್ತಿನ ಸಭಾಪತಿಯವರು ನಾಮನಿರ್ದೇಶನ ಮೂಲಕ ನೇಮಕ ಮಾಡತಕ್ಕುದು. | ನಿಯಮ 290(2)ರ ಪದಗಳ ನಂತರ ಈ ಕೆಳಗಿನ ಪದಗಳನ್ನು ಸೇರಿಸಿಕೊಳ್ಳತಕ್ಕದ್ದು.<br>"ಪರಂತು, ಯಾರೇ ಮಂತ್ರಿಯು ಸಮಿತಿಯ ಸದಸ್ಯರಾಗಿ ಚುನಾಯಿತರಾಗತಕ್ಕುದಲ್ಲ ಮತ್ತು ಸಮಿತಿಗೆ ಚುನಾಯಿತರಾದ ಮೇಲೆ ಯಾರೇ ಸದಸ್ಯರು ಮಂತ್ರಿಯಾಗಿ ನೇಮಕಗೊಂಡರೆ ಅವರು ಆ ರೀತಿ ನೇಮಕವಾದ ದಿನಾಂಕದಿಂದ ಸಮಿತಿಯ ಸದಸ್ಯರಾಗಿರುವುದು ನಿಂತುಹೋಗತಕ್ಕುದು". |
| **ಸದನ ಸಮಿತಿ (ಅಧ್ಯಾಯ –XXVII)**<br>ನಿಯಮ 370(1) ಸದನದ ಸದಸ್ಯರ ಅನುಕೂಲ ಮತ್ತು ಸೌಕರ್ಯಕ್ಕಾಗಿ ಸಂಬಂಧಿಸಿದ ಎಲ್ಲಾ ವಿಷಯಗಳನ್ನು | ನಿಯಮ 370(1)ರ ಪದಗಳ ನಂತರ ಈ ಕೆಳಗಿನ ಪದಗಳನ್ನು ಸೇರಿಸಿಕೊಳ್ಳತಕ್ಕದ್ದು. |

| ಅಸ್ತಿತ್ವದಲ್ಲಿರುವ ನಿಯಮಗಳು | ಸಮಿತಿಯ ಶಿಫಾರಸ್ಸಿನಂತೆ ತಿದ್ದುಪಡಿಯಾದ ನಿಯಮಗಳು |
|---|---|
| ಪರಿಶೀಲಿಸಲು ಮತ್ತು ಆ ಬಗ್ಗೆ ಸಲಹೆ ನೀಡಲು ಒಂದು ಸದನ ಸಮಿತಿಯನ್ನು ರಚಿಸತಕ್ಕುದು. | "ಪರಂತು, ಯಾರೇ ಮಂತ್ರಿಯು ಸಮಿತಿಯ ಸದಸ್ಯರಾಗಿ ಚುನಾಯಿತರಾಗತಕ್ಕುದಲ್ಲ ಮತ್ತು ಸಮಿತಿಗೆ ಚುನಾಯಿತರಾದ ಮೇಲೆ ಯಾರೇ ಸದಸ್ಯರು ಮಂತ್ರಿಯಾಗಿ ನೇಮಕಗೊಂಡರೆ ಅವರು ಆ ರೀತಿ ನೇಮಕವಾದ ದಿನಾಂಕದಿಂದ ಸಮಿತಿಯ ಸದಸ್ಯರಾಗಿರುವುದು ನಿಂತುಹೋಗತಕ್ಕುದು". |
| **ಗ್ರಂಥಾಲಯ ಸಮಿತಿ (ಅಧ್ಯಾಯ – XXVII)**<br><br>ನಿಯಮ 371(1) ವಿಧಾನಸಭೆಯ ಮತ್ತು ವಿಧಾನ ಪರಿಷತ್ತಿನ ಪುಸ್ತಕ ಭಂಡಾರಕ್ಕೆ ಸಂಬಂಧಪಟ್ಟ ವಿಷಯಗಳನ್ನು ಪರಿಶೀಲಿಸಲು ಮತ್ತು ಆ ಬಗ್ಗೆ ಸಲಹೆ ನೀಡಲು ಅಧ್ಯಕ್ಷರು ಗ್ರಂಥಾಲಯ ಸಮಿತಿಯೊಂಧನ್ನು ರಚಿಸಬಹುದು.<br><br>ನಿಯಮ 371(2) ಈ ಸಮಿತಿಯಲ್ಲಿ ವಿಧಾನಸಭೆಯ ಅಧ್ಯಕ್ಷರು ಮತ್ತು ವಿಧಾನಪರಿಷತ್ತಿನ ಸಭಾಪತಿಯವರು ಮತ್ತು ಎಂಟು ಮಂದಿ ಸದಸ್ಯರು ಇರಬೇಕು. ಆ ಎಂಟು ಮಂದಿ ಸದಸ್ಯರ ಪೈಕಿ ಐದು ಮಂದಿ ಸದಸ್ಯರನ್ನು ವಿಧಾನಸಭೆಯಿಂದ ಅಧ್ಯಕ್ಷರು ನಾಮನಿರ್ದೇಶನ ಮಾಡಬೇಕು ಮತ್ತು ಮೂವರನ್ನು ವಿಧಾನಪರಿಷತ್ತಿನಿಂದ ಸಭಾಪತಿಯವರು ನಾಮ ನಿರ್ದೇಶನ ಮಾಡಬೇಕು. | <br><br>ನಿಯಮ 371(2)ರ ಪದಗಳ ನಂತರ ಈ ಕೆಳಗಿನ ಪದಗಳನ್ನು ಸೇರಿಸಿಕೊಳ್ಳತಕ್ಕುದು.<br><br>"ಪರಂತು, ಮಂತ್ರಿಯನ್ನು ಸಮಿತಿಯ ಸದಸ್ಯರನ್ನಾಗಿ ನಾಮನಿರ್ದೇಶನ ಮಾಡತಕ್ಕುದಲ್ಲ. ಯಾರೇ ಸದಸ್ಯರು ಸಮಿತಿಯ ಸದಸ್ಯರಾಗಿ ನಾಮನಿರ್ದೇಶನ ಮಾಡಿದ ತರುವಾಯ ಮಂತ್ರಿಯಾಗಿ ನೇಮಕಗೊಂಡರೆ, ನೇಮಕಾತಿಯ ದಿನಾಂಕದಿಂದ ಅವರು ಸಮಿತಿಯ ಸದಸ್ಯರಾಗಿರುವುದು ನಿಂತುಹೋಗತಕ್ಕುದು". |

**ಕೆ.ಜಿ.ಬೋಪಯ್ಯ**
ಸಭಾಧ್ಯಕ್ಷರು
ಕರ್ನಾಟಕ ವಿಧಾನ ಸಭೆ
**ಎಸ್.ಬಿ.ಪಾಟೀಲ್**
ಕಾರ್ಯದರ್ಶಿ
ಕರ್ನಾಟಕ ವಿಧಾನಸಭೆ

**ವಿಶೇಷ ಪತ್ರಿಕೆ**

| ಭಾಗ – IV-A | ಬೆಂಗಳೂರು, ಗುರುವಾರ, ಏಪ್ರಿಲ್ ೧, ೨೦೧೦ (ಚೈತ್ರ ೧೧, ಶಕ ವರ್ಷ ೧೯೩೨) | ನಂ. ೩೨೭ |
|---|---|---|

**URBAN DEVELOPMENT SECRETARIAT**

**NOTIFICATION**

**No. UDD 42 MLR 2010, Bangalore, dated : 31.03.2010**

The draft of the following rules further to amend the Karnataka Municipal Corporations (Elections) Rules, 1979 which the Government of Karnataka proposes to make, in exercise of the powers conferred by sections 421 read with section 55 of the Karnataka Municipal Corporations Act, 1976 (Karnataka Act 14 of 1977), is hereby published as required by sub-section (1) of section 421 of the said Act for the information of all persons likely to be affected thereby and notice is hereby given that the said draft will be taken into consideration after fifteen days from the date of its publication in the Official Gazette.

Any objection or suggestion which may be received by the state Government from any person with respect to the said draft before the expiry of the period specified above, will be considered by the State Government. Objections and suggestions may be addressed to the Principal Secretary to Government, Urban Development Department, Vikasa Soudha, Bangalore – 560 001.

**DRAFT RULES**

**1. Title and Commencement.-** (1) These rules may be called the Karnataka Municipal Corporations (Elections) (Amendment) Rules, 2010.

(2) They shall come into force from the date of their publication in the official Gazette.

**2. Substitution of rule 71,-** For rule 71 of the Karnataka Municipal Corporations (Elections) Rules, 1979 the following shall be substituted, namely:-

"**71. Presenting officer for Election of Mayor and Deputy Mayor.-** The Regional Commissioner of the respective division shall be the Presiding Officer (herein after referred to as Presiding Officer) in the first meeting of the Corporation held after the general election and in every subsequent meeting, held for the purpose of election of Mayor and Deputy Mayor."

By order and in the name of Governor of Karnataka,
**C.R.RAVINDRA**
Under Secretary to Government,
Urban Development Department.

## ವಿಶೇಷ ಪತ್ರಿಕೆ


| ಭಾಗ – IV-A | ಬೆಂಗಳೂರು, ಶನಿವಾರ, ಏಪ್ರಿಲ್ ೩, ೨೦೧೦ (ಚೈತ್ರ ೧೩, ಶಕ ವರ್ಷ ೧೯೩೨) | ನಂ. ೩೩೪ |
|---|---|---|


**ಕರ್ನಾಟಕ ವಿಧಾನ ಪರಿಷತ್ತಿನ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ: ವಿಪಸ/ಆಡಳಿತ–1/134/ವೃ ಮತ್ತು ನೇ/2003, ಬೆಂಗಳೂರು, ದಿ: 26ನೇ ಮಾರ್ಚ್, 2010**

ಕರ್ನಾಟಕ ವಿಧಾನ ಪರಿಷತ್ತಿನ ಸಚಿವಾಲಯದ ವಿಶೇಷ ಮಂಡಳಿಯು, ಕರ್ನಾಟಕ ರಾಜ್ಯ ಸಿವಿಲ್ ಸೇವಾ ಅಧಿನಿಯಮ, 1978 (1990ರ ಕರ್ನಾಟಕ ಅಧಿನಿಯಮ ಸಂಖ್ಯೆ: 14) ರ 8ನೇ ಪ್ರಕರಣದೊಂದಿಗೆ ಓದಲಾದ 3ನೇ ಪ್ರಕರಣದ (1)ನೇ ಉಪ ಪ್ರಕರಣದ ಮೂಲಕ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ ರಚಿಸಲು ಉದ್ದೇಶಿಸಿರುವ, ಕರ್ನಾಟಕ ವಿಧಾನ ಪರಿಷತ್ತಿನ ಸಚಿವಾಲಯದ (ನೇಮಕಾತಿ ಮತ್ತು ಸೇವಾ ಷರತ್ತುಗಳ) ನಿಯಮಗಳು, 2003ನ್ನು ತಿದ್ದುಪಡಿ ಮಾಡುವ ಈ ಕೆಳಕಂಡ ನಿಯಮಗಳ ಕರಡನ್ನು, ಅವುಗಳ ಪ್ರಕಟಣೆ ದಿನಾಂಕದಿಂದ 30 ದಿನದೊಳಗಾಗಿ, ಅವುಗಳಿಂದ ಬಾಧಿತರಾಗುವ ಸಂಭವವಿರುವ ವ್ಯಕ್ತಿಗಳಿಂದ ಆಕ್ಷೇಪಣೆಗಳು ಮತ್ತು ಸಲಹೆಗಳನ್ನು ಆಹ್ವಾನಿಸಿ, ಸದರಿ ಪ್ರಕರಣದ (2) ನೇ ಉಪ ಪ್ರಕರಣದ (ಎ) ಖಂಡದಲ್ಲಿ ಅಗತ್ಯ ಪಡಿಸಿದಂತೆ, ಕರ್ನಾಟಕ ರಾಜ್ಯಪತ್ರ 3, ವಿಶೇಷ ಸಂಚಿಕೆ, ದಿನಾಂಕ: 19.01.2010ರ IV-ಎ ಭಾಗದಲ್ಲಿ ಅಧಿಸೂಚನೆ ಸಂಖ್ಯೆ: ವಿಪಸ/ಆಡಳಿತ–1/134/ವೃ ಮತ್ತು ನೇ/2009, ದಿನಾಂಕ: 19ನೇ ಜನವರಿ 2010ರಲ್ಲಿ ಪ್ರಕಟಿಸಲಾಗಿದೆ.

ಸದರಿ ರಾಜ್ಯಪತ್ರವು ದಿನಾಂಕ: 19.01.2010 ರಂದು ಸಾರ್ವಜನಿಕರಿಗೆ ಲಭ್ಯವಾಗುವಂತೆ ಮಾಡಲಾಗಿದೆ.

ಯಾವುದೇ ಆಕ್ಷೇಪಣೆಗಳು ಮತ್ತು ಸಲಹೆಗಳು ಸ್ವೀಕೃತವಾಗಿರುವುದಿಲ್ಲ.

ಆದುದರಿಂದ, ಕರ್ನಾಟಕ ರಾಜ್ಯ ಸಿವಿಲ್ ಸೇವಾ ಅಧಿನಿಯಮ, 1978 (1990ರ ಕರ್ನಾಟಕ ಅಧಿನಿಯಮ 14) ರ 8ನೇ ಪ್ರಕರಣದೊಂದಿಗೆ ಓದಲಾದ 3ನೇ ಪ್ರಕರಣದ (1)ನೇ ಉಪ–ಪ್ರಕರಣದ ಮೂಲಕ ಮತ್ತು ಸದರಿ ಉಪ–ಪ್ರಕರಣದ ಎರಡನೇ ಪರಂತುಕದ ಮೂಲಕ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ವಿಧಾನ ಪರಿಷತ್ತಿನ ಸಚಿವಾಲಯವು ಈ ಕೆಳಕಂಡ ನಿಯಮಗಳನ್ನು ರಚಿಸುತ್ತದೆ.

**1) ಹೆಸರು ಮತ್ತು ಆರಂಭ:**

1. ಈ ನಿಯಮಗಳನ್ನು ಕರ್ನಾಟಕ ವಿಧಾನ ಪರಿಷತ್ತು ಸಚಿವಾಲಯ (ನೇಮಕಾತಿ ಮತ್ತು ಸೇವಾ ಷರತ್ತುಗಳು) (ತಿದ್ದುಪಡಿ) ನಿಯಮಗಳು, 2009 ಎಂದು ಕರೆಯತಕ್ಕದ್ದು.
2. ಸದರಿ ನಿಯಮಗಳು, ಅಧಿಕೃತ ರಾಜ್ಯಪತ್ರದಲ್ಲಿ ಅವುಗಳ ಪ್ರಕಟಣೆಯ ದಿನಾಂಕದಿಂದ ಜಾರಿಗೆ ಬರತಕ್ಕದ್ದು.

**2) ನಿಯಮ 7ಕ್ಕೆ ತಿದ್ದುಪಡಿ:**

ಕರ್ನಾಟಕ ವಿಧಾನ ಪರಿಷತ್ತು ಸಚಿವಾಲಯ (ನೇಮಕಾತಿ ಮತ್ತು ಸೇವಾ ಷರತ್ತುಗಳ) ನಿಯಮಗಳು 2003ರಲ್ಲಿ ನಿಯಮ 7ಕ್ಕೆ ಬದಲಾಗಿ ಈ ಮುಂದಿನ ವಿವರವನ್ನು ಸೇರಿಸತಕ್ಕದ್ದು.

**"7. ಸಂಸದೀಯ ಪದಾಧಿಕಾರಿಗಳ ಆಪ್ತ ಸಿಬ್ಬಂದಿ":**

(i) ವಿಧಾನ ಪರಿಷತ್ತಿನ ಸಭಾಪತಿ, ಉಪ ಸಭಾಪತಿ, ವಿರೋಧ ಪಕ್ಷದ ನಾಯಕರು, ಸರ್ಕಾರದ ಮುಖ್ಯ ಸಚೇತಕರು ಮತ್ತು ವಿರೋಧ ಪಕ್ಷದ ಮುಖ್ಯ ಸಚೇತಕರ (ಇಲ್ಲಿ ಇನ್ನು ಮುಂದೆ ಸಂಸದೀಯ ಪದಾಧಿಕಾರಿಗಳೆಂದು ಉಲ್ಲೇಖಿಸಲಾಗಿದೆ) ಆಪ್ತ ಸಿಬ್ಬಂದಿವರ್ಗವು ಈ ಮುಂದೆ ಹೇಳಲಾದ ಸಿಬ್ಬಂದಿ ವರ್ಗವನ್ನು ಒಳಗೊಂಡಿರತಕ್ಕದ್ದು ಮತ್ತು ಆ ಸಿಬ್ಬಂದಿಯನ್ನು ರಾಜ್ಯ ಸಿವಿಲ್ ಸೇವೆಗಳ ಯಾವುದೇ ಕೇಡರ್‌ನ ಯಾವುದೇ ತತ್ಸಮಾನ ದರ್ಜೆಯಿಂದ ಪ್ರತಿ ನಿಯೋಜನೆ ಮೂಲಕ ಭರ್ತಿ ಮಾಡಬಹುದು.

ಆಪ್ತ ಕಾರ್ಯದರ್ಶಿ : 1 – (ಸಮೂಹ–ಬಿ ಮತ್ತು ಅದಕ್ಕೆ ಮೇಲ್ದರ್ಜೆಯ ಅಧಿಕಾರಿ)

| | | |
|---|---|---|
| ಲಿಪಿಕ ಸಿಬ್ಬಂದಿ | : | 4– (ಹಿರಿಯ ಸಹಾಯಕ/ಸಹಾಯಕ/ಶೀಘ್ರಲಿಪಿಗಾರ/ ಬೆರಳಚ್ಚುಗಾರ/ ಕಿರಿಯ ಸಹಾಯಕ/ ಯಾರೇ ಇತರ ಸಮೂಹ "ಸಿ" ನೌಕರರು) |
| ಕನ್ನಡ ಶೀಘ್ರಲಿಪಿಗಾರ | : | 1 |
| ವಾಹನ ಚಾಲಕರು | : | 2 |
| ಸಮೂಹ " ಡಿ" ನೌಕರರು | : | 4 (ಇಬ್ಬರು ಸೈಕಲ್ ಆರ್ಡರ್ಲಿಗಳು ಸೇರಿದಂತೆ) |

(ii) ಮೇಲ್ಕಂಡ ಸಿಬ್ಬಂದಿಯ ಜೊತೆಗೆ, ಮಾನ್ಯ ಸಭಾಪತಿಯವರ ಆಪ್ತ ಸಿಬ್ಬಂದಿ ವರ್ಗದಲ್ಲಿ ಈ ಮುಂದಿನವರು ಒಳಗೊಂಡಿರತಕ್ಕದ್ದು:–

(ಎ) ಮಾನ್ಯ ಸಭಾಪತಿಯವರ ಕಾರ್ಯದರ್ಶಿಯ ಹುದ್ದೆ: ಈ ಹುದ್ದೆಗೆ ಕರ್ನಾಟಕ ವಿಧಾನ ಪರಿಷತ್ತಿನ ಸಚಿವಾಲಯದ ಎ ಗುಂಪಿನ ಅಧಿಕಾರಿಗಳ ಪೈಕಿ ಉಪ ಕಾರ್ಯದರ್ಶಿ ದರ್ಜೆಗಿಂತ ಕೆಳದರ್ಜೆಯವರಲ್ಲದ ವ್ಯಕ್ತಿಯನ್ನು ನೇಮಕ ಮಾಡುವುದು;

(ಬಿ) ಸಭಾಪತಿಯವರ ವಿಶೇಷ ಕರ್ತವ್ಯಾಧಿಕಾರಿಯ ಒಂದು ಹುದ್ದೆ: ಈ ಹುದ್ದೆಯನ್ನು ಸಮೂಹ " ಬಿ" ಮತ್ತು ಅದಕ್ಕೆ ಮೇಲ್ಪಟ್ಟು ದರ್ಜೆಯ ಅಧಿಕಾರಿಗಳ ಪೈಕಿಯಿಂದ ನೇಮಕ ಮಾಡುವುದು;

(ಸಿ) ಅಡಿಗೆ ಕೆಲಸದವರು : ಒಂದು ಹುದ್ದೆ

(iii) ಈ ನಿಯಮಗಳಲ್ಲಿ ಏನೇ ಒಳಗೊಂಡಿದ್ದರೂ ಸಭಾಪತಿಯವರು, ಸಾರ್ವಜನಿಕ ಹಿತದೃಷ್ಟಿಯಿಂದ, ಸಂಸದೀಯ ಪದಾಧಿಕಾರಿಗಳ ಆಪ್ತ ಸಿಬ್ಬಂದಿ ಶಾಖೆಯಲ್ಲಿನ ಹುದ್ದೆಗಳ ಪ್ರವರ್ಗಕ್ಕೆ, ಅವರ ಅಭಿಪ್ರಾಯದಲ್ಲಿ ಅಂಥ ಹುದ್ದೆಗಳ ಕರ್ತವ್ಯಗಳನ್ನು ನಿರ್ವಹಿಸಲು ಸಮರ್ಥರಾಗಿರುವ, ಸರ್ಕಾರಿ ಅಥವಾ ಸಾರ್ವಜನಿಕ ಉದ್ಯಮಗಳ ಯಾರೇ ಅರ್ಹ ವ್ಯಕ್ತಿ ಅಥವಾ ನಿವೃತ್ತ ಅಧಿಕಾರಿ ಅಥವಾ ನೌಕರರನ್ನು ಕರಾರು ಆಧಾರದ ಮೇಲೆ ಮತ್ತು ಒಪ್ಪಂದದ ಮೂಲಕ ನಿರ್ಧರಿಸಬಹುದಾದಂಥ ನಿಬಂಧನೆಗಳು ಮತ್ತು ಷರತ್ತುಗಳ ಮೇಲೆ ನೇಮಕ ಮಾಡುವುದು ಅವಶ್ಯಕವೆಂದು ಪರಿಗಣಿಸಿದರೆ ಅವರು ಹಾಗೆ ನೇಮಕ ಮಾಡಬಹುದು ಮತ್ತು ಆ ಬಗ್ಗೆ ಕಾರಣಗಳನ್ನು ಲಿಖಿತದಲ್ಲಿ ದಾಖಲಿಸುವುದು.

(iv) ಉಪ ನಿಯಮ (i), (ii) ಮತ್ತು (iii) ರ ಮೇರೆಗೆ, ಮೇಲ್ಕಂಡ ಸಂಸದೀಯ ಪದಾಧಿಕಾರಿಗಳ ಸಿಬ್ಬಂದಿ ಶಾಖೆಯಲ್ಲಿನ ಯಾರೇ ವ್ಯಕ್ತಿಯ ನೇಮಕಾತಿಯ ಒಟ್ಟು ಅವಧಿಯು, ವಿಧಾನ ಪರಿಷತ್ತಿನ ಸಂಸಧೀಯ ಪದಾಧಿಕಾರಿಗಳ ಪದಾವಧಿಯೊಂದಿಗೆ ಒಟ್ಟಿಗೆ ಮುಕ್ತಾಯವಾಗತಕ್ಕದ್ದು.

ವಿಶೇಷ ಮಂಡಳಿಯ ಆದೇಶಾನುಸಾರ
**ವಿ. ಶ್ರೀಶ್**
ಕಾರ್ಯದರ್ಶಿ
ಕರ್ನಾಟಕ ವಿಧಾನ ಪರಿಷತ್ತು.

**KARNATAKA LEGISLATIVE COUNCIL SECRETARIAT**

**NOTIFICATION**

**No. LCS/ADM-1/134/C&R/2003, Bangalore, dated: 26th March, 2010**

Whereas the draft of the following rules to amend the Karnataka Legislative Council Secretariat ( Recruitment and Conditions of Service) Rules, 2003, which the Special Board of Karnataka Legislative Council Secretariat proposes to make in exercise of the powers conferred by Sub-section (1) of Section 3 read with Section 8 of the Karnataka State Civil Services Act, 1978 (Karnataka Act No. 14 of 1990) were published as required by clause (a) of Sub-section (2) of the said Section in Notification No. LCS/ADM-1/134/C&R/2009, dated: 19th January, 2010 in Part IV-A of the Karnataka Gazette3, Extraordinary dated: 19.01.2010, inviting objections and suggestions from persons likely to be affected thereby within 30 days form the date of its publication.

Whereas the said Gazette was made available to the public on **19.01.2010.**

No Objections and suggestions have been received.

Now, therefore, in exercise of the powers conferred by sub-section (1) of section 3 read with Section 8 of the Karnataka State Civil Services Act, 1978 (Karnataka Act 14 of 1990) read with the second proviso to the said sub-section, the Karnataka Legislative Council Secretariat hereby makes the following rules.

**1. Title and Commencement:**

(1) These rules may be called the Karnataka Legislative Council Secretariat (Recruitments and Conditions of service) (Amendment) Rules, 2009.

(2) They Shall come into force from the date of their publication in the Official Gazette.

**2. Amendment of Rule 7:-**In the Karnataka Legislative Council Secretariat **(**Recruitments and Conditions of service) Rules, 2003 for Rule 7, the following shall be substituted, namely:-

**7. Personal Establishment of Parliamentary Functionaries :**

**(i)** The Personal Establishment **of The Chairman, the Deputy Chairman, the Leader of Opposition, the Government Chief whip, and the Opposition Chief whip** in the Legislative Council ( hereinafter referred to as Parliamentary Functionaries) shall consist of the following staff and may be filled by deputation from any equivalent grade borne on the cadres of any of the State Civil Services, namely:

| | | |
|---|---|---|
| Private Secretary | : | 1 (Officer of the rank of Group –B and above) |
| Clerical Staff | : | 4 (Senior Assistant or Assistant or Stenographer or Typist or Junior Assistant or any other Group "C" Officials) |
| Kannada Stenographer | : | 1 |
| Drivers | : | 2 |
| Group "D" Officials | : | 4 (including two Cycle Orderlies) |

(ii) In addition to the above staff, the Personal Establishment of the Chairman shall consist of;

(a) the post of Secretary to Chairman to be filled from among the Group "A" Officers of the Karnataka Legislative Council Secretariat not below the rank of Deputy Secretary

(b) One post of Officer on Special Duty to Chairman to be filled from among the Officers of the rank of Group B and above;

(c) One post of Cook.

(iii) Notwithstanding anything contained in these rules the Chairman may, if he considers it necessary for reasons to be recorded in writing, that it is in the public interest so to do, appoint to the category of posts in the personal establishment of the Parliamentary Functionaries, by any qualified person or retired Officer or Official of the Government or Public undertakings who is in his opinion, is able to discharge the duties of such posts on contract basis and on such terms and conditions as may be determined by agreement.

(iv) The total period of appointment of any person in the establishment of above Parliamentary Functionaries, under sub-rule (i), (ii) and (iii) shall be for a period coterminous with the tenure of office of the Parliamentary Functionaries in the Legislative Council.

BY ORDER OF THE SPECIAL BOARD
**V. SHREESH**
Secretary
Karnataka Legislative Council

**ವಿಶೇಷ ಪತ್ರಿಕೆ**

| ಭಾಗ – IV-A | ಬೆಂಗಳೂರು, ಶನಿವಾರ, ಏಪ್ರಿಲ್ ೩, ೨೦೧೦ (ಚೈತ್ರ ೧೩, ಶಕ ವರ್ಷ ೧೯೩೨) | ನಂ. ೩೩೬ |
|---|---|---|

**ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನಾ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ: ಸಂವ್ಯಶಾಇ 26 ಶಾಸನ 2009, ಬೆಂಗಳೂರು, ದಿನಾಂಕ: 3ನೇ ಏಪ್ರಿಲ್, 2010**

ತೋಟಗಾರಿಕೆ ವಿಜ್ಞಾನಗಳ ವಿಶ್ವವಿದ್ಯಾಲಯ ಅಧಿನಿಯಮ, 2009ಕ್ಕೆ 2010ರ ಏಪ್ರಿಲ್ ಒಂದನೇ ದಿನಾಂಕದಂದು ರಾಜ್ಯಪಾಲರ ಒಪ್ಪಿಗೆ ದೊರೆತಿದ್ದು, ಸಾಮಾನ್ಯ ತಿಳುವಳಿಕೆಗಾಗಿ ಇದನ್ನು 2010ರ ಕರ್ನಾಟಕ ಅಧಿನಿಯಮ ಸಂಖ್ಯೆ: 11 ಎಂಬುದಾಗಿ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಿಸಬೇಕೆಂದು ಆದೇಶಿಸಲಾಗಿದೆ.

**2010ರ ಕರ್ನಾಟಕ ಅಧಿನಿಯಮ ಸಂಖ್ಯೆ: 11**

(2010ರ ಏಪ್ರಿಲ್ ಮೂರನೇ ದಿನಾಂಕದಂದು ಕರ್ನಾಟಕ ರಾಜ್ಯ ಪತ್ರದ ವಿಶೇಷ ಸಂಚಿಕೆಯಲ್ಲಿ ಮೊದಲು ಪ್ರಕಟವಾಗಿದೆ)

**ತೋಟಗಾರಿಕೆ ವಿಜ್ಞಾನಗಳ ವಿಶ್ವವಿದ್ಯಾಲಯ ಅಧಿನಿಯಮ, 2009**

**(2010ರ ಏಪ್ರಿಲ್ ಒಂದನೇ ದಿನಾಂಕದಂದು ರಾಜ್ಯಪಾಲರ ಅನುಮತಿಯನ್ನು ಪಡೆಯಲಾಗಿದೆ)**

ಕರ್ನಾಟಕ ರಾಜ್ಯದಲ್ಲಿ ಒಂದು ಪ್ರತ್ಯೇಕ ತೋಟಗಾರಿಕೆ ವಿಶ್ವವಿದ್ಯಾಲಯವನ್ನು ಸ್ಥಾಪಿಸುವುದಕ್ಕಾಗಿ ಮತ್ತು ನಿಗಮಿತಗೊಳಿಸುವುದಕ್ಕಾಗಿ ಹಾಗೂ ಅದಕ್ಕೆ ಸಂಬಂಧಪಟ್ಟ ವಿಷಯಗಳಿಗಾಗಿ ಉಪಬಂಧಕಲ್ಪಿಸಲು ಒಂದು ಅಧಿನಿಯಮ;

ಕರ್ನಾಟಕ ರಾಜ್ಯದಲ್ಲಿ ಒಂದು ಪ್ರತ್ಯೇಕ ತೋಟಗಾರಿಕೆ ವಿಶ್ವವಿದ್ಯಾಲಯವನ್ನು ಸ್ಥಾಪಿಸುವುದಕ್ಕಾಗಿ ಮತ್ತು ಅದಕ್ಕೆ ಸಂಬಂಧಪಟ್ಟ ಅಥವಾ ಅದಕ್ಕೆ ಪ್ರಾಸಂಗಿಕವಾದ ವಿಷಯಗಳಿಗಾಗಿ ಉಪಬಂಧಕಲ್ಪಿಸುವುದು ಯುಕ್ತವಾಗಿರುವುದರಿಂದ;

ಇದು ಭಾರತ ಗಣರಾಜ್ಯದ ಐವತ್ತೊಂಭತ್ತನೇ ವರ್ಷದಲ್ಲಿ ಕರ್ನಾಟಕ ರಾಜ್ಯ ವಿಧಾನಮಂಡಲದಿಂದ ಈ ಮುಂದಿನಂತೆ ಅಧಿನಿಯಮಿತವಾಗಲಿ:-

## ಅಧ್ಯಾಯ - I

## ಪ್ರಾರಂಭಿಕ

**1. ಸಂಕ್ಷಿಪ್ತ ಹೆಸರು ಮತ್ತು ಪ್ರಾರಂಭ:-** (1) ಈ ಅಧಿನಿಯಮವನ್ನು ತೋಟಗಾರಿಕೆ ವಿಜ್ಞಾನಗಳ ವಿಶ್ವವಿದ್ಯಾಲಯ ಅಧಿನಿಯಮ, 2009 ಎಂದು ಕರೆಯತಕ್ಕದ್ದು.

(2) ಇದು, 2008ರ ನವೆಂಬರ್ 22ನೇ ದಿನಾಂಕದಿಂದ ಜಾರಿಗೆ ಬಂದಿರುವುದಾಗಿ ಭಾವಿಸತಕ್ಕದ್ದು.

**2. ಪರಿಭಾಷೆಗಳು.**- ಈ ಅಧಿನಿಯಮದಲ್ಲಿ ಸಂದರ್ಭವು ಅನ್ಯಥಾ ಅಗತ್ಯಪಡಿಸಿದ ಹೊರತು,-

(1) "ವಿದ್ಯಾವಿಷಯಕ ಪರಿಷತ್ತು (ಅಕಾಡೆಮಿಕ್ ಕೌನ್ಸಿಲ್)" ಎಂದರೆ, ವಿಶ್ವವಿದ್ಯಾಲಯದ ವಿದ್ಯಾವಿಷಯಕ ಪರಿಷತ್ತು;

(2) "ಸಂಯೋಜಿತ ಕಾಲೇಜು" ಎಂದರೆ, ವಿಶ್ವವಿದ್ಯಾಲಯದ ಅಧಿಕಾರ ಕ್ಷೇತ್ರದಲ್ಲಿ ಇರುವ ಮತ್ತು ನಿಯಮಿಸಲಾದ ಶಾಸನಗಳಿಗೆ ಅನುಸಾರವಾಗಿ ವಿಶ್ವವಿದ್ಯಾಲಯಕ್ಕೆ ಸಂಯೋಜಿತವಾದ ಮತ್ತು ವಿಶ್ವವಿದ್ಯಾಲಯದ ಪದವಿಗಳು, ಡಿಪ್ಲೋಮಾಗಳು ಅಥವಾ ಇತರ ಶೈಕ್ಷಣಿಕ ಪ್ರಶಸ್ತಿಗಳಿಗಾಗಿ ನಡೆಸುವ ಪರೀಕ್ಷೆಗಳಿಗೆ ಪ್ರವೇಶ ಪಡೆಯಲು ಅವಶ್ಯವಾದ ವ್ಯಾಸಂಗ ಕ್ರಮಗಳನ್ನು ಒದಗಿಸುವ ಕಾಲೇಜು ಅಥವಾ ಸಂಸ್ಥೆ;

(3) "ಪ್ರಾಧಿಕಾರ" ಎಂದರೆ, 12ನೇ ಪ್ರಕರಣದಲ್ಲಿ ನಿರ್ದಿಷ್ಟಪಡಿಸಲಾದ ವಿಶ್ವವಿದ್ಯಾಲಯದ ಯಾವುದೇ ಪ್ರಾಧಿಕಾರ;

(4) "ಮಂಡಳಿ" ಎಂದರೆ, ವಿಶ್ವವಿದ್ಯಾಲಯದ ವ್ಯವಸ್ಥಾಪನಾ ಮಂಡಳಿ;

(5) "ಅಧ್ಯಯನ ಮಂಡಳಿ" ಎಂದರೆ ಫ್ಯಾಕಲ್ಟಿ ಹಂತದಲ್ಲಿ ವಿದ್ಯಾ ವ್ಯವಹಾರಗಳ ಸಮಿತಿ;

(6) "ಕ್ಯಾಂಪಸ್" ಎಂದರೆ ತೋಟಗಾರಿಕೆಗೆ ಸಂಬಂಧಿಸಿದಂತೆ ಬೋಧನೆ, ಸಂಶೋಧನೆ ಮತ್ತು ವಿಸ್ತರಣಾ ಚಟುವಟಿಕೆಗೆ ಸಂಬಂಧಿಸಿದ ಕಾಲೇಜು, ವಿದ್ಯಾರ್ಥಿನಿಲಯಗಳು, ಸಿಬ್ಬಂದಿ ನಿವಾಸಗಳು, ಹೊಲಭೂಮಿಗಳು, ಮತ್ತಿತರ ಸೊತ್ತುಗಳನ್ನು ಒಳಗೊಳ್ಳುವ ಒಂದು ಆವರಣ;

(7) "ಕಾಲೇಜು" ಎಂದರೆ, ವಿಶ್ವವಿದ್ಯಾಲಯದ ನೇರ ಆಡಳಿತದ ಅಡಿಯಲ್ಲಿ ಬರುವ ಮತ್ತು ಅದರ ವ್ಯವಸ್ಥಾಪನೆ ಅಡಿಯಲ್ಲಿ ಬರುವ ಕೇಂದ್ರ ಕಾರ್ಯಸ್ಥಾನದಲ್ಲಿ, ಕ್ಯಾಂಪಸ್‌ನಲ್ಲಿ ಅಥವಾ ಯಾವುದೇ ಇತರ ಸ್ಥಳದಲ್ಲಿ ಇರುವಂಥ ಘಟಕ ಕಾಲೇಜು;

(8) "ಕುಲಾಧಿಪತಿ"ಎಂದರೆ ವಿಶ್ವವಿದ್ಯಾಲಯದ ಕುಲಾಧಿಪತಿ;

(9) "ಲೆಕ್ಕ ನಿಯಂತ್ರಕರು " ಎಂದರೆ ವಿಶ್ವವಿದ್ಯಾಲಯದ ಲೆಕ್ಕ ನಿಯಂತ್ರಕರು;

(10) "ಡೀನ್" ಎಂದರೆ, ವಿಶ್ವವಿದ್ಯಾಲಯದ ಘಟಕ ಕಾಲೇಜಿನ ಅಥವಾ ಸ್ನಾತಕೋತ್ತರ ಅಧ್ಯಯನ ಕೇಂದ್ರದ ಮುಖ್ಯಸ್ಥ;

(11) "ಡೀನ್ - ವಿದ್ಯಾರ್ಥಿ ಕ್ಷೇಮಾಭಿವೃದ್ಧಿ" ಎಂದರೆ ವಿದ್ಯಾರ್ಥಿ ಕ್ಷೇಮಾಭಿವೃದ್ಧಿ, ಸಲಹೆ ನೀಡಿಕೆ ಮತ್ತು ವಿದ್ಯಾರ್ಥಿಗಳ ಉದ್ಯೋಗ ನಿಯೋಜನೆಯ ಡೀನ್;

(12) "ನಿರ್ದೇಶಕ" ಎಂಬುದು ವಿದ್ಯಾ ನಿರ್ದೇಶಕರು, ಸಂಶೋಧನಾ ನಿರ್ದೇಶಕರು ಮತ್ತು ವಿಸ್ತರಣಾ ನಿರ್ದೇಶಕರನ್ನು ಒಳಗೊಂಡಿರುತ್ತದೆ;

(13) "ದೂರ ಶಿಕ್ಷಣ" ಎಂದರೆ ವ್ಯಾಸಂಗ ಕ್ರಮಗಳನ್ನು ಖುದ್ದು ಹಾಜರಾಗಿ ಕಲಿಯಲಾಗದ ಭೌತಿಕವಾಗಿ ಬೋಧನಾ ಸ್ಥಳದಿಂದ ದೂರ ಇರುವಂಥ ವಿದ್ಯಾರ್ಥಿಗಳಿಗೆ ಶಿಕ್ಷಣವನ್ನು ತಲುಪಿಸುವ ಉದ್ದೇಶವುಳ್ಳ ಶಿಕ್ಷಣ ಕ್ಷೇತ್ರ. ಇಲ್ಲಿ ಅಧ್ಯಾಪಕರು ಮತ್ತು ವಿದ್ಯಾರ್ಥಿಗಳು ತಮಗೆ ಅನುಕೂಲವಾದಂಥ ಸಮಯದಲ್ಲಿ ಮುದ್ರಿತ/ವಿದ್ಯುನ್ಮಾನ/ಅಥವಾ ಇತರ ತಾಂತ್ರಿಕ ಮಾಧ್ಯಮಗಳ ಮೂಲಕ ವಿಚಾರ ವಿನಿಮಯ ಮಾಡಿ ಪರಸ್ಪರ ಸಂವಾದ ನಡೆಸಬಹುದು;

(14) "ವಿಸ್ತರಣಾ ಶಿಕ್ಷಣ ಪರಿಷತ್ತು" ಎಂದರೆ, ವಿಶ್ವವಿದ್ಯಾನಿಲಯದ ವಿಸ್ತರಣಾ ಶಿಕ್ಷಣ ಪರಿಷತ್ತು;

(15) "ವಿಸ್ತರಣಾ ಶಿಕ್ಷಣ" ಎಂದರೆ, ತೋಟಗಾರಿಕೆ ಮತ್ತು ಸಂಬಂಧಪಟ್ಟ ವಿಜ್ಞಾನಗಳು ಹಾಗೂ ತೋಟಗಾರಿಕೆ ಉತ್ಪಾದನೆಗಳು ಮತ್ತು ಉತ್ಪನ್ನಗಳ ಮಾರಾಟಕ್ಕೆ ಸಂಬಂಧಿಸಿದ ವೈಜ್ಞಾನಿಕ ತಂತ್ರಜ್ಞಾನದ ವಿವಿಧ ಹಂತಗಳಿಗೆ ಸಂಬಂಧಪಟ್ಟ ರೈತರು, ಗೃಹಿಣಿಯರು, ಉದ್ಯಮಿಗಳು ಮತ್ತಿತರ ಸಮೂಹಗಳಿಗೆ ತರಬೇತಿಯನ್ನು ನೀಡುವುದಕ್ಕಾಗಿ ಸಂಬಂಧಪಟ್ಟ ಶೈಕ್ಷಣಿಕ ಚಟುವಟಿಕೆಗಳು ಮತ್ತು ಇದು ವಿಶ್ವವಿದ್ಯಾಲಯದ ವಿಭಾಗಗಳು, ವಿಜ್ಞಾನ ಕೇಂದ್ರಗಳು ಮತ್ತು ಅದಕ್ಕೆ ಸಂಯೋಜಿತವಾದ ಕಾಲೇಜುಗಳ ಮೂಲಕ ಹೊಸ ಹೊಸ ತಂತ್ರಜ್ಞಾನಗಳು ಮತ್ತು ಸಂಶೋಧನೆಗಳನ್ನು ಹೊಲಗಳು ಮತ್ತು ಹೊಲಮನೆಗಳ ಬಾಗಿಲುಗಳಿಗೆ ಕೊಂಡೊಯ್ಯುವಂಥ ಪ್ರಾತ್ಯಕ್ಷಿಕೆಗಳನ್ನೂ ಒಳಗೊಳ್ಳುತ್ತದೆ;

(16) "ಫ್ಯಾಕಲ್ಟಿ" ಎಂದರೆ, ಅಧ್ಯಾದೇಶ ಮತ್ತು ಶಾಸನಗಳಲ್ಲಿ ನಿರ್ದಿಷ್ಟವಾಗಿ ಹೇಳಿರುವ ವಿಶ್ವವಿದ್ಯಾಲಯದ ಫ್ಯಾಕಲ್ಟಿ;

(17) "ಸರ್ಕಾರ" ಎಂದರೆ ಕರ್ನಾಟಕ ಸರ್ಕಾರ;

(18) "ವಿಭಾಗ ಮುಖ್ಯಸ್ಥ" ಎಂದರೆ ವಿಶ್ವವಿದ್ಯಾಲಯ ಮತ್ತು ಘಟಕ ಕಾಲೇಜುಗಳ ಒಂದು ವಿಭಾಗದ ಮುಖ್ಯಸ್ಥ;

(19) "ತೋಟಗಾರಿಕೆ" ಎಂಬುದು,

(ಎ) ತರಕಾರಿಗಳು, ಹಣ್ಣುಗಳು, ಹೂ, ಸಾಂಬಾರ ಪದಾರ್ಥಗಳು ನೆಡುತೋಪು ಬೆಳೆಗಳು, ಔಷಧೀಯ ಮತ್ತು ಸುಗಂಧ ಸಸ್ಯಗಳು ಮುಂತಾದ ತೋಟಗಾರಿಕೆ ಬೆಳೆಗಳ ಎಲ್ಲಾ ಅಂಶಗಳು;

(ಬಿ) ಕೃಷಿ ಬೆಳೆಗಳು;

(ಸಿ) ಪ್ರಾಕೃತಿಕ ಸಂಪನ್ಮೂಲ ನಿರ್ವಹಣೆ;

(ಡಿ) ಭೂಸಾರ ಮತ್ತು ಜಲನಿಧಿ ನಿರ್ವಹಣೆ;

(ಇ) ಉತ್ಪಾದನೆ ಮತ್ತು ಸಂರಕ್ಷಣೆಯೂ ಸೇರಿದಂತೆ ಬೆಳೆ ಸುಧಾರಣೆ;

(ಎಫ್) ನೀರಾವರಿ ಮತ್ತು ಕಳೆ ನಿರ್ವಹಣೆ;

(ಜಿ) ಬೀಜ ಮತ್ತು ಸಸಿ ಸಾಮಾಗ್ರಿಗಳ ಉತ್ಪಾದನೆ;

(ಎಚ್) ಭೂಬಳಕೆ ಯೋಜನೆ ಮತ್ತು ನಿರ್ವಹಣೆ;

(ಐ) ಭೂ-ಪ್ರಸಾಧನ ಕಲೆ;

(ಜೆ) ತೋಟದ ಮರಗಳ ಕೃಷಿ, ಫಾರಂ ವನ ವಿಜ್ಞಾನ ಮತ್ತು ಅರಣ್ಯ ಹಾಗೂ ವನ್ಯಜೀವಿ ನಿರ್ವಹಣೆ;

(ಕೆ) ತೋಟಗಾರಿಕೆ ಅರ್ಥಶಾಸ್ತ್ರ;

(ಎಲ್) ಮಾರಾಟಗಾರಿಕೆ, ಸಹಕಾರ ಮತ್ತು ವ್ಯವಹಾರ ನಿರ್ವಹಣೆ;

(ಎಂ) ಆಹಾರ ವಿಜ್ಞಾನ ಮತ್ತು ತಂತ್ರಜ್ಞಾನ;

(ಎನ್) ಸಂಸ್ಕರಣೆಯೂ ಸೇರಿದಂತೆ ಸುಗ್ಗಿ ತರುವಾಯದ ನಿರ್ವಹಣೆ;

(ಒ) ಜೈವಿಕ ತಂತ್ರಜ್ಞಾನ;

(ಪಿ) ಅಣಬೆ ಕೃಷಿ;

(ಕ್ಯೂ) ತೋಟಗಾರಿಕೆ ಇಂಜಿನಿಯರಿಂಗ್;

(ಆರ್) ಕೋಳಿ ಸಾಗಾಣಿಕೆಯೂ ಸೇರಿದಂತೆ ಪಶು ವೈದ್ಯಕೀಯ ಮತ್ತು ಪ್ರಾಣಿ ವಿಜ್ಞಾನಗಳು;

(ಎಸ್) ಹೈನುಗಾರಿಕೆ ವಿಜ್ಞಾನ ಮತ್ತು ತಂತ್ರಜ್ಞಾನ;

(ಟಿ) ಮೀನು ಕೃಷಿ ಮತ್ತು ಮೀನುಗಾರಿಕೆ ನಿರ್ವಹಣೆ;

(ಯು) ಗ್ರಾಮೀಣಾಭಿವೃದ್ಧಿ;

(ವಿ) ಆಕರ ವಿಜ್ಞಾನಗಳು ಮತ್ತು ಮಾನವಿಕ ಶಾಸ್ತ್ರಗಳು;

(ಡಬ್ಲ್ಯೂ) ಜೇನು ಸಾಕಾಣಿಕೆ ;

(ಎಕ್ಸ್) ಸರ್ಕಾರ/ ಭಾರತೀಯ ಕೃಷಿ ಸಂಶೋಧನೆ ಪರಿಷತ್ತು ಸಲಹೆ ನೀಡುವ ತೋಟಗಾರಿಕೆಗೆ ಸಂಬಂಧಿಸಿದ ಯಾವುದೇ ಇತರ ವಿಷಯ.

– ಇವುಗಳ ಮೂಲಭೂತ ಮತ್ತು ಆನ್ವಯಿಕ ವಿಜ್ಞಾನಗಳು ಒಳಗೊಳ್ಳುತ್ತವೆ.

(20) "ತೋಟಗಾರಿಕೆ ಸಂಶೋಧನಾ ಕೇಂದ್ರ" ಎಂದರೆ ವಲಯ ತೋಟಗಾರಿಕೆ ಸಂಶೋಧನಾ ಕೇಂದ್ರ. ಪ್ರಮುಖ ತೋಟಗಾರಿಕೆ ಸಂಶೋಧನಾ ಕೇಂದ್ರ, ಪ್ರಾದೇಶಿಕ ತೋಟಗಾರಿಕೆ ಸಂಶೋಧನಾ ಕೇಂದ್ರ, ವಿಶ್ವವಿದ್ಯಾಲಯದ ತೋಟಗಾರಿಕೆ ಸಂಶೋಧನಾ ಕೇಂದ್ರ ಅಥವಾ ಇನ್ನಾವುದೇ ಸಂಶೋಧನಾ ಕೇಂದ್ರ .

(21) "ವಿದ್ಯಾರ್ಥಿನಿಲಯ" ಎಂದರೆ, ಈ ಅಧಿನಿಯಮದ ಉಪಬಂಧಗಳಿಗನುಸಾರವಾಗಿ ವಿಶ್ವವಿದ್ಯಾಲಯದ ವಿದ್ಯಾರ್ಥಿಗಳಿಗಾಗಿ ವಿಶ್ವವಿದ್ಯಾಲಯದ ಭಾಗವಾಗಿ ಅಥವಾ ಪ್ರತ್ಯೇಕವಾಗಿ ವಿಶ್ವವಿದ್ಯಾಲಯವು ನಿರ್ವಹಿಸುತ್ತಿರುವ ಅಥವಾ ಮನ್ನಣೆ ನೀಡಿರುವ ಒಂದು ನಿವಾಸ ಘಟಕ;

(22) "ಅಧಿಕಾರಿ" ಎಂದರೆ, ಅಧಿನಿಯಮ ಅಥವಾ ಶಾಸನಗಳಲ್ಲಿ ನಿರ್ದಿಷ್ಟಪಡಿಸಿರುವಂತೆ ವಿಶ್ವವಿದ್ಯಾಲಯದ ಅಧಿಕಾರಿ.

(23) "ಸಾರ್ವಜನಿಕ – ಖಾಸಗಿ ಪಾಲುಗಾರಿಕೆ" ಎಂದರೆ, ತೋಟಗಾರಿಕೆ ಅಭಿವೃದ್ಧಿ ಮತ್ತು ಉತ್ತೇಜನಕ್ಕಾಗಿ ವಿಶ್ವವಿದ್ಯಾನಿಲಯ ಮತ್ತು ಸಾರ್ವಜನಿಕ/ಖಾಸಗಿ ಸಂಘಗಳ ನಡುವೆ ಮಾಡಿಕೊಂಡ ಜಂಟಿ ಉದ್ಯಮ.

(24) "ಸಂಶೋಧನೆ" ಎಂದರೆ, ತಂತ್ರಜ್ಞಾನಗಳ ಅಭಿವೃದ್ಧಿ.

(25) "ಆವರ್ತಕ ನಿಧಿ" ಎಂದರೆ, ತಂತ್ರಜ್ಞಾನಗಳನ್ನು, ಬೀಜ ಮತ್ತು ಸಸಿ ಸಾಮಾಗ್ರಿಗಳನ್ನು ಅಭಿವೃದ್ಧಿಪಡಿಸಲು ಮತ್ತು ಮುಂದಿನ ಅಭಿವೃದ್ಧಿಗಾಗಿ ಅದೇ ಹಣವನ್ನೇ ಪುನರಾವರ್ತಿಸಿ ತೊಡಗಿಸುವುದಕ್ಕಾಗಿ ವ್ಯಕ್ತಿಗಳಿಗೆ/ಸಂಸ್ಥೆಗಳಿಗೆ ಹಂಚಲಾದ ಬಜೆಟ್.

(26) "ನಿಯಮಿಸಲಾದುದು" ಎಂದರೆ, ವಿಶ್ವವಿದ್ಯಾಲಯದ ಶಾಸನಗಳಿಂದ ನಿಯಮಿಸಲಾದುದು;

(27) "ಕುಲಸಚಿವ" ಎಂದರೆ ವಿಶ್ವವಿದ್ಯಾಲಯದ ಕುಲಸಚಿವ.

(28) "ವಿನಿಯಮಗಳು" ಎಂದರೆ, 54ನೇ ಪ್ರಕರಣದ ಅಡಿಯಲ್ಲಿ ರಚಿಸಲಾದ ವಿನಿಯಮಗಳು;

(29) "ಸಂಶೋಧನಾ ಪರಿಷತ್ತು" ಎಂದರೆ ವಿಶ್ವವಿದ್ಯಾಲಯದ ಸಂಶೋಧನಾ ಪರಿಷತ್ತು.

(30) "ಅನುಸೂಚಿ" ಎಂದರೆ, ಈ ಅಧಿನಿಯಮಕ್ಕೆ ಅನುಬಂಧಿಸಲಾದ ಅನುಸೂಚಿ;

(31) "ಶಾಸನಗಳು" ಎಂದರೆ, ಈ ಅಧಿನಿಯಮದ ಅಡಿಯಲ್ಲಿ ರಚಿಸಲಾದ ನೀತಿಗಳು, ಕಾರ್ಯವಿಧಾನಗಳು ಮುಂತಾದ ಅಂಶಗಳಿಗೆ ವ್ಯಾಪಿಸುವ ವಿಶ್ವವಿದ್ಯಾಲಯದ ಶಾಸನಗಳು;

(32) "ವಿದ್ಯಾರ್ಥಿ" ಎಂದರೆ, ವಿಶ್ವವಿದ್ಯಾಲಯದಲ್ಲಿ ಕ್ರಮಬದ್ಧವಾಗಿ ಸ್ಥಾಪಿಸಲಾದ ಪದವಿ, ಡಿಪ್ಲೊಮಾ ಅಥವಾ ಇತರ ಶೈಕ್ಷಣಿಕ ಪ್ರಶಸ್ತಿಗಳನ್ನು ಪಡೆಯಲು ವ್ಯಾಸಂಗ ಕ್ರಮದಲ್ಲಿ ಅಧ್ಯಯನ ಮಾಡುವುದಕ್ಕಾಗಿ ವಿಶ್ವವಿದ್ಯಾಲಯದ ಘಟಕ ಕಾಲೇಜಿನಲ್ಲಿ ಅಥವಾ ಒಂದು ಸಂಯೋಜಿತ ಕಾಲೇಜಿನಲ್ಲಿ ಪ್ರವೇಶ ನೀಡಿ ಹೆಸರುಪಟ್ಟಿಯಲ್ಲಿ ಸೇರಿಸಲಾಗಿರುವಂಥ ಒಬ್ಬ ವ್ಯಕ್ತಿ;

(33) "ಅಧ್ಯಾಪಕರು" ಎಂದರೆ, ಸಹಾಯಕ ಪ್ರಾಧ್ಯಾಪಕರ ದರ್ಜೆಗೆ ಕಡಿಮೆಯಿಲ್ಲದ ಬೋಧನೆ ನೀಡುವ ಅಥವಾ ಸಂಶೋಧನೆ ಮತ್ತು /ಅಥವಾ ವಿಸ್ತರಣಾ ಶಿಕ್ಷಣ ಕಾರ್ಯಕ್ರಮಗಳನ್ನು ನಡೆಸುವ ಮತ್ತು ಅದಕ್ಕೆ ಮಾರ್ಗದರ್ಶನ ನೀಡುವ ಉದ್ದೇಶಕ್ಕಾಗಿ ವಿಶ್ವವಿದ್ಯಾಲಯದಿಂದ ನೇಮಕಗೊಂಡ ಅಥವಾ ಮಾನ್ಯತೆ ಪಡೆದ ಒಬ್ಬ ವ್ಯಕ್ತಿ ಮತ್ತು ಇದು ಅಧ್ಯಾಪಕರೆಂದು ಶಾಸನಗಳ ಮೂಲಕ ಘೋಷಿಸಲ್ಪಡಬಹುದಾದ ಇತರೆ ಯಾವುದೇ ವ್ಯಕ್ತಿಯನ್ನೂ ಒಳಗೊಳ್ಳಬಹುದು.

(34) "ತಂತ್ರಜ್ಞಾನ ವರ್ಗಾವಣೆ (ಟಿಓಟಿ) ಘಟಕಗಳು" ಎಂದರೆ, ವಿಜ್ಞಾನ ಕೇಂದ್ರ, ವಿಸ್ತರಣಾ ಶಿಕ್ಷಣ ಘಟಕಗಳು (ಇಇಯುಎಸ್), ಸಿಬ್ಬಂದಿ ತರಬೇತಿ ಘಟಕಗಳು(ಎಸ್‌ಟಿಯು), ತೋಟಗಾರಿಕೆ ತಂತ್ರಜ್ಞಾನ ಮಾಹಿತಿ ಕೇಂದ್ರ (ಹೆಚ್‌ಟಿಐಸಿ). ಬೇಕರಿ ತರಬೇತಿ ಘಟಕ(ಬಿಟಿಯು), ಸುಗ್ಗಿ ತರುವಾಯದ ತಂತ್ರಜ್ಞಾನದ ಸಂಸ್ಥೆ (ಪಿಹೆಚ್‌ಟಿಐ) ಮತ್ತು ವಿಶ್ವವಿದ್ಯಾಲಯವು ಸ್ಥಾಪಿಸಿದಂಥ ಇತರ ಕೇಂದ್ರಗಳು.

(35) "ಘಟಕ" ಎಂದರೆ, ಕಾಲೇಜು/ಸಂಶೋಧನಾ ಕೇಂದ/ ವಿಸ್ತರಣಾ ಶಿಕ್ಷಣ ಘಟಕಗಳು/ ತೋಟಗಾರಿಕೆ ವಿಜ್ಞಾನ ಕೇಂದ್ರಗಳು ಮತ್ತು ತೋಟಗಾರಿಕೆಗೆ ಸಂಬಂಧಪಟ್ಟ ಇತರ ಸಂಸ್ಥೆಗಳು.

(36) "ವಿಶ್ವವಿದ್ಯಾಲಯ" ಎಂದರೆ, 3ನೇ ಪ್ರಕರಣದ ಅಡಿಯಲ್ಲಿ ಸ್ಥಾಪಿತವಾದ ತೋಟಗಾರಿಕೆ ವಿಜ್ಞಾನಗಳ ವಿಶ್ವವಿದ್ಯಾಲಯ;

(37) "ವಿಶ್ವವಿದ್ಯಾಲಯ ಪ್ರದೇಶ" ಎಂದರೆ, ವಿಶ್ವವಿದ್ಯಾಲಯದ ಅಧಿಕಾರ ಕ್ಷೇತ್ರ ವ್ಯಾಪ್ತಿಯಲ್ಲಿನ ಪ್ರದೇಶ;

(38) "ಕುಲಪತಿ" ಎಂದರೆ, ವಿಶ್ವವಿದ್ಯಾಲಯದ ಕುಲಪತಿ.

(39) "ವಿಜ್ಞಾನ ಕೇಂದ್ರ " ಎಂದರೆ, ತೋಟಗಾರಿಕೆ ವಿಜ್ಞಾನ ಕೇಂದ್ರ (ಟಿವಿಕೆ), ಕೃಷಿ ವಿಜ್ಞಾನ ಕೇಂದ್ರ (ಕೆವಿಕೆ).

## ಅಧ್ಯಾಯ – II

## ವಿಶ್ವವಿದ್ಯಾಲಯ

**3. ವಿಶ್ವವಿದ್ಯಾಲಯದ ಸ್ಥಾಪನೆ ಮತ್ತು ನಿಗಮನ.–** (1) ಈ ಅಧಿನಿಯಮವು ಪ್ರಾರಂಭವಾದ ದಿನಾಂಕದಿಂದ ಕೂಡಲೇ ರಾಜ್ಯದಲ್ಲಿ **"ತೋಟಗಾರಿಕೆ ವಿಜ್ಞಾನಗಳ ವಿಶ್ವವಿದ್ಯಾಲಯ"** ಎಂಬ ಹೆಸರಿನ ಒಂದು ವಿಶ್ವವಿದ್ಯಾಲಯವು ಸ್ಥಾಪನೆಯಾಗತಕ್ಕದ್ದು.

(2) ವಿಶ್ವವಿದ್ಯಾಲಯವು ಒಂದು ನಿಗಮಿತ ನಿಕಾಯವಾಗಿರತಕ್ಕದ್ದು, ಶಾಶ್ವತ ಉತ್ತರಾಧಿಕಾರವನ್ನು ಮತ್ತು ಸಾಮಾನ್ಯ ಮೊಹರನ್ನು ಹೊಂದಿರತಕ್ಕದ್ದು ಮತ್ತು ಸದರಿ ಹೆಸರಿನಿಂದ ದಾವೆ ಹೂಡತಕ್ಕದ್ದು ಮತ್ತು ದಾವೆಗೆ ಗುರಿಯಾಗತಕ್ಕದ್ದು.

(3) ಈ ಅಧಿನಿಯಮದಲ್ಲಿ ನಮೂದಿಸಲಾದಂತೆ ಅಥವಾ ಶಾಸನಗಳಲ್ಲಿ ಉಪಬಂಧ ಕಲ್ಪಿಸಲಾದಂತೆ, ವಿಶ್ವವಿದ್ಯಾಲಯವು ಕುಲಾಧಿಪತಿಯವರು, ಒಬ್ಬರು ಕುಲಪತಿಯವರು, ವ್ಯವಸ್ಥಾಪನಾ ಮಂಡಳಿ, ವಿದ್ಯಾ ವಿಷಯಕ ಪರಿಷತ್ತು, ಸಂಶೋಧನಾ ಪರಿಷತ್ತು, ವಿಸ್ತರಣಾ ಶಿಕ್ಷಣ ಪರಿಷತ್ತು ಮತ್ತು ಇತರ ಪ್ರಾಧಿಕಾರಗಳು ಹಾಗೂ ಅಧಿಕಾರಿಗಳು ಮತ್ತು ಘಟಕ ನಿಕಾಯಗಳನ್ನು ಹೊಂದಿರತಕ್ಕದ್ದು.

(4) ವಿಶ್ವವಿದ್ಯಾಲಯವು, ಚರ ಮತ್ತು ಸ್ಥಿರ ಸ್ವತ್ತುಗಳೆರಡನ್ನು ಆರ್ಜಿಸಲು ಮತ್ತು ಧಾರಣ ಮಾಡಲು, ವಿಶ್ವವಿದ್ಯಾಲಯದ ಉದ್ದೇಶಗಳಿಗಾಗಿ ಅದರಲ್ಲಿ ನಿಹಿತವಾಗಿರಬಹುದಾದ ಅಥವಾ ಅದರಿಂದ ಆರ್ಜಿತವಾಗಿರಬಹುದಾದ ಯಾವುದೇ ಚರ ಮತ್ತು ಸ್ಥಿರ ಸ್ವತ್ತನ್ನು ರಾಜ್ಯ ಸರ್ಕಾರದ ಪೂರ್ವಾನುಮೋದನೆಯೊಡನೆ ಗುತ್ತಿಗೆಗೆ ನೀಡಲು, ಮಾರಾಟ ಮಾಡಲು ಅಥವಾ ಅನ್ಯಥಾ ವರ್ಗಾವಣೆ ಮಾಡಲು ಮತ್ತು ಕೇಂದ್ರ ಸರ್ಕಾರ, ರಾಜ್ಯ ಸರ್ಕಾರ ಅಥವಾ ಇತರ ಯಾವುದೇ ಅನುಮೋದಿತ ಮೂಲಗಳಿಂದ ಹಣವನ್ನು ಸಾಲ ಪಡೆದು ಮತ್ತು ಈ ಅಧಿನಿಯಮದ ಉದ್ದೇಶಕ್ಕಾಗಿ ಅವಶ್ಯವಾದ ಇತರ ಎಲ್ಲಾ ಕಾರ್ಯಗಳನ್ನು ನಿರ್ವಹಿಸಲು ಸಕ್ಷಮವಾಗಿರತಕ್ಕದ್ದು.

(5) ವಿಶ್ವವಿದ್ಯಾಲಯವು ಹೂಡಿದ ಅಥವಾ ಅದರ ವಿರುದ್ಧ ಹೂಡಲಾದ ಎಲ್ಲಾ ದಾವೆಗಳಲ್ಲಿ ಮತ್ತು ಇತರ ಕಾನೂನು ವ್ಯವಹರಣೆಗಳಲ್ಲಿ ವಾದ ಪ್ರತಿವಾದ ಪತ್ರಗಳಿಗೆ ಕುಲಸಚಿವರು ಸಹಿ ಮಾಡಿ ಸತ್ಯಾಪನೆ ಮಾಡತಕ್ಕದ್ದು ಮತ್ತು ಅಂತಹ ದಾವೆಗಳಲ್ಲಿನ ಹಾಗೂ ವ್ಯವಹರಣೆಗಳಲ್ಲಿನ ಎಲ್ಲಾ ಆದೇಶಿಕೆಗಳನ್ನು ಕುಲಸಚಿವರಿಗೆ ನೀಡತಕ್ಕದ್ದು ಮತ್ತು ಅವರಿಗೆ ಜಾರಿ ಮಾಡತಕ್ಕದ್ದು.

(6) ವಿಶ್ವವಿದ್ಯಾಲಯದ ಕೇಂದ್ರ ಕಛೇರಿಯು ಬಾಗಲಕೋಟೆಯಲ್ಲಿ ಇರತಕ್ಕದ್ದು.

**4. ಅಧಿಕಾರ ಕ್ಷೇತ್ರ ವ್ಯಾಪ್ತಿ ಮತ್ತು ಘಟಕ ನಿಕಾಯಗಳು.–** (1) ಈ ಅಧಿನಿಯಮದಲ್ಲಿ ಪರಿಭಾಷಿಸಲಾದಂತೆ, ವಿಶ್ವವಿದ್ಯಾಲಯದ ಅಥವಾ ಕಾಲೇಜು ಮಟ್ಟದಲ್ಲಿ ತೋಟಗಾರಿಕೆ ಕ್ಷೇತ್ರದಲ್ಲಿ ಸಂಶೋಧನೆ ಮತ್ತು ವಿಸ್ತರಣಾ ಶಿಕ್ಷಣ ಕಾರ್ಯಕ್ರಮಗಳ ಭೋಧನೆಗೆ ಸಂಬಂಧಪಟ್ಟಂತೆ ಈ ವಿಶ್ವವಿದ್ಯಾಲಯದ ಅಧಿಕಾರ ವ್ಯಾಪ್ತಿ ಮತ್ತು ಜವಾಬ್ದಾರಿಯು ಇಡೀ ಕರ್ನಾಟಕ ರಾಜ್ಯಕ್ಕೆ ವ್ಯಾಪ್ತವಾಗಿರತಕ್ಕದ್ದು.

(2) ವಿಶ್ವವಿದ್ಯಾಲಯವು ಸ್ಥಾಪನೆಯಾದ ದಿನಾಂಕದಂದು ಮತ್ತು ದಿನಾಂಕದಿಂದ ವಿಶ್ವವಿದ್ಯಾಲಯದ ಘಟಕ ಅಥವಾ ಸಂಯೋಜಿತ ಕಾಲೇಜು ಆಗಿ ಅಲ್ಲದೆ ಅನ್ಯಥಾ ತೋಟಗಾರಿಕೆಯಲ್ಲಿ ಶಿಕ್ಷಣವನ್ನು ನೀಡುವ ಯಾವುದೇ ಹೊಸ ಕಾಲೇಜನ್ನು ಸ್ಥಾಪಿಸತಕ್ಕದ್ದಲ್ಲ.

(3) ವಿಶ್ವವಿದ್ಯಾಲಯದ ಅಧಿಕಾರ ಕ್ಷೇತ್ರ ವ್ಯಾಪ್ತಿ ಮತ್ತು ಪ್ರಾಧಿಕಾರದಡಿಯಲ್ಲಿ ಬರುವ ಎಲ್ಲಾ ತೋಟಗಾರಿಕೆ ಕಾಲೇಜುಗಳು, ತೋಟಗಾರಿಕೆ ಸಂಶೋಧನಾ ಕೇಂದ್ರಗಳು, ತೋಟಗಾರಿಕೆ ವಿಜ್ಞಾನ ಕೇಂದ್ರಗಳು ಮತ್ತು ಇತರ ಸಂಸ್ಥೆಗಳು ವಿಶ್ವವಿದ್ಯಾಲಯದ ಘಟಕ ಭಾಗಗಳಾಗಿ ವಿಶ್ವವಿದ್ಯಾಲಯದ ಅಧಿಕಾರಿಗಳು ಮತ್ತು ಪ್ರಾಧಿಕಾರಗಳ ಪೂರ್ಣ ಆಡಳಿತ ನಿರ್ವಹಣೆ ಮತ್ತು ನಿಯಂತ್ರಣದಡಿಯಲ್ಲಿ ಬರತಕ್ಕದ್ದು. ವಿಶ್ವವಿದ್ಯಾಲಯದಿಂದ ಸಂಯೋಜಿತ ಕಾಲೇಜು ಎಂದು ಮಾನ್ಯತೆ ಪಡೆದ ಹೊರತು ಯಾವ ಘಟಕವನ್ನು ಸಂಯೋಜಿತ ಕಾಲೇಜು ಎಂದು ಮಾನ್ಯ ಮಾಡತಕ್ಕದ್ದಲ್ಲ.

(4) ವಿಶ್ವವಿದ್ಯಾಲಯವು ಪ್ರಾದೇಶಿಕ ಅಧಿಕಾರ ಕ್ಷೇತ್ರ ವ್ಯಾಪ್ತಿಯಲ್ಲಿ ಹಾಗೂ ಅಧಿಕಾರ ವ್ಯಾಪ್ತಿಯಿಂದ ಹೊರಗೆ ಸಂಶೋಧನೆ ವಿಸ್ತರಣೆ ಮತ್ತು ನಿರ್ವಹಣೆಗಳನ್ನೊಳಗೊಂಡ ತನ್ನ ಘಟಕ ನಿಕಾಯಗಳ ಸ್ಥಾಪನೆ ಮತ್ತು ಅಭಿವೃದ್ಧಿಗೆ ಜವಾಬ್ದಾರಿಯನ್ನು ವಹಿಸಿಕೊಳ್ಳಬಹುದು.

(5) ಪ್ರತಿಯೊಂದು ವಿಶ್ವವಿದ್ಯಾಲಯವು ಅನೇಕ ವಿಭಿನ್ನ ಶಾಸ್ತ್ರಗಳ ದೃಷ್ಟಿಯಿಂದ ಅಧ್ಯಯನ ಮಾಡುವ ವಿದ್ಯಾ ವಿಷಯಕ ಕಾರ್ಯಕ್ರಮಗಳ ಮತ್ತು ಸಂಶೋಧನಾ ಯೋಜನೆಗಳ ಸಂಬಂಧದಲ್ಲಿ ಇತರ ವಿಶ್ವವಿದ್ಯಾಲಯಗಳು ಅಥವಾ ಭಾರತದ ಮತ್ತು ವಿದೇಶದ ಖ್ಯಾತ ಸಂಸ್ಥೆಗಳೊಂದಿಗೆ ವಿದ್ಯಾವಿಷಯಕ ಕಾರ್ಯಕ್ರಮಗಳ ಸಹಯೋಗ ಮಾಡಿಕೊಳ್ಳಬಹುದು.

**5. ವಿಶ್ವವಿದ್ಯಾಲಯದ ಧ್ಯೇಯೋದ್ದೇಶಗಳು.–** ಈ ವಿಶ್ವವಿದ್ಯಾಲಯವನ್ನು ಈ ಮುಂದಿನ ಧ್ಯೇಯೋದ್ದೇಶಗಳಿಗಾಗಿ ಸ್ಥಾಪಿಸಲಾಗಿದೆ ಮತ್ತು ನಿಗಮಿತಗೊಳಿಸಲಾಗಿದೆ ಎಂದು ಭಾವಿಸತಕ್ಕದ್ದು, ಎಂದರೆ:–

(ಎ) 2ನೇ ಪ್ರಕರಣದ (19)ನೇ ಖಂಡದಲ್ಲಿ ನಿರ್ದಿಷ್ಟಪಡಿಸಿದಂತೆ ಅಧ್ಯಯನದ ವಿವಿಧ ಶಾಖೆಗಳಲ್ಲಿ ಉತ್ತಮ ಗುಣಮಟ್ಟದ ಮಾನವ ಸಂಪನ್ಮೂಲವನ್ನು ಅಭಿವೃದ್ಧಿ ಪಡಿಸುವುದಕ್ಕಾಗಿ ಶಿಕ್ಷಣ ನೀಡುವುದಕ್ಕೆ ಏರ್ಪಾಡು ಮಾಡುವುದು;

(ಬಿ) ದೂರ ಶಿಕ್ಷಣವೂ ಸೇರಿದಂತೆ ಕಲಿಕೆ ಮತ್ತು ಸಂಶೋಧನೆಗೆ ಅದರಲ್ಲೂ ತೋಟಗಾರಿಕೆ ಮತ್ತು ಇತರೆ ಸಂಬಂಧಿತ ವಿಜ್ಞಾನದ ಕಲಿಕೆ ಮತ್ತು ಸಂಶೋಧನೆಯ ಮುನ್ನಡೆಗೆ ಉತ್ತೇಜನ ನೀಡುವುದು;

(ಸಿ) ಜನತೆಗೆ ವಿಶೇಷವಾಗಿ ರಾಜ್ಯದ ಗ್ರಾಮಾಂತರ ಜನರಿಗೆ, ಅಂಥ ವಿಜ್ಞಾನ ಮತ್ತು ತಂತ್ರಜ್ಞಾನಗಳ ವಿಸ್ತರಣಾ ಶಿಕ್ಷಣವನ್ನು ಕೈಗೊಳ್ಳುವುದು;

(ಡಿ) ರಾಷ್ಟ್ರೀಯ ಮತ್ತು ಅಂತಾರಾಷ್ಟ್ರೀಯ ಹಾಗೂ ಅರೆಸರ್ಕಾರಿ/ಸರ್ಕಾರಿ/ಖಾಸಗಿ ಮತ್ತಿತರ ಶೈಕ್ಷಣಿಕ, ಕೈಗಾರಿಕಾ, ಸಂಶೋಧನೆ ಸಂಸ್ಥೆಗಳೊಂದಿಗೆ ಪಾಲುಗಾರಿಕೆ ಮತ್ತು ಜೋಡಣೆಗಳನ್ನು ಉತ್ತೇಜಿಸುವುದು.

(ಇ) ರಾಜ್ಯ ಸರ್ಕಾರವು ಸರ್ಕಾರಿ ರಾಜ್ಯ ಪತ್ರದಲ್ಲಿ ಅಧಿಸೂಚನೆಯ ಮೂಲಕ ಕಾಲದಿಂದ ಕಾಲಕ್ಕೆ ನಿರ್ದಿಷ್ಟಪಡಿಸಬಹುದಾದಂಥ ಇತರ ಉದ್ದೇಶಗಳು;

**6. ವಿಶ್ವವಿದ್ಯಾಲಯಕ್ಕೆ ಪ್ರವೇಶ.–** (1) ವಿಶ್ವವಿದ್ಯಾಲಯವು ಈ ಅಧಿನಿಯಮದ ಮತ್ತು ಶಾಸನಗಳ ಉಪಬಂಧಗಳಿಗೊಳಪಟ್ಟು ಎಲ್ಲ ವ್ಯಕ್ತಿಗಳಿಗೂ ಮುಕ್ತವಾಗಿರತಕ್ಕದ್ದು:

ಪರಂತು, ಈ ಪ್ರಕರಣದಲ್ಲಿರುವುದಾವುದೂ, ಪ್ರವೇಶಕ್ಕಾಗಿ ಅಥವಾ ವಿಶ್ವವಿದ್ಯಾಲಯದ ಪಟ್ಟಿಗಳಲ್ಲಿ ಉಳಿದುಕೊಳ್ಳುವುದಕ್ಕಾಗಿ ನಿಯಮಿಸಲಾದ ಶೈಕ್ಷಣಿಕ ಗುಣಮಟ್ಟಗಳನ್ನು ಪೂರೈಸದಿರುವ ಯಾವೊಬ್ಬ ವ್ಯಕ್ತಿಗೆ ಅಥವಾ ಯಾವ ವ್ಯಕ್ತಿಗಳ ಶೈಕ್ಷಣಿಕ ದಾಖಲೆಗಳು, ಪದವಿಯನ್ನು ನೀಡುವುದಕ್ಕಾಗಿ ಅಗತ್ಯಪಡಿಸಲಾದ ಕನಿಷ್ಠ ಗುಣಮಟ್ಟಕ್ಕಿಂತ ಕಡಿಮೆ ಇವೆಯೋ ಆ ವ್ಯಕ್ತಿಗಳಿಗೆ ಅಥವಾ ಯಾರ ವೈಯಕ್ತಿಕ ನಡತೆಯು ವಿಶ್ವವಿದ್ಯಾಲಯದ ಹಿತದೃಷ್ಟಿಗೆ ಅಥವಾ ಇತರ ವಿದ್ಯಾರ್ಥಿಗಳ ಮತ್ತು ಸಿಬ್ಬಂದಿಯ ಸೂಕ್ತ ಹಕ್ಕುಗಳಿಗೆ ಮತ್ತು ವಿಶೇಷಾಧಿಕಾರಗಳಿಗೆ ಹಾನಿಕಾರಕವಾಗಿರುವಂಥದ್ದಾಗಿದೆಯೋ ಆ ವ್ಯಕ್ತಿಗಳಿಗೆ ಯಾವುದೇ ವ್ಯಾಸಂಗ ಕ್ರಮಕ್ಕೆ ಪ್ರವೇಶ ನೀಡಲು ವಿಶ್ವವಿದ್ಯಾಲಯವನ್ನು ಅಗತ್ಯಪಡಿಸತಕ್ಕದ್ದಲ್ಲ:

ಮತ್ತು ಪರಂತು, ಈ ಪ್ರಕರಣದಲ್ಲಿರುವುದಾವುದೂ, ವಿದ್ಯಾವಿಷಯಕ ಪರಿಷತ್ತು ನಿರ್ಧರಿಸಿದಂತೆ ವಿಶ್ವವಿದ್ಯಾಲಯದ ಅಥವಾ ಯಾವುದೇ ನಿರ್ದಿಷ್ಟ ಕಾಲೇಜಿನ ಅಥವಾ ವಿಭಾಗದ ಲಭ್ಯವಿರುವ ಫ್ಯಾಕಲ್ಟಿಗಳಲ್ಲಿ ಸ್ಥಳಾವಕಾಶ ನೀಡಬಹುದಾದದ್ದಕ್ಕಿಂತಲೂ ಹೆಚ್ಚಿನ ಸಂಖ್ಯೆಯಲ್ಲಿ ವಿದ್ಯಾರ್ಥಿಗಳಿಗೆ ಯಾವುದೇ ವ್ಯಾಸಂಗ ಕ್ರಮಗಳಿಗೆ ಪ್ರವೇಶ ನೀಡಲು ವಿಶ್ವವಿದ್ಯಾಲಯವನ್ನು ಅಗತ್ಯಪಡಿಸುತ್ತದೆಂದು ಭಾವಿಸತಕ್ಕದ್ದಲ್ಲ.

(2) (1) ನೇ ಉಪಪ್ರಕರಣದ ಉಪಬಂಧಗಳಿಗೆ ಒಳಪಟ್ಟು, ಸರ್ಕಾರವು ಈ ಸಂಬಂಧದಲ್ಲಿ ನಿರ್ದಿಷ್ಟಪಡಿಸಿದ ಕನಿಷ್ಠ ವಿದ್ಯಾರ್ಹತೆಗಳನ್ನು ಹೊಂದಿದ ಮಹಿಳೆಯರಿಗೆ, ಅನುಸೂಚಿತ ಜಾತಿ ಮತ್ತು ಅನುಸೂಚಿತ ಪಂಗಡಗಳಿಗೆ ಸೇರಿದ ವ್ಯಕ್ತಿಗಳಿಗೆ, ಕೃಷಿಕರ ಮಕ್ಕಳಿಗೆ ಇತರೆ ರಾಜ್ಯಗಳ ವಿದ್ಯಾರ್ಥಿಗಳಿಗೆ, ವಿದೇಶಿ ವಿದ್ಯಾರ್ಥಿಗಳಿಗೆ ಮತ್ತು ಸರ್ಕಾರವು ಆದೇಶದ ಮೂಲಕ ನಿರ್ದಿಷ್ಟಪಡಿಸಬಹುದಾದಂಥ ಕೃಷಿ ಕುರಿತ ಪ್ರಾಯೋಗಿಕ ಪರೀಕ್ಷೆಯಲ್ಲಿ ಉತ್ತೀರ್ಣರಾದ ಸ್ವಾತಂತ್ರ ಹೋರಾಟಗಾರರ, ಸೈನಿಕರ ಮತ್ತು ಮಾಜಿ ಸೈನಿಕರ ಮಕ್ಕಳಿಗೆ ಹಾಗೂ ಪ್ರತಿಪಾಲಿತರಿಗೆ ಮತ್ತು ಸರ್ಕಾರವು ಈ ಸಂಬಂಧದಲ್ಲಿ ಘೋಷಿಸಬಹುದಾದಂಥ ಸಾಮಾಜಿಕವಾಗಿ ಮತ್ತು ಶೈಕ್ಷಣಿಕವಾಗಿ ಹಿಂದುಳಿದ ವರ್ಗಗಳ ನಾಗರಿಕರಿಗೆ ವಿಶ್ವವಿದ್ಯಾಲಯದ ಕಾಲೇಜುಗಳಲ್ಲಿ ಸ್ಥಾನಗಳನ್ನು ಮೀಸಲಿರಿಸತಕ್ಕದ್ದು ಎಂದು ನಿರ್ದೇಶಿಸತಕ್ಕದ್ದು ಮತ್ತು ಹಾಗೆ ನಿರ್ದೇಶನಗಳನ್ನು ನೀಡಿದಾಗ ವಿಶ್ವವಿದ್ಯಾಲಯವು ಅದರಂತೆ ಮೀಸಲಾತಿಗಳನ್ನು ಮಾಡತಕ್ಕದ್ದು.

**ವಿವರಣೆ:–** ಈ ಉಪಪ್ರಕರಣದ ಉದ್ದೇಶಕ್ಕಾಗಿ,–

(i) "ಕೃಷಿಕ" ಎಂದರೆ, ಮಾಲೀಕನಾಗಿ ಭೂಮಿಯನ್ನು ಹೊಂದಿರುವ ವ್ಯಕ್ತಿ ಹಾಗೂ ಯಾರ ಮುಖ್ಯ ಆದಾಯವು ಸ್ವಂತ ಸಾಗುವಳಿ ಮಾಡುವುದರಿಂದ ಬರುತ್ತದೋ ಆ ವ್ಯಕ್ತಿ ಮತ್ತು ಇದು ಮುಖ್ಯವಾಗಿ ಕೃಷಿ ಭೂಮಿಗಳಲ್ಲಿ ದೈಹಿಕ ದುಡಿಮೆಯಿಂದ ತನ್ನ ಜೀವನ ನಿರ್ವಹಣೆ ಮಾಡುತ್ತಿರುವ ವ್ಯಕ್ತಿಗಳನ್ನು ಒಳಗೊಳ್ಳುತ್ತದೆ.

(ii) "ಸ್ವಾತಂತ್ರ ಹೋರಾಟಗಾರ" ಎಂದರೆ, ಸರ್ಕಾರವು ಕಾಲ ಕಾಲಕ್ಕೆ ಹಾಗೆಂದು ಘೋಷಿಸುವ ಪ್ರವರ್ಗದ ವ್ಯಕ್ತಿ.

**7. ವಿಶ್ವವಿದ್ಯಾಲಯದ ಅಧಿಕಾರ ಮತ್ತು ಪ್ರಕಾರ್ಯಗಳು.–** ವಿಶ್ವವಿದ್ಯಾಲಯವು ಈ ಮುಂದಿನ ಅಧಿಕಾರಗಳು ಮತ್ತು ಪ್ರಕಾರ್ಯಗಳನ್ನು ಹೊಂದಿರತಕ್ಕದ್ದು, ಎಂದರೆ:–

(1) ತೋಟಗಾರಿಕೆ ಮತ್ತು ಸಂಬಂಧಿತ ಇತರ ಕಲಿಕೆಯ ವಿಭಾಗಗಳಲ್ಲಿ ಪದವಿ ಮತ್ತು ಸ್ನಾತಕೋತ್ತರ ವಿದ್ಯಾರ್ಥಿಗಳಿಗೆ ವಿಶ್ವವಿದ್ಯಾಲಯವು ಸೂಕ್ತ ಎಂದು ಭಾವಿಸಬಹುದಾದ ಶಿಕ್ಷಣವನ್ನು ಒದಗಿಸುವುದು;

(2) ತೋಟಗಾರಿಕೆ ಮತ್ತು ಸಂಬಂಧಿತ ಕಲಿಕೆಯ ವಿಭಾಗಗಳಲ್ಲಿ ಸಂಶೋಧನೆಯನ್ನು ನಡೆಸುವುದಕ್ಕೆ ಅವಕಾಶವನ್ನು ನೀಡುವುದು.

(3) ಸಂಶೋಧನೆಯಿಂದ ತಿಳಿದುಬಂದ ವಿಷಯಗಳನ್ನು ಮತ್ತು ತಾಂತ್ರಿಕ ಮಾಹಿತಿಗಳನ್ನು ವಿಸ್ತರಣಾ ಶಿಕ್ಷಣ ಕಾರ್ಯಕ್ರಮಗಳ ಮೂಲಕ ಪ್ರಸಾರ ಮಾಡಲು ಅವಕಾಶ ಕಲ್ಪಿಸುವುದು;

(4) ಯಾವುದೇ ಇತರ ವಿಶ್ವವಿದ್ಯಾಲಯದಲ್ಲಿ ಅಥವಾ ಈ ಉದ್ದೇಶಕ್ಕಾಗಿ ಮಾನ್ಯತೆ ಪಡೆದ ಸಂಸ್ಥೆಗಳಲ್ಲಿ ಅರೆಕಾಲಿಕ ವ್ಯಾಸಂಗ ಕ್ರಮ ಮತ್ತು / ಅಥವಾ ಸಂಶೋಧನೆಯು ಸೇರಿದಂತೆ ವಿಶ್ವವಿದ್ಯಾಲಯದಲ್ಲಿ ನಿಯಮಿಸಿದ ವ್ಯಾಸಂಗ ಕ್ರಮದಲ್ಲಿ ಅಧ್ಯಯನ ಮಾಡುವ ಅಥವಾ ಸಂಶೋಧನೆ ನಡೆಸುವ ಅಥವಾ ಅವರೆಡನ್ನೂ ಮಾಡುವ ವ್ಯಕ್ತಿಗಳಿಗೆ ಪದವಿಗಳು, ಡಿಪ್ಲೊಮಗಳು ಮತ್ತು ಇತರ ಶೈಕ್ಷಣಿಕ ಪ್ರಶಸ್ತಿಗಾಗಿ ವ್ಯಾಸಂಗ ಕ್ರಮಗಳನ್ನು ಪ್ರಾರಂಭಿಸುವುದು ಹಾಗೂ ಪರೀಕ್ಷೆಗಳನ್ನು ನಡೆಸುವುದು ಮತ್ತು ಪದವಿ, ಡಿಪ್ಲೋಮಾ ಮತ್ತಿತರ ಶೈಕ್ಷಣಿಕ ಪ್ರಶಸ್ತಿ ನೀಡುವುದು;

(5) ನಿಯಮಿಸಬಹುದಾದಂಥ ಗೌರವ ಪದವಿಗಳು ಮತ್ತು ಇತರ ಪ್ರಶಸ್ತಿಗಳನ್ನು ಪ್ರದಾನ ಮಾಡುವುದು;

(6) ರೈತರಿಗೆ, ಕ್ಷೇತ್ರ ಕೆಲಸಗಾರರಿಗೆ, ಗ್ರಾಮೀಣ ಮುಖಂಡರಿಗೆ ಮತ್ತು ವಿಶ್ವವಿದ್ಯಾಲಯದಲ್ಲಿ ಕ್ರಮಬದ್ಧ ವಿದ್ಯಾರ್ಥಿಗಳಾಗಿ ಭರ್ತಿಯಾಗಿರದ ಇತರ ವ್ಯಕ್ತಿಗಳಿಗೆ ತರಬೇತಿಯನ್ನು ನೀಡುವುದು;

(7) 4ನೇ ಪ್ರಕರಣದಲ್ಲಿ ನಮೂದಿಸಿರುವ ಮಿತಿಗಳಿಗೊಳಪಟ್ಟು, ವಿಶ್ವವಿದ್ಯಾಲಯವು ನಿರ್ಧರಿಸಬಹುದಾದಂಥ ರೀತಿಯಲ್ಲಿ ಮತ್ತು ಅಂಥ ಉದ್ದೇಶಗಳಿಗಾಗಿ ಇತರ ವಿಶ್ವವಿದ್ಯಾಲಯಗಳು ಮತ್ತು ಸಂಸ್ಥೆಗಳೊಡನೆ ಜೊತೆಗೂಡಿ ಕೆಲಸಮಾಡುವುದು;

(8) ತೋಟಗಾರಿಕೆ ಮತ್ತು ಸಂಬಂಧಿತ ವಿಜ್ಞಾನಗಳಿಗೆ ಸಂಬಂಧಿಸಿದ ಕಾಲೇಜುಗಳು ಮತ್ತು ಇತರ ಸಂಸ್ಥೆಗಳನ್ನು ಸ್ಥಾಪಿಸುವುದು ಮತ್ತು ನಿರ್ವಹಿಸುವುದು;

(9) ಬೋಧನೆ, ಸಂಶೋಧನೆ ಮತ್ತು ವಿಸ್ತರಣಾ ಶಿಕ್ಷಣಕ್ಕಾಗಿ ಪ್ರಯೋಗಾಲಯಗಳು, ಗ್ರಂಥಾಲಯಗಳು, ಸಂಶೋಧನಾ ಕೇಂದ್ರಗಳು ಮತ್ತು ಸಂಸ್ಥೆಗಳು ಮತ್ತು ವಸ್ತುಸಂಗ್ರಹಾಲಯಗಳನ್ನು ಸ್ಥಾಪಿಸುವುದು ಮತ್ತು ನಿರ್ವಹಿಸುವುದು;

(10) ಬೋಧನೆ, ಸಂಶೋಧನೆ ಮತ್ತು ವಿಸ್ತರಣಾ ಶಿಕ್ಷಣಕ್ಕಾಗಿ ಹುದ್ದೆಗಳನ್ನು ಸೃಜಿಸುವುದು ಮತ್ತು ಅಂಥ ಹುದ್ದೆಗಳಿಗೆ ವ್ಯಕ್ತಿಗಳನ್ನು ನೇಮಿಸುವುದು;

(11) ಆಡಳಿತಾತ್ಮಕವಾದ ಮತ್ತು ಇತರ ಹುದ್ದೆಗಳನ್ನು ಸೃಜಿಸುವುದು ಮತ್ತು ಅಂಥ ಹುದ್ದೆಗಳಿಗೆ ವ್ಯಕ್ತಿಗಳನ್ನು ನೇಮಕ ಮಾಡುವುದು;

(12) ಶಾಸನಗಳನ್ವಯ ಫೆಲೋಶಿಪ್, ವಿದ್ಯಾರ್ಥಿವೇತನಗಳು, ಸ್ಟೈಪೆಂಡುಗಳು ಮತ್ತು ಬಹುಮಾನಗಳನ್ನು ಸ್ಥಾಪಿಸುವುದು ಮತ್ತು ನೀಡುವುದು;

(13) ವಿಶ್ವವಿದ್ಯಾಲಯದ ವಿದ್ಯಾರ್ಥಿಗಳು ಮತ್ತು ಸಿಬ್ಬಂದಿಗಳಿಗೆ ನಿವಾಸ ಗೃಹಗಳನ್ನು ನಿರ್ಮಿಸುವುದು ಮತ್ತು ನಿರ್ವಹಿಸಿಕೊಂಡು ಬರುವುದು;

(14) ನಿಯಮಿಸಲಾದಂಥ ಫೀಜು ಮತ್ತು ಇತರೆ ಚಾರ್ಜುಗಳನ್ನು ನಿಗದಿಪಡಿಸುವುದು, ಕೋರುವುದು ಮತ್ತು ಸ್ವೀಕರಿಸುವುದು;

(15) ವಿಶ್ವವಿದ್ಯಾಲಯದ ವಿದ್ಯಾರ್ಥಿಗಳ ನಿವಾಸ, ನಡತೆ ಮತ್ತು ಶಿಸ್ತನ್ನು ಮೇಲ್ವಿಚಾರಣೆ ಮಾಡುವುದು ಮತ್ತು ನಿಯಂತ್ರಿಸುವುದು ಹಾಗೂ ಅವರ ಆರೋಗ್ಯ ಮತ್ತು ಕ್ಷೇಮಾಭಿವೃದ್ಧಿಯನ್ನು ವರ್ಧಿಸುವುದಕ್ಕಾಗಿ ಏರ್ಪಾಡುಗಳನ್ನು ಮಾಡುವುದು;

(16) ವಿದೇಶಗಳಿಂದ ಮತ್ತು ದೇಶದ ಒಳಗಿನಿಂದ ವಂತಿಗೆಗಳನ್ನು ಸ್ವೀಕರಿಸುವುದು:

ಪರಂತು, ಸರ್ಕಾರದ ಪೂರ್ವಾನುಮೋದನೆಯನ್ನು ಪಡೆದ ಹೊರತು ವಿಶ್ವವಿದ್ಯಾಲಯವು ವಿದೇಶದಿಂದ, ವಿದೇಶಿ ಪ್ರತಿಷ್ಠಾನಗಳು ಮತ್ತು ಅಂಥ ದೇಶದ ಯಾವುದೇ ವ್ಯಕ್ತಿಯಿಂದ ವಂತಿಗೆಗಳನ್ನು ಸ್ವೀಕರಿಸತಕ್ಕದ್ದಲ್ಲ.

(17) ಭಾರತದ ಹೊರಗೆ ಕಾರ್ಯ ನಿರ್ವಹಿಸುತ್ತಿರುವ ಸಂಸ್ಥೆಗಳಿಗೆ ತನ್ನ ವಿಶೇಷಾಧಿಕಾರಕ್ಕೆ ಪ್ರವೇಶಾವಕಾಶವನ್ನು ನೀಡಲು ವಿಶ್ವವಿದ್ಯಾಲಯಕ್ಕೆ ಅನುಮತಿಸುವುದು;

(18) ವಿವಿಧ ಶಾಸನಗಳಡಿಯಲ್ಲಿ ನಿರ್ಧರಿಸಿದಂತೆ ತೋಟಗಾರಿಕೆ ಮತ್ತು ಸಂಬಂಧಿತ ವಿಜ್ಞಾನಗಳಲ್ಲಿ ಕಲಿಕೆಯನ್ನು ನಡೆಸಲು ಖಾಸಗಿ ತೋಟಗಾರಿಕೆ ಸಂಸ್ಥೆಗಳಿಗೆ ಸಂಯೋಜನೆ ನೀಡುವುದು.

(19) ವಿಶ್ವವಿದ್ಯಾಲಯದ ಧ್ಯೇಯೋದ್ದೇಶಗಳ ಪುರೋಭಿವೃದ್ಧಿಗೆ ಅಗತ್ಯವಾಗಬಹುದಾದ ಎಲ್ಲಾ ಚಟುವಟಿಕೆಗಳು ಮತ್ತು ಕಾರ್ಯಗಳನ್ನು ಅವು ಮೇಲೆ ಹೇಳಿದ ಅಧಿಕಾರಗಳಿಗೆ ಪ್ರಾಸಂಗಿಕವಾಗಿರಲಿ ಇಲ್ಲದಿರಲಿ ಮಾಡುವುದು:

**8. ವಿಶ್ವವಿದ್ಯಾಲಯದ ಕೆಲವು ಕಾಲೇಜುಗಳ, ಸಂಸ್ಥೆಗಳ ಮತ್ತು ನೌಕರರ ವರ್ಗಾವಣೆ.–** (1) ಕರ್ನಾಟಕ ಕೃಷಿ ವಿಜ್ಞಾನಗಳ ವಿಶ್ವವಿದ್ಯಾಲಯಗಳ ಅಧಿನಿಯಮ 1963ರಲ್ಲಿ (1963ರ ಕರ್ನಾಟಕ ಅಧಿನಿಯಮ 22) ಏನೇ ಇದ್ದರೂ ಅನುಸೂಚಿ – I ರಲ್ಲಿ

ನಿರ್ದಿಷ್ಟಪಡಿಸಿದ ಕಾಲೇಜುಗಳು, ಸಂಶೋಧನಾ ಕೇಂದ್ರಗಳು, ತೋಟಗಾರಿಕೆ ಬೆಳೆಗಳ ಬಗ್ಗೆ ಅಖಿಲ ಭಾರತ ಸಮನ್ವಯ ಸಂಶೋಧನಾ ಯೋಜನೆಗಳು ಮತ್ತಿತರ ಸಂಸ್ಥೆಗಳು ಹಾಗೂ ಕೃಷಿ ಮತ್ತು ತೋಟಗಾರಿಕೆಯ ರಾಜ್ಯ ಸರ್ಕಾರದ ಇಲಾಖೆಗಳ ಫಾರಂಗಳು ಮತ್ತು ಅವಕ್ಕೆ ಲಗತ್ತಾದ ವಿದ್ಯಾರ್ಥಿ ನಿಲಯಗಳು ಹಾಗೂ ಇತರ ಕಟ್ಟಡಗಳು, ತಮ್ಮ ಪೀಠೋಪಕರಣ ಸಾಮಾಗ್ರಿಗಳು, ಗ್ರಂಥಾಲಯಗಳು, ಪುಸ್ತಕಗಳು, ಪ್ರಯೋಗಾಲಯಗಳು, ದಾಸ್ತಾನು ಮಳಿಗೆಗಳು, ಉಪಕರಣಗಳು, ಸಾಧನಗಳು, ಪರಿಕರಗಳು ಮತ್ತು ಸಲಕರಣೆಗಳ ಸಮೇತವಾಗಿ ಹಾಗೂ ನಿರ್ದಿಷ್ಟಪಡಿಸಿದ ದಿನಾಂಕಕ್ಕೆ ಮೊದಲು ಕೃಷಿ ವಿಜ್ಞಾನಗಳ ವಿಶ್ವವಿದ್ಯಾಲಯ, ಧಾರವಾಡ, ಕೃಷಿ ವಿಜ್ಞಾನಗಳ ವಿಶ್ವವಿದ್ಯಾಲಯ, ಬೆಂಗಳೂರು ಹಾಗೂ ರಾಜ್ಯ ಸರ್ಕಾರವು ಮಾಲೀಕತ್ವ ಹೊಂದಿದ್ದ ಮತ್ತು ನಿರ್ವಹಿಸುತ್ತಿದ್ದ ಚರ ಮತ್ತು ಸ್ಥಿರ ಸ್ವತ್ತುಗಳೆರಡು ಸೇರಿದಂತೆ ಇತರ ಎಲ್ಲಾ ಸ್ವತ್ತುಗಳು, ಆಸ್ತಿಗಳು, ಹೊಣೆಗಾರಿಕೆಗಳು ಮತ್ತು ದಾಯಿತ್ವಗಳ ಸಹಿತವಾಗಿ ಅದರ ಎಲ್ಲಾ ಸ್ವತ್ತುಗಳು ಈ ವಿಶ್ವವಿದ್ಯಾಲಯಕ್ಕೆ ವರ್ಗಾಯಿತವಾಗತಕ್ಕದ್ದು ಮತ್ತು ಅದರಲ್ಲಿ ನಿಹಿತವಾಗತಕ್ಕದ್ದು.

(2) ನಿರ್ದಿಷ್ಟಪಡಿಸಿದ ದಿನಾಂಕಕ್ಕೆ ಮೊದಲು ಸಂದರ್ಭಾನುಸಾರ ಕೃಷಿ ವಿಜ್ಞಾನಗಳ ವಿಶ್ವವಿದ್ಯಾಲಯ, ಬೆಂಗಳೂರು ಅಥವಾ ಕೃಷಿ ವಿಜ್ಞಾನಗಳ ವಿಶ್ವವಿದ್ಯಾಲಯ, ಧಾರವಾಡದಲ್ಲಿ ಯಾವುದೇ ಪರೀಕ್ಷೆಗಾಗಿ ವ್ಯಾಸಂಗ ಮಾಡುತ್ತಿರುವ, (1)ನೇ ಉಪಪ್ರಕರಣದಲ್ಲಿ ನಿರ್ದಿಷ್ಟಪಡಿಸಿದ ಒಂದು ಕಾಲೇಜಿನ ಅಥವಾ ಸಂಸ್ಥೆಯ ಯಾವೊಬ್ಬ ವಿದ್ಯಾರ್ಥಿಯು ಅದಕ್ಕಾಗಿ ಸಿದ್ದತೆ ನಡೆಸಿದ ತನ್ನ ವ್ಯಾಸಂಗ ಕ್ರಮವನ್ನು ಪೂರ್ಣಗೊಳಿಸಲು ಅನುಮತಿ ನೀಡತಕ್ಕದ್ದು ಮತ್ತು ವಿಶ್ವವಿದ್ಯಾಲಯವು ಅಂತಹ ವಿದ್ಯಾರ್ಥಿಗಳಿಗಾಗಿ ಪರೀಕ್ಷೆಗಳನ್ನು ನಡೆಸಲು ವ್ಯವಸ್ಥೆ ಮಾಡತಕ್ಕದ್ದು.

(3) ನಿರ್ದಿಷ್ಟಪಡಿಸಿದ ದಿನಾಂಕಕ್ಕೆ ಮೊದಲು ಕೃಷಿ ವಿಜ್ಞಾನಗಳ ವಿಶ್ವವಿದ್ಯಾಲಯ, ಬೆಂಗಳೂರು ಮತ್ತು ಕೃಷಿ ವಿಜ್ಞಾನಗಳ ವಿಶ್ವವಿದ್ಯಾಲಯ, ಧಾರವಾಡ ಇವು ಪರೀಕ್ಷೆಗಳನ್ನು ನಡೆಸಿ ಫಲಿತಾಂಶಗಳನ್ನು ಘೋಷಿಸಿದ್ದರೆ ಮತ್ತು ಸಂಬಂಧಪಟ್ಟ ಪದವಿಯನ್ನು ಪ್ರದಾನ ಮಾಡಿರದಿದ್ದರೆ ಅಥವಾ ನೀಡಿರದಿದ್ದರೆ ಅಥವಾ ವ್ಯಾಸಂಗ ಕ್ರಮದ ಅಗತ್ಯತೆಗಳನ್ನು ಪೂರೈಸಿದ್ದರೂ ಅಂತಹ ಪರೀಕ್ಷೆಯ ಫಲಿತಾಂಶಗಳನ್ನು ಘೋಷಿಸಿರದಿದ್ದರೆ, ಆಗ ಕೃಷಿ ವಿಜ್ಞಾನಗಳ ವಿಶ್ವವಿದ್ಯಾಲಯ, ಬೆಂಗಳೂರು ಮತ್ತು ಸಂದರ್ಭಾನುಸಾರ ಕೃಷಿ ವಿಜ್ಞಾನಗಳ ವಿಶ್ವವಿದ್ಯಾಲಯ, ಧಾರವಾಡ ಇವುಗಳು ಫಲಿತಾಂಶವನ್ನು ಘೋಷಿಸತಕ್ಕದ್ದು ಮತ್ತು ಪದವಿಯನ್ನು ಪ್ರದಾನ ಮಾಡತಕ್ಕದ್ದು.

(4) ಕೃಷಿ ವಿಜ್ಞಾನಗಳ ವಿಶ್ವವಿದ್ಯಾಲಯ, ಬೆಂಗಳೂರು ಮತ್ತು ಕೃಷಿ ವಿಜ್ಞಾನಗಳ ವಿಶ್ವವಿದ್ಯಾಲಯ, ಧಾರವಾಡ ಇವುಗಳಿಂದ ನಿಯೋಜಿತರಾಗಿದ್ದ, ಯಾವುದೇ ಕಾಲೇಜಿನಲ್ಲಿ, ಸಂಶೋಧನಾ ಕೇಂದ್ರದಲ್ಲಿ ಅಥವಾ (1)ನೇ ಉಪಪ್ರಕರಣದಲ್ಲಿ ನಿರ್ದಿಷ್ಟಪಡಿಸಿದ ಸಂಸ್ಥೆಗಳಲ್ಲಿ ಸೇವೆಸಲ್ಲಿಸುತ್ತಿರುವ ಪ್ರತಿಯೊಬ್ಬ ವ್ಯಕ್ತಿಯು ನಿರ್ದಿಷ್ಟಪಡಿಸಿದ ದಿನಾಂಕದಿಂದ ಈ ವಿಶ್ವವಿದ್ಯಾಲಯಕ್ಕೆ ವರ್ಗಾಯಿಸತಕ್ಕದ್ದು ಹಾಗೂ ಷರತ್ತುಗಳನ್ನು ಮಾರ್ಪಾಡಿಸಿದ ಹೊರತು ಮತ್ತು ಮಾರ್ಪಾಡಿಸುವ ವರೆಗೆ ಹಾಗೇ ವರ್ಗಾವಣೆ ಮಾಡುವ ಬದಲು ಅನ್ವಯವಾಗುತ್ತಿದ್ದ ಸೇವಾ ಷರತ್ತುಗಳ ಮೇಲೆ ಆತನು ವರ್ಗಾಯಿತನಾಗತಕ್ಕದ್ದು ಮತ್ತು ಅವೇ ಸೇವಾ ಷರತ್ತುಗಳು ಅನ್ವಯಿಸುವುದು ಮುಂದುವರೆಯತಕ್ಕದ್ದು.

(5) ಕೃಷಿ ವಿಜ್ಞಾನಗಳ ವಿಶ್ವವಿದ್ಯಾಲಯ, ಬೆಂಗಳೂರು ಅಥವಾ ಕೃಷಿ ವಿಜ್ಞಾನಗಳ ವಿಶ್ವವಿದ್ಯಾಲಯ, ಧಾರವಾಡ ಇವುಗಳಿಂದ ನಿಯೋಜಿತರಾಗಿದ್ದ ಯಾವುದೇ ಕಾಲೇಜಿನಲ್ಲಿ ಸಂಶೋಧನಾ ಕೇಂದ್ರದಲ್ಲಿ ಅಥವಾ (1)ನೇ ಉಪ ಪ್ರಕರಣದಲ್ಲಿ ನಿರ್ದಿಷ್ಟಪಡಿಸಿರದ ಸಂಸ್ಥೆಗಳಲ್ಲಿ ಸೇವೆಸಲ್ಲಿಸುತ್ತಿರುವ ಪ್ರತಿಯೊಬ್ಬ ವ್ಯಕ್ತಿಯು ನಿರ್ದಿಷ್ಟಪಡಿಸಿದ ದಿನಾಂಕದಿಂದ ಆತನ ಆಯ್ಕೆಯ ಮೇಲೆ ತೋಟಗಾರಿಕೆ ವಿಶ್ವವಿದ್ಯಾಲಯಕ್ಕೆ ಹುದ್ದೆಗಳ ಲಭ್ಯತೆಯ ಆಧಾರದ ಮೇಲೆ ವರ್ಗಾಯಿತನಾಗತಕ್ಕದ್ದು. ಅಂತಹ ವ್ಯಕ್ತಿಯ ಒಪ್ಪಿಗೆಯೊಡನೆ ಷರತ್ತುಗಳನ್ನು ಮಾರ್ಪಾಡಿಸಿದ ಹೊರತು ಮತ್ತು ಮಾರ್ಪಾಡಿಸುವವರೆಗೆ, ಹಾಗೆ ವರ್ಗಾವಣೆ ಮಾಡುವುದಕ್ಕೆ ಮೊದಲು ಅನ್ವಯವಾಗುತ್ತಿದ್ದ ಸೇವಾ ಷರತ್ತುಗಳ ಮೇಲೆ ಆತನು ವರ್ಗಾಯಿತನಾಗತಕ್ಕದ್ದು ಹಾಗೂ ಅವೇ ಸೇವಾ ಷರತ್ತುಗಳು ಅನ್ವಯಿಸುವುದು ಮುಂದುವರೆಯತಕ್ಕದ್ದು.

(6) (1)ನೇ ಉಪ ಪ್ರಕರಣದಲ್ಲಿ ನಿರ್ದಿಷ್ಟಪಡಿಸಿರದ ಕೃಷಿ ವಿಜ್ಞಾನಗಳ ವಿಶ್ವವಿದ್ಯಾಲಯ, ಬೆಂಗಳೂರು ಮತ್ತು ಕೃಷಿ ವಿಜ್ಞಾನಗಳ ವಿಶ್ವವಿದ್ಯಾಲಯ, ಧಾರವಾಡ ಇವುಗಳ ಯಾವುದೇ ಕಾಲೇಜುಗಳಲ್ಲಿ ಸಂಶೋಧನಾ ಕೇಂದ್ರಗಳು/ಸಂಸ್ಥೆಗಳಲ್ಲಿ ಬೋಧಕೇತರ ಸಿಬ್ಬಂದಿಯನ್ನು ಹೊರತುಪಡಿಸಿ ಪ್ರತಿಯೊಬ್ಬ ವ್ಯಕ್ತಿಯು ನಿರ್ದಿಷ್ಟಪಡಿಸಿದ ದಿನಾಂಕದಿಂದ ಆತನ ಆಯ್ಕೆಯ ಮೇಲೆ ತೋಟಗಾರಿಕೆ ವಿಶ್ವವಿದ್ಯಾಲಯಕ್ಕೆ ಹುದ್ದೆಗಳ ಲಭ್ಯತೆಯ ಆಧಾರದ ಮೇಲೆ ವರ್ಗಾಯಿತನಾಗತಕ್ಕದ್ದು. ಅಂತಹ ವ್ಯಕ್ತಿಯ ಒಪ್ಪಿಗೆಯೊಡನೆ ಷರತ್ತುಗಳನ್ನು ಮಾರ್ಪಾಡಿಸಿದ ಹೊರತು ಮತ್ತು ಮಾರ್ಪಾಡಿಸುವವರೆಗೆ, ಹಾಗೆ ವರ್ಗಾವಣೆ ಮಾಡುವುದಕ್ಕೆ ಮೊದಲು ಅನ್ವಯವಾಗುತ್ತಿದ್ದ ಸೇವಾ ಷರತ್ತುಗಳ ಮೇಲೆ ಆತನು ವರ್ಗಾಯಿತನಾಗತಕ್ಕದ್ದು ಹಾಗೂ ಅವೇ ಸೇವಾ ಷರತ್ತುಗಳು ಅನ್ವಯಿಸುವುದು ಮುಂದುವರೆಯತಕ್ಕದ್ದು.

(7) ಕೃಷಿ ಮತ್ತು ಸಂಬಂಧಿಸಿದ ವಿಜ್ಞಾನಗಳ ಯಾವೊಬ್ಬ ಅಧ್ಯಾಪಕ ಮತ್ತು ಬೋಧಕೇತರ ವ್ಯಕ್ತಿಯು ತನ್ನ ಮಾತೃ ವಿಶ್ವವಿದ್ಯಾಲಯದಲ್ಲೇ ಉಳಿದು ಕೊಳ್ಳುವ ಇಚ್ಛೆಯನ್ನು ವ್ಯಕ್ತಪಡಿಸಿದರೆ ಮೂರು ವರ್ಷಗಳ ತರುವಾಯ ಮಾತ್ರವೇ ಅವರನ್ನು ತೋಟಗಾರಿಕೆ ವಿಶ್ವವಿದ್ಯಾಲಯ ಮತ್ತು ಮಾತೃ ವಿಶ್ವವಿದ್ಯಾಲಯ ಈ ಎರಡೂ ವಿಶ್ವವಿದ್ಯಾಲಯಗಳ ಕುಲಪತಿಗಳ ಪರಸ್ಪರ ಒಪ್ಪಿಗೆಯ ಮೇಲೆ ಹೊಸ ವಿಶ್ವವಿದ್ಯಾಲಯದಿಂದ ವರ್ಗಾವಣೆ ಮಾಡತಕ್ಕದ್ದು:

ಪರಂತು, ರಾಜ್ಯ ಸರ್ಕಾರದಿಂದ ಕೃಷಿ ವಿಜ್ಞಾನಗಳ ವಿಶ್ವವಿದ್ಯಾಲಯ, ಬೆಂಗಳೂರು ಮತ್ತು ಕೃಷಿ ವಿಜ್ಞಾನಗಳ ವಿಶ್ವವಿದ್ಯಾಲಯ, ಧಾರವಾಡಕ್ಕೆ ಪ್ರತಿನಿಯೋಜಿಸಲಾದ ಯಾವ ವ್ಯಕ್ತಿಯನ್ನೂ ರಾಜ್ಯ ಸರ್ಕಾರದ ಪೂರ್ವಾನುಮೋದನೆ ಇಲ್ಲದೆ ವಿಶ್ವವಿದ್ಯಾಲಯಕ್ಕೆ ವರ್ಗಾಯಿಸತಕ್ಕದ್ದಲ್ಲ:

ಮತ್ತು ಪರಂತು, ರಾಜ್ಯ ಸರ್ಕಾರವು ನಿಯೋಜಿಸಿದ ಆದರೆ ಅನುಸೂಚಿಯಲ್ಲಿ ಹೇಳಿದ ಕಾಲೇಜುಗಳಲ್ಲಿ, ಸಂಶೋಧನಾ ಕೇಂದ್ರಗಳಲ್ಲಿ ಅಥವಾ ಸಂಸ್ಥೆಗಳಲ್ಲಿ ಕಾರ್ಯನಿರ್ವಹಿಸುತ್ತಿರುವ ಯಾವೊಬ್ಬ ವ್ಯಕ್ತಿಯನ್ನು ವಿಶ್ವವಿದ್ಯಾಲಯಕ್ಕೆ ವರ್ಗಾಯಿಸತಕ್ಕದ್ದು. ಆತನ ನಿಯೋಜನೆಯ ದರ್ಜೆ ಬಗ್ಗೆ ರಾಜ್ಯ ಸರ್ಕಾರವು ತೀರ್ಮಾನವನ್ನು ಕೈಗೊಂಡ ಹೊರತು ಮತ್ತು ಅಲ್ಲಿಯವರೆಗೆ ಅವನು ಯಾವ ವೃಂದ ಮತ್ತು ನೇಮಕಾತಿ ನಿಯಮಗಳಡಿಯಲ್ಲಿ ನೇಮಕವಾಗಿರುವನೋ ಅವೇ ನಿಯಮಗಳಿಗೆ ಒಳಪಟ್ಟಿರುವುದು ಮುಂದುವರಿಯತಕ್ಕದ್ದು.

(8) ತೋಟಗಾರಿಕೆಯ ಸ್ನಾತಕೋತ್ತರ ಶಿಕ್ಷಣ ವಿಭಾಗವು ರಾಜ್ಯ ಸರ್ಕಾರವು ಈ ಸಂಬಂಧದಲ್ಲಿ ಅಧಿಸೂಚನೆಯನ್ನು ಹೊರಡಿಸುವವರೆಗೆ ಬೆಂಗಳೂರಿನ ಕೃಷಿ ವಿಜ್ಞಾನಗಳ ವಿಶ್ವವಿದ್ಯಾಲಯದ ಅಡಿಯಲ್ಲಿ ಜಿಕೆವಿಕೆ ಕ್ಯಾಂಪಸ್‌ನಲ್ಲಿಯೇ ಮುಂದುವರೆಯತಕ್ಕದ್ದು.

(9) ವಿಶ್ವವಿದ್ಯಾಲಯಕ್ಕೆ ಅಗತ್ಯವಿರುವ ಫ್ಯಾಕಲ್ಟಿಯನ್ನು ಕೃಷಿ ವಿಜ್ಞಾನಗಳ ವಿಶ್ವವಿದ್ಯಾಲಯ ಜಿಕೆವಿಕೆ ಕ್ಯಾಂಪಸ್ ಇಲ್ಲಿಯ ತೋಟಗಾರಿಕೆ ವಿಭಾಗದಿಂದ ರಾಜ್ಯ ಸರ್ಕಾರವು ಪಡೆದುಕೊಳ್ಳತಕ್ಕದ್ದು.

(10) ಜಿಕೆವಿಕೆ ಕ್ಯಾಂಪಸ್‌ನ ಅರವತ್ತು ಹೆಕ್ಟೇರುಗಳನ್ನು ಒಳಗೊಂಡ ತೋಟಗಾರಿಕೆ ವಿಭಾಗದ ಮೂಲಭೂತ ಸೌಲಭ್ಯವನ್ನು ರಾಜ್ಯ ಸರ್ಕಾರವು ಈ ಸಂಬಂಧದಲ್ಲಿ ಅಧಿಸೂಚನೆಯನ್ನು ಹೊರಡಿಸುವ ಮೂಲಕ ತೋಟಗಾರಿಕೆ ವಿಶ್ವವಿದ್ಯಾಲಯಕ್ಕೆ ವರ್ಗಾಯಿಸತಕ್ಕದ್ದು.

**9. ತಪಾಸಣೆ ಮತ್ತು ನಿಯಂತ್ರಣ.–** (1) ಕುಲಾಧಿಪತಿಯವರು, ಸರ್ಕಾರವು ತಪಾಸಣೆ ಕೋರಿದ್ದರೆ ಅಥವಾ ಸ್ವಪ್ರೇರಣೆಯಿಂದ ತಾನು ನಿರ್ದೇಶಿಸಬಹುದಾದಂಥ ವ್ಯಕ್ತಿ ಅಥವಾ ವ್ಯಕ್ತಿಗಳು ವಿಶ್ವವಿದ್ಯಾಲಯದ ಕಟ್ಟಡಗಳ, ಪ್ರಯೋಗ ಶಾಲೆಗಳ, ಗ್ರಂಥಾಲಯಗಳ, ವಸ್ತು ಸಂಗ್ರಹಾಲಯಗಳ, ವಿದ್ಯಾರ್ಥಿನಿಲಯಗಳ, ಕಾರ್ಯಾಗಾರಗಳ ಮತ್ತು ವಿಶ್ವವಿದ್ಯಾಲಯವು ನಿರ್ವಹಿಸುತ್ತಿರುವ, ಆಡಳಿತ ನಡೆಸುತ್ತಿರುವ ಮಾನ್ಯತೆ ನೀಡಿದ ಅಥವಾ ಅನುಮೋದಿಸಿದ ಸಂಸ್ಥೆಯ ಸಲಕರಣೆಗಳ ಮತ್ತು ವಿಶ್ವವಿದ್ಯಾಲಯವು ನಡೆಸಿದ ಮತ್ತು ಕೈಗೊಂಡ ಪರೀಕ್ಷೆಗಳ, ಅಧ್ಯಾಪನದ ಮತ್ತು ಇತರ ಕಾರ್ಯದ ಬಗ್ಗೆ ತಪಾಸಣೆ ಮಾಡುವಂತೆ ಮಾಡತಕ್ಕದ್ದು ಮತ್ತು ವಿಶ್ವವಿದ್ಯಾಲಯಕ್ಕೆ ಸಂಬಂಧಿಸಿದ ಇತರ ಯಾವುದೇ ವಿಷಯದ ಬಗ್ಗೆ ಅದೇ ರೀತಿಯಲ್ಲಿ ತಪಾಸಣೆ ಮಾಡುವಂತೆ ಅಥವಾ ವಿಚಾರಣೆ ನಡೆಸುವಂತೆ ಮಾಡತಕ್ಕದ್ದು.

(2) (1)ನೇ ಉಪಪ್ರಕರಣದ ಅಡಿಯಲ್ಲಿ ತಪಾಸಣೆ ಅಥವಾ ವಿಚಾರಣೆ ನಡೆಸುವುದಕ್ಕಾಗಿ, ನಿರ್ದೇಶಿತರಾದ ವ್ಯಕ್ತಿ ಅಥವಾ ವ್ಯಕ್ತಿಗಳು, ಆ ಉದ್ದೇಶಕ್ಕಾಗಿ, ಸಂಬಂಧಪಟ್ಟ ಸಂಸ್ಥೆಗಳನ್ನು ಮತ್ತು ಆವರಣಗಳನ್ನು ಪ್ರವೇಶಿಸಲು ಮತ್ತು ಅವಶ್ಯಕವಾಗಬಹುದಾದಂಥ ಲೆಕ್ಕಪತ್ರಗಳನ್ನು ಅಥವಾ ಇತರ ದಾಖಲೆಗಳನ್ನು ಪಡೆದುಕೊಳ್ಳಲು ಅವಕಾಶವಿರತಕ್ಕದ್ದು.

(3) ಅಂಥ ವ್ಯಕ್ತಿ ಅಥವ ವ್ಯಕ್ತಿಗಳು, ತಪಾಸಣೆ ಅಥವಾ ವಿಚಾರಣೆಯ ಒಂದು ವರದಿಯನ್ನು ಕುಲಾಧಿಪತಿಯವರಿಗೆ ಸಲ್ಲಿಸತಕ್ಕದ್ದು ಮತ್ತು ಅದರ ಒಂದು ಪ್ರತಿಯನ್ನು ಸರ್ಕಾರಕ್ಕೆ ಕಳುಹಿಸತಕ್ಕದ್ದು.

(4) ವರದಿಯನ್ನು ಸ್ವೀಕರಿಸಿದ ಮೇಲೆ ಕುಲಾಧಿಪತಿಯವರು ಅದರ ಮೇಲೆ ತನ್ನ ತೀರ್ಮಾನಗಳನ್ನು ದಾಖಲಿಸತಕ್ಕದ್ದು ಮತ್ತು ಅದನ್ನು ಅವಶ್ಯಕವಾಗಬಹುದಾದ ಅಥವಾ ತಾನು ನೀಡುವ ನಿರ್ದೇಶನಗಳಿಗೆ ಅನುಸಾರವಾಗಿ ಮುಂದಿನ ಕ್ರಮ ಕೈಗೊಳ್ಳುವುದಕ್ಕಾಗಿ ರಾಜ್ಯ ಸರ್ಕಾರಕ್ಕೆ ಕಳುಹಿಸತಕ್ಕದ್ದು.

(5) ರಾಜ್ಯ ಸರ್ಕಾರವು, ವಿಚಾರಣೆಯ ವರದಿಯಲ್ಲಿಯ ತೀರ್ಮಾನಗಳಿಗೆ ಸಂಬಂಧಿಸಿದಂತೆ ಕುಲಾಧಿಪತಿಯವರು ಮತ್ತು ಸರ್ಕಾರವು ನೀಡಿದ ನಿರ್ದೇಶನಗಳಿಗೆ ಅನುಸಾರವಾಗಿ ಕ್ರಮ ಕೈಗೊಳ್ಳಲು ಕುಲಪತಿಯವರಿಗೆ ನಿರ್ದೇಶನವನ್ನು ನೀಡತಕ್ಕದ್ದು ಮತ್ತು ಅಂಥ ಕ್ರಮ ತೆಗೆದುಕೊಳ್ಳುವುದಕ್ಕೆ ಒಂದು ಕಾಲಮಿತಿಯನ್ನು ನಿಗದಿಗೊಳಿಸತಕ್ಕದ್ದು.

(6) ಕುಲಪತಿಯು, ಹಾಗೆ ನಿಗದಿಗೊಳಿಸಿದ ಕಾಲಮಿತಿಯೊಳಗೆ, ಸರ್ಕಾರದ ನಿರ್ದೇಶನಗಳಿಗೆ ಅನುಸಾರವಾಗಿ ಕೈಗೊಂಡ ಕ್ರಮದ ಬಗ್ಗೆ ಅಥವಾ ಕೈಗೊಳ್ಳಲು ಉದ್ದೇಶಿಸಿದ ಕ್ರಮದ ಬಗ್ಗೆ ರಾಜ್ಯ ಸರ್ಕಾರಕ್ಕೆ ಒಂದು ವರದಿಯನ್ನು ಕಳುಹಿಸತಕ್ಕದ್ದು.

(7) ಸರ್ಕಾರವು, ನಿಗದಿಪಡಿಸಲಾದ ಕಾಲಮಿತಿಯೊಳಗೆ ತನಗೆ ತೃಪ್ತಿಕರವಾಗುವಂತೆ ವಿಶ್ವವಿದ್ಯಾಲಯವು ಕ್ರಮಕೈಗೊಳ್ಳದಿದ್ದಲ್ಲಿ ಮತ್ತು ವಿಶ್ವವಿದ್ಯಾಲಯವು ನೀಡಿದ ಯಾವುದೇ ವಿವರಣೆ ಅಥವಾ ಸಲ್ಲಿಸಿದ ಮನವಿಯನ್ನು ಪರಿಶೀಲಿಸಿದ ತರುವಾಯ, ತಾನು ಸೂಕ್ತವೆಂದು ಭಾವಿಸಬಹುದಾದಂಥ ನಿರ್ದೇಶನಗಳನ್ನು ನೀಡಬಹುದು ಮತ್ತು ವಿಶ್ವವಿದ್ಯಾಲಯವು ಅಂಥ ನಿರ್ದೇಶನಗಳನ್ನು ಪಾಲಿಸತಕ್ಕದ್ದು.

(8) ಹಿಂದೆ ಹೇಳಿದ ಉಪಪ್ರಕರಣಗಳಲ್ಲಿ ಏನೇ ಇದ್ದರೂ, ವಿಶ್ವವಿದ್ಯಾಲಯದ ವ್ಯವಹಾರಗಳನ್ನು ವಿಶ್ವವಿದ್ಯಾಲಯದ ಧ್ಯೇಯೋದ್ದೇಶಗಳ ಈಡೇರಿಕೆಗೆ ಅಥವಾ ಈ ಅಧಿನಿಯಮದ ಅಥವಾ ಶಾಸನಗಳ ಅಥವಾ ವಿನಿಯಮಗಳ ಉಪಬಂಧಗಳಿಗೆ

ಅಥವಾ ಬೋಧನೆ, ಪರೀಕ್ಷೆಗಳು, ಸಂಶೋಧನೆ ಅಥವಾ ವಿಸ್ತರಣಾ ಶಿಕ್ಷಣದ ಗುಣಮಟ್ಟಗಳನ್ನು ಕಾಯ್ದುಕೊಂಡು ಬರುವಲ್ಲಿ ಅಪೇಕ್ಷಣೀಯವಾದ ವಿಶೇಷ ಕ್ರಮಗಳಿಗೆ ಅನುಸಾರವಾಗಿ ನಿರ್ವಹಿಸುತ್ತಿಲ್ಲವೆಂದು ಯಾವುದೇ ಸಮಯದಲ್ಲಿ ಕುಲಾಧಿಪತಿಯವರು ಅಭಿಪ್ರಾಯಪಟ್ಟರೆ, ತಾವು ಯಾವ ವಿಷಯದ ಬಗ್ಗೆ ವಿವರಣೆಯನ್ನು ಅಪೇಕ್ಷಿಸುವರೋ, ಆ ವಿಷಯವನ್ನು ವಿಶ್ವವಿದ್ಯಾಲಯದ ಗಮನಕ್ಕೆ ತರತಕ್ಕದ್ದು ಮತ್ತು ಕುಲಾಧಿಪತಿಯವರು ನಿರ್ದಿಷ್ಟಪಡಿಸಬಹುದಾದ ಕಾಲಮಿತಿಯ ಒಳಗೆ ಅಂಥ ವಿವರಣೆಯನ್ನು ಕೊಡುವಂತೆ ವಿಶ್ವವಿದ್ಯಾಲಯವನ್ನು ಕೇಳಬಹುದು. ಕುಲಾಧಿಪತಿಯವರು ನಿರ್ದಿಷ್ಟಪಡಿಸಬಹುದಾದ ಅವಧಿಯೊಳಗೆ ಯಾವುದೇ ವಿವರಣೆಯನ್ನು ನೀಡಲು ತಪ್ಪಿದರೆ ಅಥವಾ ನೀಡಿದ ವಿವರಣೆಯು ತೃಪ್ತಿಕರವಾಗಿಲ್ಲವೆಂದು ಕುಲಾಧಿಪತಿಯವರು ಅಭಿಪ್ರಾಯಪಟ್ಟರೆ, ಕುಲಾಧಿಪತಿಯವರು ತಾವು ಅವಶ್ಯಕವೆಂದು ಮತ್ತು ಆ ಪ್ರಕರಣದ ಸನ್ನಿವೇಶಗಳಲ್ಲಿ ಅಪೇಕ್ಷಣೀಯವೆಂದು ಅಭಿಪ್ರಾಯ ಪಡುವಂಥ ಸೂಚನೆಗಳನ್ನು ನೀಡಬಹುದು ಮತ್ತು ಆ ಸೂಚನೆಗಳನ್ನು ಜಾರಿಗೊಳಿಸುವುದಕ್ಕಾಗಿ ಅವಶ್ಯಕವಾದಂಥ ಅಧಿಕಾರಗಳನ್ನು ಚಲಾಯಿಸಬಹುದು.

(9) ಕುಲಾಧಿಪತಿಯವರು ಅಗತ್ಯವೆಂದು ನಿರ್ದೇಶಿಸಬಹುದಾದಂಥ ವಿಶ್ವವಿದ್ಯಾಲಯದ ಆಡಳಿತಕ್ಕೆ ಸಂಬಂಧಪಡುವ ಮಾಹಿತಿಯನ್ನು ವಿಶ್ವವಿದ್ಯಾಲಯವು ಒದಗಿಸತಕ್ಕದ್ದು.

(10) ರಾಜ್ಯ ಸರ್ಕಾರವು, ರಾಜ್ಯ ಪತ್ರದಲ್ಲಿ ಆದೇಶವನ್ನು ಪ್ರಕಟಿಸುವ ಮೂಲಕ ವಿಶ್ವವಿದ್ಯಾಲಯದ ಯಾವುದೇ ಆದೇಶ, ಅಧಿಸೂಚನೆ, ನಿರ್ಣಯ ಅಥವಾ ಯಾವುದೇ ವ್ಯವಹರಣೆಗಳು ಈ ಅಧಿನಿಯಮದ ಅಥವಾ ಶಾಸನಗಳು, ವಿನಿಯಮಗಳು ಅಥವಾ ಪರಿನಿಯಮಗಳ ಉಪಬಂಧಗಳಿಗೆ ಅನುಸಾರವಾಗಿ ಇಲ್ಲವೆಂದು ಅಥವಾ ಅನ್ಯಥಾ ರಾಜ್ಯ ಸರ್ಕಾರದ ನೀತಿಗಳಿಗೆ ಅಸಂಗತವಾಗಿವೆ ಎಂದು ಅಭಿಪ್ರಾಯಪಟ್ಟಲ್ಲಿ ಅವುಗಳನ್ನು ರದ್ದುಗೊಳಿಸಬಹುದು:

ಪರಂತು, ಅಂಥ ಆದೇಶವನ್ನು ಮಾಡುವ ಮೊದಲು ರಾಜ್ಯ ಸರ್ಕಾರವು, ಅಂಥ ಆದೇಶವನ್ನು ಏಕೆ ಮಾಡಕೂಡದೆಂಬ ಬಗ್ಗೆ ಕಾರಣ ತೋರಿಸುವಂತೆ ವಿಶ್ವವಿದ್ಯಾಲಯವನ್ನು ಕೇಳತಕ್ಕದ್ದು ಮತ್ತು ಸಮಂಜಸ ಕಾಲವಧಿಯೊಳಗೆ ಕಾರಣವನ್ನು ತೋರಿಸಿದರೆ ಅದನ್ನು ಪರಿಶೀಲಿಸತಕ್ಕದ್ದು.

**10. ನಿರ್ದೇಶನಗಳನ್ನು ನೀಡಲು ಅಧಿಕಾರ.–** ಕುಲಾಧಿಪತಿಯು, ತಾನಾಗಿಯೇ ಅಥವಾ ರಾಜ್ಯ ಸರ್ಕಾರದ ಶಿಫಾರಸ್ಸಿನ ಮೇಲೆ, ವಿಶ್ವವಿದ್ಯಾಲಯದ ಆಡಳಿತ ಮತ್ತು ವಿದ್ಯಾ ವಿಷಯಕ ಕಾರ್ಯ ನಿರ್ವಹಣೆಯ ಹಿತದೃಷ್ಟಿಯಿಂದ ಅದರಲ್ಲೂ ಶಾಂತಿ ಮತ್ತು ನೆಮ್ಮದಿಯನ್ನು ಕಾಯ್ದುಕೊಂಡು ಬರುವ ದೃಷ್ಟಿಯಿಂದ ಮತ್ತು ಸ್ವತ್ತು ಹಾಗೂ ಹಣಕಾಸುಗಳನ್ನು ಸಂರಕ್ಷಿಸುವುದಕ್ಕಾಗಿ ಅವಶ್ಯಕ ಅಥವ ಯುಕ್ತವಾಗಬಹುದಾದಂಥ ನಿರ್ದೇಶನಗಳನ್ನು ನೀಡಬಹುದು.

## ಅಧ್ಯಾಯ – III

## ವಿಶ್ವವಿದ್ಯಾಲಯದ ಪ್ರಾಧಿಕಾರಗಳು

**11. ವಿಶ್ವವಿದ್ಯಾಲಯದ ಪ್ರಾಧಿಕಾರಗಳು:–** ಈ ಮುಂದಿನವು ವಿಶ್ವವಿದ್ಯಾಲಯದ ಪ್ರಾಧಿಕಾರಗಳಾಗಿರತಕ್ಕದ್ದು ಎಂದರೆ:–

(1) ವ್ಯವಸ್ಥಾಪನಾ ಮಂಡಳಿ

(2) ವಿದ್ಯಾವಿಷಯಕ ಪರಿಷತ್ತು

(3) ಸಂಶೋಧನಾ ಪರಿಷತ್ತು

(4) ವಿಸ್ತರಣಾ ಶಿಕ್ಷಣ ಪರಿಷತ್ತು

(5) ಸ್ನಾತಕೋತ್ತರ ಅಧ್ಯಯನ ಕೇಂದ್ರಗಳು ಮತ್ತು ಅವುಗಳ ಅಧ್ಯಯನ ಮಂಡಳಿಯನ್ನು ಒಳಗೊಂಡಂತೆ ಫ್ಯಾಕಲ್ಟಿಗಳು

(6) ಶಾಸನಗಳ ಮೂಲಕ ವಿಶ್ವವಿದ್ಯಾಲಯದ ಪ್ರಾಧಿಕಾರಗಳು ಎಂಬುದಾಗಿ ಘೋಷಿಸಿರಬಹುದಾದಂಥ ವಿಶ್ವವಿದ್ಯಾಲಯದ ಇತರ ನಿಕಾಯಗಳು

**12. ವ್ಯವಸ್ಥಾಪನಾ ಮಂಡಳಿ ಮತ್ತು ಅದರ ರಚನೆ:–** (1) ಕುಲಾಧಿಪತಿಯವರು ಆದಷ್ಟು ಬೇಗನೆ ಒಂದು ವ್ಯವಸ್ಥಾಪನಾ ಮಂಡಳಿಯನ್ನು ರಚಿಸತಕ್ಕದ್ದು.

(2) ವ್ಯವಸ್ಥಾಪನಾ ಮಂಡಳಿಯು ಈ ಮುಂದಿನವರನ್ನು ಒಳಗೊಂಡಿರತಕ್ಕದ್ದು:–

(i) ಕುಲಪತಿ – ಇವರು ಅಧ್ಯಕ್ಷರಾಗಿರತಕ್ಕದು.

(ii) ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು ಅಥವಾ ಕಾರ್ಯದರ್ಶಿಗಳು ತೋಟಗಾರಿಕೆ ಇಲಾಖೆ ಅಥವಾ ಉಪ ಕಾರ್ಯದರ್ಶಿ ದರ್ಜೆಗಿಂತ ಕಡಿಮೆ ದರ್ಜೆಯವರಲ್ಲದ ಅವರ ನಾಮನಿರ್ದೇಶಿತರು.

(iii) ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು ಅಥವಾ ಕಾರ್ಯದರ್ಶಿಗಳು ಆರ್ಥಿಕ ಇಲಾಖೆ ಅಥವಾ ಉಪ ಕಾರ್ಯದರ್ಶಿ ದರ್ಜೆಗಿಂತ ಕಡಿಮೆ ದರ್ಜೆಯವರಲ್ಲದ ಅವರ ನಾಮನಿರ್ದೇಶಿತರು.

(iv) ಸಭಾಧ್ಯಕ್ಷರು ನಾಮನಿರ್ದೇಶಿಸಿದ ಕರ್ನಾಟಕ ರಾಜ್ಯ ವಿಧಾನ ಸಭೆಯ ಇಬ್ಬರು ಸದಸ್ಯರು ಮತ್ತು ಸಭಾಪತಿಗಳು ನಾಮನಿರ್ದೇಶಿಸಿದ ಕರ್ನಾಟಕ ವಿಧಾನ ಪರಿಷತ್ತಿನ ಒಬ್ಬರು ಸದಸ್ಯರು ;

(v) ನಿರ್ದೇಶಕರು, ತೋಟಗಾರಿಕೆ ಇಲಾಖೆ, ಕರ್ನಾಟಕ ಸರ್ಕಾರ, ಬೆಂಗಳೂರು.

(vi) ಕುಲಾಧಿಪತಿಯವರು ನಾಮನಿರ್ದೇಶಿಸಿದ ತೋಟಗಾರಿಕೆ ಕ್ಷೇತ್ರದಿಂದ (ಪ್ರೊಫೆಸರ್ ದರ್ಜೆಗಿಂತ ಕಡಿಮೆ ದರ್ಜೆಯವರಲ್ಲದ) ಒಬ್ಬ ಖ್ಯಾತ ಶಿಕ್ಷಣ ತಜ್ಞರು.

(vii) ವಿಶ್ವವಿದ್ಯಾಲಯದ ಅಧಿಕಾರ ವ್ಯಾಪ್ತಿಯಲ್ಲಿರುವ ಮೂವರು ಪ್ರಗತಿಪರ ತೋಟಗಾರಿಕಾ ರೈತರು ಇವರ ಪೈಕಿ ಒಬ್ಬರು ಅನುಸೂಚಿತ ಜಾತಿ ಅಥವಾ ಅನುಸೂಚಿತ ಪಂಗಡಕ್ಕೆ ಸೇರಿದವರಾಗಿದ್ದು ಸರ್ಕಾರದಿಂದ ನಾಮನಿರ್ದೇಶಿತರಾಗಿರತಕ್ಕದ್ದು;

(viii) ಕುಲಾಧಿಪತಿಯವರು ನಾಮನಿರ್ದೇಶನ ಮಾಡಿದ ಒಬ್ಬ ತೋಟಗಾರಿಕೆ ಉದ್ಯಮಿ;

(ix) ಗ್ರಾಮೀಣ ಚಟುವಟಿಕೆಯ ಹಿನ್ನೆಲೆಯುಳ್ಳ, ಕುಲಾಧಿಪತಿಯವರು ನಾಮನಿರ್ದೇಶನ ಮಾಡಿದ, ಒಬ್ಬ ಮಹಿಳಾ ಕಾರ್ಯಕರ್ತೆಯವರು;

(x) ಭಾರತೀಯ ಕೃಷಿ ಸಂಶೋಧನಾ ಪರಿಷತ್ತಿನ ಮಹಾ ನಿರ್ದೇಶಕರು ನಾಮನಿರ್ದೇಶನ ಮಾಡಿದ ಒಬ್ಬ ಪ್ರತಿನಿಧಿ;

(xi) ವಿಶ್ವವಿದ್ಯಾಲಯದ ಶಿಕ್ಷಣ ನಿರ್ದೇಶಕರು;

(xii) ಕುಲಪತಿಯವರು ನಾಮನಿರ್ದೇಶನ ಮಾಡಿದ ಒಬ್ಬ ಡೀನ್ – ಸುತ್ತು ಸರದಿಯ ಮೇಲೆ ಎರಡು ವರ್ಷಗಳ ಅವಧಿಯವರೆಗೆ;

(xiii) ಕುಲಸಚಿವರು, ಇವರು ಸದಸ್ಯ ಕಾರ್ಯದರ್ಶಿಯಾಗಿರತಕ್ಕದ್ದು;

(3) ಪದನಿಮಿತ್ತ ಸದಸ್ಯರುಗಳನ್ನು ಹೊರತುಪಡಿಸಿ ಮಂಡಳಿಯ ಸದಸ್ಯರ ಪದಾವಧಿಯು ಸಂಧರ್ಭಾನುಸಾರ ಸರ್ಕಾರ ಅಥವಾ ಕುಲಾಧಿಪತಿಯವರ ಇಚ್ಛೆಗೊಳಪಟ್ಟು ಮೂರು ವರ್ಷಗಳಾಗಿರತಕ್ಕದ್ದು ಮತ್ತು ಅವರುಗಳು ವಿಶ್ವವಿದ್ಯಾಲಯದ ಯಾವುದೇ ಪ್ರಾಧಿಕಾರಕ್ಕೆ ಯಾವುದೇ ಪ್ರವರ್ಗದಲ್ಲಿ ಪುನರ್ ನಾಮನಿರ್ದೇಶನಕ್ಕೆ ಅರ್ಹರಾಗಿರತಕ್ಕದ್ದಲ್ಲ;

(4) ಪದಾವಧಿ ಮುಕ್ತಾಯವಾದ ಸಂದರ್ಭವನ್ನು ಹೊರತುಪಡಿಸಿ ಮರಣ, ರಾಜೀನಾಮೆ, ತೆಗೆದು ಹಾಕುವಿಕೆ ಅಥವಾ ಯಾವುದೇ ಇತರ ಕಾರಣಗಳಿಂದಾಗಿ ಯಾವೊಬ್ಬ ಸದಸ್ಯರ ಸ್ಥಾನವು ಖಾಲಿಯಾದಾಗ ಆ ಖಾಲಿ ಸ್ಥಾನವನ್ನು ಈ ಅಧಿನಿಯಮದ ಉಪಬಂಧಗಳಿಗೆ ಅನುಸಾರವಾಗಿ ಭರ್ತಿ ಮಾಡತಕ್ಕದ್ದು ಮತ್ತು ಅಂತಹ ಖಾಲಿ ಸ್ಥಾನವನ್ನು ತುಂಬುವ ವ್ಯಕ್ತಿಯು ಯಾರ ಖಾಲಿ ಸ್ಥಾನಕ್ಕೆ ಆತನು ನಾಮನಿರ್ದೇಶಿತನಾಗಿದ್ದಾನೆಯೋ ಆ ವ್ಯಕ್ತಿಯ ಉಳಿದ ಪದಾವಧಿವರೆಗೆ ಆ ಸ್ಥಾನವನ್ನು ಹೊಂದಿರತಕ್ಕದ್ದು.

(5) ಮಂಡಳಿಯ ಸಭೆಗಾಗಿ ಮಂಡಳಿಯ ಸದಸ್ಯರ ಮೂರನೇ ಒಂದು ಭಾಗದಷ್ಟು ಸದಸ್ಯರು ಸಭೆಯ ಕೋರಂ ಆಗಿರತಕ್ಕದ್ದು:

ಪರಂತು, ಕೋರಂ ಇಲ್ಲದಿದುದರಿಂದಾಗಿ ಮಂಡಳಿಯ ಒಂದು ಸಭೆಯನ್ನು ಮುಂದೂಡಿದ್ದರೆ, ಅದೇ ವ್ಯವಹಾರಗಳನ್ನು ನಡೆಸುವುದಕ್ಕಾಗಿ ಕರೆದ ಮುಂದಿನ ಸಭೆಯಲ್ಲಿ ಕೋರಂನ ಅವಶ್ಯಕತೆ ಇರುವುದಿಲ್ಲ.

(6) ವಿಶ್ವವಿದ್ಯಾಲಯದ ಅಧಿಕಾರಿಗಳನ್ನು ಹೊರತುಪಡಿಸಿ ಮಂಡಳಿಯ ಸದಸ್ಯರು ಈ ಅಧಿನಿಯಮದ ಅಡಿಯಲ್ಲಿ ತಾವು ನೆರವೇರಿಸಿದ ಪ್ರಕಾರ್ಯಗಳಿಗೆ, ನಿಯಮಿಸಬಹುದಾದಂಥ ದಿನ ಭತ್ಯೆ, ಪ್ರಯಾಣ ಭತ್ಯೆಯನ್ನು ಹೊರತುಪಡಿಸಿ ಯಾವುದೇ ಸಂಭಾವನೆಯನ್ನು ಪಡೆಯಲು ಅರ್ಹರಾಗಿರತಕ್ಕದ್ದಲ್ಲ.

(7) ಮಂಡಳಿಯು ತನ್ನ ಸಭೆಯಲ್ಲಿ ಪರಿಶೀಲಿಸುತ್ತಿರುವ ಯಾವುದೇ ವಿಷಯಗಳ ಬಗ್ಗೆ ತಜ್ಞ ಸಲಹೆ ಪಡೆಯಲು ಆ ವಿಷಯಗಳಲ್ಲಿ ಪರಿಣತಿ ಅಥವಾ ವಿಶೇಷ ಜ್ಞಾನವನ್ನು ಉಳ್ಳ ಯಾವೊಬ್ಬ ವ್ಯಕ್ತಿಯನ್ನು ತನ್ನ ಸಭೆಗೆ ಹಾಜರಾಗಲು ಆಹ್ವಾನಿಸಬಹುದು. ಅಂತಹ ವ್ಯಕ್ತಿಯು ಅಂತಹ ಸಭೆಯ ವ್ಯವಹರಣೆಗಳಲ್ಲಿ ಮಾತನಾಡಬಹುದು ಅಥವಾ ಅನ್ಯಥಾ ಭಾಗವಹಿಸಬಹುದು. ಆದರೆ ಆತನು ಮತದಾನದ ಹಕ್ಕನ್ನು ಹೊಂದಿರುವುದಿಲ್ಲ. ಹಾಗೆ ಆಹ್ವಾನಿತರಾದ ಯಾವೊಬ್ಬ ವ್ಯಕ್ತಿಯು ಸಭೆಗೆ ಹಾಜರಾಗಿದ್ದಕ್ಕಾಗಿ ನಿಯಮಿಸಬಹುದಾದಂತಹ ಭತ್ಯೆ ಪಡೆಯಲು ಅರ್ಹರಾಗಿರತಕ್ಕದ್ದು.

(8) ಸಾಮಾನ್ಯವಾಗಿ ಮಂಡಳಿಯು ಪ್ರತಿ ಮೂರು ತಿಂಗಳಿಗೊಮ್ಮೆ ಕನಿಷ್ಠ ಒಂದು ಬಾರಿಯಾದರೂ ಕುಲಪತಿಯವರು ನಿಗದಿಪಡಿಸುವಂಥ ದಿನಾಂಕ ಮತ್ತು ಸ್ಥಳದಲ್ಲಿ ಸೇರತಕ್ಕದ್ದು. ಆದಾಗ್ಯೂ ಕುಲಪತಿಯವರು ತಾನು ಸೂಕ್ತವೆಂದು ಭಾವಿಸದಾಗಲೆಲ್ಲ, ಮಂಡಳಿಯ ಅರ್ಧಕ್ಕಿಂತ ಕಡಿಮೆಯಲ್ಲದ ಸದಸ್ಯರು ಬರೆದು ಸಹಿ ಮಾಡಿ ಕೋರಿಕೊಂಡಾಗ ಮಂಡಳಿಯ ವಿಶೇಷ ಸಭೆಯನ್ನು ಕರೆಯಬಹುದು.

**13. ಮಂಡಳಿಯ ಅಧಿಕಾರಗಳು ಮತ್ತು ಪ್ರಕಾರ್ಯಗಳು.–** (1) ಈ ಅಧಿನಿಯಮದ ಮತ್ತು ಶಾಸನಗಳ ಉಪಬಂಧಗಳಿಗೆ ಒಳಪಟ್ಟು, ಮಂಡಳಿಯು ವಿಶ್ವವಿದ್ಯಾಲಯದ ಮುಖ್ಯ ಕಾರ್ಯಕಾರಿ ನಿಕಾಯ ಆಗಿರತಕ್ಕದ್ದು ಮತ್ತು ವಿಶ್ವವಿದ್ಯಾಲಯದ ಸ್ವತ್ತುಗಳು ಮತ್ತು ಚಟುವಟಿಕೆಗಳನ್ನು ನಿರ್ವಹಿಸತಕ್ಕದ್ದು ಹಾಗೂ ಮೇಲ್ವಿಚಾರಣೆ ನಡೆಸತಕ್ಕದ್ದು ಮತ್ತು ಈ ಅಧಿನಿಯಮದಲ್ಲಿ ಅನ್ಯಥಾ ಉಪಬಂಧಿಸಿರದ ಹೊರತು ವಿಶ್ವವಿದ್ಯಾಲಯದ ಎಲ್ಲಾ ಆಡಳಿತಾತ್ಮಕ ವ್ಯವಹಾರಗಳನ್ನು ನಡೆಸಲು ಜವಾಬ್ದಾರಿಯಾಗಿರತಕ್ಕದ್ದು.

(2) (1)ನೇ ಉಪಪ್ರಕರಣದ ಉಪಬಂಧಗಳ ಸಾಮಾನ್ಯಾನ್ವಯಕ್ಕೆ ಬಾಧಕವಾಗದಂತೆ ಮಂಡಳಿಯು ಈ ಮುಂದಿನ ಅಧಿಕಾರಗಳನ್ನು ಚಲಾಯಿಸತಕ್ಕದ್ದು ಮತ್ತು ಪ್ರಕಾರ್ಯಗಳನ್ನು ನೆರವೇರಿಸತಕ್ಕದ್ದು, ಎಂದರೆ:–

(i) ವಿಶ್ವವಿದ್ಯಾಲಯದ ಹಣಕಾಸು ಅಂದಾಜುಗಳು ಮತ್ತು ಆಯವ್ಯಯವನ್ನು ಪರಿಗಣಿಸುವುದು ಮತ್ತು ಅನುಮೋದಿಸುವುದು;

(ii) ವಿಶ್ವವಿದ್ಯಾಲಯದ ಸ್ವತ್ತನ್ನು ಮತ್ತು ನಿಧಿಗಳನ್ನು ಹೊಂದಿರುವುದು ಮತ್ತು ನಿಯಂತ್ರಿಸುವುದು ಹಾಗೂ ವಿಶ್ವವಿದ್ಯಾಲಯದ ಪರವಾಗಿ ಯಾವುದೇ ಸಾಮಾನ್ಯ ನಿರ್ದೇಶನಗಳನ್ನು ಹೊರಡಿಸುವುದು;

(iii) ಸರ್ಕಾರದ ಪೂರ್ವ ಅನುಮೋದನೆಯೊಡನೆ, ವಿಶ್ವವಿದ್ಯಾಲಯದ ಪರವಾಗಿ ಯಾವುದೇ ಸ್ಥಿರ ಅಥವಾ ಚರ ಸ್ವತ್ತನ್ನು ಸ್ವೀಕರಿಸುವುದು ಅಥವಾ ವರ್ಗಾವಣೆ ಮಾಡುವುದು;

(iv) ವಿಶ್ವವಿದ್ಯಾಲಯದ ವಶದಲ್ಲಿ ಇರುವ ನಿಧಿಗಳನ್ನು ಅವನ್ನು ಇಟ್ಟಿರುವ ಉದ್ದೇಶಕ್ಕಾಗಿ ವಿನಿಯೋಗಿಸುವುದು;

(v) ವಿಶ್ವವಿದ್ಯಾಲಯದ ನಿಧಿಗಳನ್ನು ಹೂಡುವುದಕ್ಕಾಗಿ ಮತ್ತು ಹಿಂಪಡೆಯುವುದಕ್ಕಾಗಿ ವ್ಯವಸ್ಥೆ ಮಾಡುವುದು;

(vi) ಸರ್ಕಾರದ ಪೂರ್ವಾನುಮೋದನೆಯೊಡನೆ ಬಂಡವಾಳವನ್ನು ಹೂಡುವುದಕ್ಕಾಗಿ ಹಣವನ್ನು ತರುವುದು ಮತ್ತು ಅದರ ವಾಪಸಾತಿಗೆ ಸೂಕ್ತ ವ್ಯವಸ್ಥೆಯನ್ನು ಮಾಡುವುದು;

(vii) ವಿಶ್ವವಿದ್ಯಾಲಯದ ಪರವಾಗಿ ದತ್ತಿ, ಮರಣ ಶಾಸನದಾನ ಮತ್ತು ವಂತಿಕೆಗಳನ್ನು ಒಪ್ಪಿಕೊಳ್ಳುವುದು;

(viii) ಅಗತ್ಯವಿದ್ದಲ್ಲೆಲ್ಲಾ ವಿದ್ಯಾವಿಷಯಕ ಪರಿಷತ್ತು, ಸಂಶೋಧನಾ ಪರಿಷತ್ತು ಮತ್ತು ವಿಸ್ತಾರಣಾ ಶಿಕ್ಷಣ ಪರಿಷತ್ತಿನ ಶಿಫಾರಸ್ಸುಗಳನ್ನು ಪರಿಗಣಿಸುವುದು ಮತ್ತು ಅನುಮೋದಿಸುವುದು.

(ix) ವಿಶ್ವವಿದ್ಯಾಲಯದ ಸಾಮಾನ್ಯ ಮೊಹರಿನ ನಮೂನೆ ಮತ್ತು ಉಪಯೋಗದ ಬಗ್ಗೆ ನಿರ್ದೇಶಿಸುವುದು;

(x) ಈ ಅಧಿನಿಯಮದ ಮತ್ತು ಶಾಸನಗಳ ಉಪಬಂಧಗಳಿಗೆ ಅನುಸಾರವಾಗಿ ತಾನು ಅವಶ್ಯವೆಂದು ಭಾವಿಸಬಹುದಾದಂಥ ಸಮಿತಿಗಳನ್ನು ಮತ್ತು ನಿಕಾಯಗಳನ್ನು ನೇಮಿಸುವುದು ಮತ್ತು ಅವುಗಳ ಪರಿಶೀಲನಾಂಶಗಳನ್ನು ನಿರ್ಧರಿಸುವುದು;

(xi) ವಿದ್ಯಾವಿಷಯಕ ಪರಿಷತ್ತಿನ ಶಿಫಾರಸ್ಸಿನ ಮೇಲೆ ಹೊಸ ವಿಭಾಗ, ಕೇಂದ್ರ, ಸಂಶೋಧನಾ ಕೇಂದ್ರ ಅಥವಾ ಉಪ ಕೇಂದ್ರವನ್ನು ಸ್ಥಾಪಿಸುವುದು ಅಥವಾ ಅವುಗಳ ಪೈಕಿ ಯಾವುದಾದರೊಂದನ್ನು ರದ್ದುಗೊಳಿಸುವುದು ಅಥವಾ ವಿಭಾಗ, ಸಂಶೋಧನಾ ಕೇಂದ್ರ, ಉಪ ಕೇಂದ್ರ ಅಥವಾ ಕೇಂದ್ರವನ್ನು ಪುನರ್ ರಚಿಸುವ ಬಗ್ಗೆ ಪರಿಗಣಿಸುವುದು ಮತ್ತು ಅನುಮೋದಿಸುವುದು;

(xii) ವಿದ್ಯಾವಿಷಯಕ ಪರಿಷತ್ತಿನ ಶಿಫಾರಸ್ಸಿನ ಮೇಲೆ ಹೊಸ ಕಾಲೇಜು ಅಥವಾ ಫ್ಯಾಕಲ್ಟಿಯನ್ನು ಸ್ಥಾಪಿಸುವುದು ಅಥವಾ ಎರಡು ಅಥವಾ ಹೆಚ್ಚು ಕಾಲೇಜುಗಳನ್ನು ಅಥವಾ ಫ್ಯಾಕಲ್ಟಿಗಳನ್ನು ಒಂದೇ ಕಾಲೇಜಿನಲ್ಲಿ ಅಥವಾ ಫ್ಯಾಕಲ್ಟಿಯಲ್ಲಿ ಸೇರಿಸುವುದು ಅಥವಾ ಕಾಲೇಜನ್ನು ಅಥವಾ ಫ್ಯಾಕಲ್ಟಿಯನ್ನು ಮುಚ್ಚುವುದು ಅಥವಾ ಪ್ರಸ್ತುತ ಇರುವ ಯಾವುದೇ ಫ್ಯಾಕಲ್ಟಿಯನ್ನು ಪುನರ್ ರಚಿಸುವ ಬಗ್ಗೆ ಪರಿಗಣಿಸುವುದು ಮತ್ತು ಅನುಮೋದಿಸುವುದು;

(xiii) ರಾಜ್ಯ ಸರ್ಕಾರದ ಅನುಮೋದನೆಯೊಡನೆ ಬೋಧಕ ಮತ್ತು ಬೋಧಕೇತರ ಹುದ್ದೆಗಳನ್ನು ಸೃಜಿಸುವುದು.

(xiv) ವಿಶ್ವವಿದ್ಯಾಲಯದ ಅಧಿಕಾರಿಗಳು, ಅಧ್ಯಾಪಕರು ಮತ್ತು ಸಹಾಯಕ ಪ್ರಾಧ್ಯಾಪಕ ಮತ್ತು ಹೆಚ್ಚಿನ ಶ್ರೇಣಿಯ ನೌಕರರ ನೇಮಕಾತಿಗಾಗಿ ಶಿಫಾರಸ್ಸುಗಳನ್ನು ನಿಯಮಿಸಬಹುದಾದಂತೆ ಅನುಮೋದಿಸಬಹುದು.

(xv) ತುರ್ತು ಸನ್ನಿವೇಶದ ಸಂದರ್ಭದಲ್ಲಿ ಯಾವುದೇ ಮಂಡಳಿಯ ಬಾಬನ್ನು ಕಡತ ಪರಿಚಲಿಸುವ ಮೂಲಕ ಪರಿಗಣಿಸುವುದು ಮತ್ತು ಅನುಮೋದಿಸುವುದು.

**14. ವಿದ್ಯಾವಿಷಯಕ ಪರಿಷತ್ತು.–** (1) ವಿದ್ಯಾವಿಷಯಕ ಪರಿಷತ್ತು ಈ ಮುಂದಿನ ಸದಸ್ಯರನ್ನು ಒಳಗೊಂಡಿರತಕ್ಕದ್ದು ಅಂದರೆ :–

(i) ಕುಲಪತಿಯವರು, ಇವರು ಅಧ್ಯಕ್ಷರಾಗಿರುತ್ತಾರೆ;

(ii) ಸಂಶೋಧನೆ ಮತ್ತು ವಿಸ್ತರಣಾ ಶಿಕ್ಷಣದ ನಿರ್ದೇಶಕರು;

(iii) ಘಟಕ ಕಾಲೇಜುಗಳ ಡೀನುಗಳು;

(iv) ಕುಲಪತಿಯವರು ನಾಮನಿರ್ದೇಶನ ಮಾಡಿದ ವಿಶ್ವವಿದ್ಯಾಲಯದ ಇಬ್ಬರು ವಿಭಾಗ ಮುಖ್ಯಸ್ಥರು ಸುತ್ತು ಸರದಿಯ ಮೇಲೆ;

(v) ಕುಲಪತಿಯವರು ನಾಮನಿರ್ದೇಶನ ಮಾಡಿದ ಪ್ರತಿಯೊಂದು ಫ್ಯಾಕಲ್ಟಿಯಿಂದ ಪ್ರೊಫೆಸರ್ ದರ್ಜೆಗಿಂತ ಕಡಿಮೆ ದರ್ಜೆಯವರಲ್ಲದ ಒಬ್ಬ ಅಧ್ಯಾಪಕರು ಸುತ್ತು ಸರದಿಯ ಮೇಲೆ;

(vi) ಕುಲಪತಿಯವರು ನಾಮನಿರ್ದೇಶನ ಮಾಡಿದ ವಿಶ್ವವಿದ್ಯಾಲಯದ ಹೊರಗಿನಿಂದ ಒಬ್ಬ ಪ್ರಖ್ಯಾತ ತೋಟಗಾರಿಕೆ ಶಿಕ್ಷಣ ತಜ್ಞರು;

(vii) ಕುಲಸಚಿವರು;

(viii) ತೋಟಗಾರಿಕೆ ನಿರ್ದೇಶಕರು, ಕರ್ನಾಟಕ ಸರ್ಕಾರ ಅಥವಾ ಜಂಟಿ ನಿರ್ದೇಶಕರ ದರ್ಜೆಗಿಂತ ಕಡಿಮೆ ದರ್ಜೆಯವರಲ್ಲದ ಅವರ ನಾಮನಿರ್ದೇಶಿತರು;

(ix) ಕುಲಪತಿಯವರು ನಾಮನಿರ್ದೇಶನ ಮಾಡಿದ ಪ್ರೊಫೆಸರ್ ದರ್ಜೆಗಿಂತ ಕಡಿಮೆ ದರ್ಜೆಯವರಲ್ಲದ ಸಂಯೋಜಿತ ಕಾಲೇಜಿನ ಒಬ್ಬ ಪ್ರತಿನಿಧಿ ;

(X) ಶಿಕ್ಷಣ ನಿರ್ದೇಶಕರು – ಇವರು ಸದಸ್ಯ ಕಾರ್ಯದರ್ಶಿಯಾಗಿರತಕ್ಕದ್ದು.

(2) ತೋಟಗಾರಿಕೆ ಮತ್ತು ಸಂಬಂಧಿತ ಕ್ಷೇತ್ರದ ವಿವಿಧ ವಲಯಗಳ ಸಾಕಷ್ಟು ಪ್ರಾತಿನಿಧ್ಯ ಪಡೆದುಕೊಳ್ಳುವುದಕ್ಕೆ ಸಾಧ್ಯವಾಗುವಂತೆ ನಿಯಮಿಸಬಹುದಾದಂತಹ ಅವಧಿಗಾಗಿ ಮತ್ತು ಅಂತಹ ರೀತಿಯಲ್ಲಿ ಇಬ್ಬರು ವ್ಯಕ್ತಿಗಳನ್ನು ಮೀರದಂತೆ ಸದಸ್ಯರನ್ನು ವಿದ್ಯಾವಿಷಯಕ ಪರಿಷತ್ತು ಸಹ–ಆಯ್ಕೆ (ಕೋ–ಆಪ್ಟ್) ಮಾಡಿಕೊಳ್ಳತಕ್ಕದ್ದು.

(3) ಪದನಿಮಿತ್ತ ಸದಸ್ಯರ ಹೊರತಾಗಿ ಇತರ ವಿದ್ಯಾವಿಷಯಕ ಪರಿಷತ್ತಿನ ಸದಸ್ಯರು, ಎರಡು ವರ್ಷಗಳ ಅವಧಿಯವರೆಗೆ ಪದಧಾರಣ ಮಾಡತಕ್ಕದ್ದು.

(4) ವಿದ್ಯಾವಿಷಯಕ ಪರಿಷತ್ತಿನ ಮೂರನೇ ಒಂದರಷ್ಟು ಸದಸ್ಯರ ಹಾಜರಾತಿ ವಿದ್ಯಾವಿಷಯಕ ಪರಿಷತ್ತಿನ ಸಭೆಗೆ ಕೋರಂ ಆಗಿರತಕ್ಕದ್ದು :

ಪರಂತು ಕೋರಂ ಇಲ್ಲದಿದ್ದುದರಿಂದಾಗಿ ವಿದ್ಯಾವಿಷಯಕ ಪರಿಷತ್ತಿನ ಒಂದು ಸಭೆಯನ್ನು ಮುಂದೂಡಿದ್ದರೆ, ಅದೇ ವ್ಯವಹಾರಗಳನ್ನು ನಡೆಸುವುದಕ್ಕಾಗಿ ಕರೆದ ಮುಂದಿನ ಸಭೆಯಲ್ಲಿ ಕೋರಂನ ಅವಶ್ಯಕತೆ ಇರುವುದಿಲ್ಲ.

(5) ವಿದ್ಯಾವಿಷಯಕ ಪರಿಷತ್ತಿಗೆ ನಾಮನಿರ್ದೇಶನಗೊಂಡ ಯಾವೊಬ್ಬ ಸದಸ್ಯನನ್ನು ಕುಲಪತಿಯವರು ಯಾವುದೇ ಸಮಯದಲ್ಲಿ ದುರ್ವರ್ತನೆ, ದುರ್ನಡತೆ ಅಥವಾ ಅನ್ಯಥಾ ಕಾರಣದ ಮೇಲೆ ವಿಚಾರಣೆ ನಡೆಸಿದ ತರುವಾಯ ಅಂತಹ ಸದಸ್ಯತ್ವದಿಂದ ತೆಗೆದು ಹಾಕಬಹುದು.

(6) ಸಾಮಾನ್ಯವಾಗಿ ವಿದ್ಯಾವಿಷಯಕ ಪರಿಷತ್ತು ಕುಲಪತಿಯವರು ನಿಗದಿಪಡಿಸಬಹುದಾದಂತಹ ದಿನಾಂಕದಂದು, ಕೊನೆಪಕ್ಷ ಮೂರು ತಿಂಗಳಿಗೊಮ್ಮೆ ಸಭೆ ಸೇರತಕ್ಕದ್ದು. ಆದಾಗ್ಯೂ ಕುಲಪತಿಯವರು ವಿದ್ಯಾವಿಷಯಕ ಪರಿಷತ್ತಿನ ವಿಶೇಷ ಸಭೆಯನ್ನು ಕರೆಯಬಹುದು

**15. ವಿದ್ಯಾವಿಷಯಕ ಪರಿಷತ್ತಿನ ಅಧಿಕಾರಗಳು ಮತ್ತು ಪ್ರಕಾರ್ಯಗಳು.–** (1) ವಿದ್ಯಾವಿಷಯಕ ಪರಿಷತ್ತು ಈ ಅಧ್ಯಾದೇಶದ ಮತ್ತು ಶಾಸನಗಳ ಉಪಬಂಧಗಳಿಗೆ ಒಳಪಟ್ಟು ಎಲ್ಲಾ ವ್ಯಾಸಂಗ ಕ್ರಮಗಳನ್ನು ಮತ್ತು ಪಠ್ಯ ವಿಷಯಗಳನ್ನು ನಿರ್ಧರಿಸುವುದಕ್ಕಾಗಿ ಈ ನಿಯಮಗಳನ್ನು ರಚಿಸುವ ಅಧಿಕಾರವನ್ನು ಹೊಂದಿರತಕ್ಕದ್ದು ಮತ್ತು ವಿಶ್ವವಿದ್ಯಾಲಯದೊಳಗೆ ಬೋಧನೆ ಮತ್ತು ಇತರ ಶೈಕ್ಷಣಿಕ ಕಾರ್ಯಕ್ರಮಗಳ ಮೇಲೆ ಸಾಮಾನ್ಯ ನಿಯಂತ್ರಣವನ್ನು ಹೊಂದಿರತಕ್ಕದ್ದು ಮತ್ತು ಅವುಗಳ ಗುಣಮಟ್ಟವನ್ನು ಕಾಯ್ದುಕೊಂಡು ಬರುವುದಕ್ಕೆ ಹೊಣೆಯಾಗಿರತಕ್ಕದ್ದು.

(2) ವಿದ್ಯಾವಿಷಯಕ ಪರಿಷತ್ತು ತನ್ನ ನಿಯಂತ್ರಣಕ್ಕೊಳಪಡುವ ಎಲ್ಲಾ ವಿದ್ಯಾ ವಿಷಯಗಳಿಗೆ ಸಂಬಂಧಪಟ್ಟಂತೆ ಈ ಅಧಿನಿಯಮಕ್ಕೆ ಮತ್ತು ಪರಿನಿಯಮಗಳಿಗೆ ಸುಸಂಗತವಾದ ವಿನಿಯಮಗಳನ್ನು ರಚಿಸಲು ಮತ್ತು ಅಂತಹ ವಿನಿಯಮಗಳನ್ನು ನಿರಸನಗೊಳಿಸಲು ಅಧಿಕಾರ ಹೊಂದಿರತಕ್ಕದ್ದು. (1)ನೇ ಉಪ ಪ್ರಕರಣದ ಉಪಬಂಧಗಳ ಸಾಮಾನ್ಯಾನ್ವಯಕ್ಕೆ

ಪ್ರತಿಕೂಲವಾಗದಂತೆ ವಿದ್ಯಾವಿಷಯಕ ಪರಿಷತ್ತು ಈ ಮುಂದಿನ ಅಧಿಕಾರಗಳನ್ನು ಚಲಾಯಿಸತಕ್ಕದ್ದು ಮತ್ತು ಪ್ರಕಾರ್ಯಗಳನ್ನು ನೆರವೇರಿಸತಕ್ಕದ್ದು, ಎಂದರೆ :–

(i) ಗ್ರಂಥಾಲಯಗಳ ನಿಯಂತ್ರಣ ಮತ್ತು ನಿರ್ವಹಣೆಯೂ ಸೇರಿದಂತೆ, ಎಲ್ಲಾ ವಿದ್ಯಾ ವಿಷಯಗಳ ಬಗ್ಗೆ ಮಂಡಳಿಗೆ ಮತ್ತು ಕುಲಪತಿಯವರಿಗೆ ಸಲಹೆ ನೀಡುವುದು;

(ii) ಸಂಶೋಧನೆ ಮತ್ತು ವಿಸ್ತರಣಾ ಶಿಕ್ಷಣದಲ್ಲಿನ ಹುದ್ದೆಗಳೂ ಸೇರಿದಂತೆ ಪ್ರಾಧ್ಯಾಪಕರ, ಸಹವರ್ತಿ ಪ್ರಾಧ್ಯಾಪಕರ, ಸಹಾಯಕ ಪ್ರಾಧ್ಯಾಪಕರ ಹುದ್ದೆಗಳನ್ನು ಪ್ರಾರಂಭಿಸುವುದು ಮತ್ತು ಅವುಗಳ ಕರ್ತವ್ಯಗಳಿಗೆ ಸಂಬಂಧಪಟ್ಟಂತೆ ಶಿಫಾರಸ್ಸುಗಳನ್ನು ಮಾಡುವುದು;

(iii) ಫ್ಯಾಕಲ್ಟಿ, ಕಾಲೇಜು, ಬೋಧನ, ಸಂಶೋಧನೆ ಮತ್ತು ವಿಸ್ತರಣಾ ಶಿಕ್ಷಣ ವಿಭಾಗಗಳನ್ನು ಸ್ಥಾಪಿಸಲು/ಸಮ್ಮಿಲನ/ ರದ್ದುಗೊಳಿಸಲು ಶಿಫಾರಸ್ಸುಗಳನ್ನು ಮಾಡುವುದು;

(iv) ವಿಶ್ವವಿದ್ಯಾಲಯಕ್ಕೆ, ವಿದ್ಯಾರ್ಥಿಗಳಿಗೆ ಪ್ರವೇಶ ನೀಡಲು ವಿನಿಯಮಗಳನ್ನು ರಚಿಸುವುದು ಮತ್ತು ಪ್ರವೇಶ ನೀಡಬೇಕಾದ ವಿದ್ಯಾರ್ಥಿಗಳ ಸಂಖ್ಯೆಯನ್ನು ನಿರ್ಧರಿಸುವುದು;

(v) ಪದವಿಗಳು, ಡಿಪ್ಲೋಮಾಗಳು ಮತ್ತು ಸರ್ಟಿಫಿಕೇಟ್ ಕೋರ್ಸ್‌ಗಳಿಗೆ ಬೇಕಾದ ವ್ಯಾಸಂಗ ಕ್ರಮಗಳಿಗೆ ಸಂಬಂಧಿಸಿದ ವಿನಿಯಮಗಳನ್ನು ರಚಿಸುವುದು;

(vi) ಪರೀಕ್ಷೆಗಳನ್ನು ನಡೆಸುವುದಕ್ಕೆ ಸಂಬಂಧಪಡುವ ವಿನಿಯಮಗಳನ್ನು ರಚಿಸುವುದು ಮತ್ತು ಶಿಕ್ಷಣದ ಗುಣಮಟ್ಟವನ್ನು ಕಾಯ್ದುಕೊಂಡು ಬರುವುದು ಮತ್ತು ಸುಧಾರಿಸುವುದು;

(vii) ಗೌರವ ಪದವಿಗಳನ್ನು ಪ್ರದಾನ ಮಾಡುವುದಕ್ಕೆ ಸಂಬಂಧಿಸಿದಂತೆ ಮಂಡಳಿಗೆ ಶಿಫಾರಸ್ಸುಗಳನ್ನು ಮಾಡುವುದು;

(viii) ವಿಶ್ವವಿದ್ಯಾಲಯದ ಅಧ್ಯಾಪಕರಿಗೆ ಮತ್ತು ಸೇವಾ ಸಿಬ್ಬಂದಿಗೆ ನಿಯಮಿಸತಕ್ಕ ವಿದ್ಯಾರ್ಹತೆಗಳಿಗೆ ಸಂಬಂಧಿಸಿದಂತೆ ಶಿಫಾರಸ್ಸು ಮಾಡುವುದು;

(ix) ಶೈಕ್ಷಣಿಕ, ಸಂಶೋಧನಾ ಸಂಸ್ಥೆಗಳು, ನಿಗಮಗಳು ಮತ್ತು ಇತರ ಸಂಸ್ಥೆಗಳೊಡನೆ ವಾಗ್ದಾನ ಪತ್ರ ಮತ್ತು ಒಪ್ಪಂದ ಪತ್ರಗಳನ್ನು ಪರಿಶೀಲಿಸುವುದು ಹಾಗೂ ಅನುಮೋದಿಸುವುದು;

(x) ಈ ಅಧಿನಿಯಮದ ಮೂಲಕ ಅಥವಾ ಅದರಡಿಯಲ್ಲಿ ಮಂಡಳಿಯು ಅಥವಾ ಕುಲಪತಿಯವರು ತನಗೆ ವಹಿಸಬಹುದಾದಂತಹ ಅಥವಾ ವಿಧಿಸಬಹುದಾದಂತಹ ಅಧಿಕಾರಗಳನ್ನು ಚಲಾಯಿಸುವುದು ಮತ್ತು ಅಂತಹ ಇತರ ಪ್ರಕಾರ್ಯಗಳನ್ನು ನೆರವೇರಿಸುವುದು.

**16. ಸಂಶೋಧನಾ ಪರಿಷತ್ತು.–** ಈ ಮುಂದಿನ ಸದಸ್ಯರನ್ನು ಒಳಗೊಂಡ ಒಂದು ಸಂಶೋಧನಾ ಪರಿಷತ್ತು ಇರತಕ್ಕದ್ದು, ಎಂದರೆ:–

(i) ಕುಲಪತಿಯವರು – ಇವರು ಅಧ್ಯಕ್ಷರಾಗಿರತಕ್ಕದ್ದು;

(ii) ತೋಟಗಾರಿಕೆ ನಿರ್ದೇಶಕರು;

(iii) ಕೃಷಿ ಮಾರಾಟ ಇಲಾಖೆ ನಿರ್ದೇಶಕರು ಅಥವಾ ಜಂಟಿ ನಿರ್ದೇಶಕರ ದರ್ಜೆಗಿಂತ ಕಡಿಮೆಯಿಲ್ಲದ ದರ್ಜೆಯ ಅವರ ನಾಮನಿರ್ದೇಶಿತರು;

(iv) ಕೃಷಿ ನಿರ್ದೇಶಕರು ಅಥವಾ ಜಂಟಿ ನಿರ್ದೇಶಕರ ದರ್ಜೆಗಿಂತ ಕಡಿಮೆಯಿಲ್ಲದ ದರ್ಜೆಯ ಅವರ ನಾಮನಿರ್ದೇಶಿತರು;

(v) ಜಲವಿಭಾಜಕ ಕ್ಷೇತ್ರ ನಿರ್ವಹಣೆ ಇಲಾಖೆಯ ನಿರ್ದೇಶಕರು ಅಥವಾ ಜಂಟಿ ನಿರ್ದೇಶಕರ ದರ್ಜೆಗಿಂತ ಕಡಿಮೆಯಿಲ್ಲದ ದರ್ಜೆಯ ಅವರ ನಾಮನಿರ್ದೇಶಿತರು;

(vi) ಅರಣ್ಯ, ಸಂಶೋಧನೆ ಮತ್ತು ತರಬೇತಿಯ ಮುಖ್ಯ ಸಂರಕ್ಷಣಾಧಿಕಾರಿ;

(vii) ವಿಶ್ವವಿದ್ಯಾಲಯದ ಎಲ್ಲಾ ನಿರ್ದೇಶಕರು;

(viii) ಎಲ್ಲಾ ಡೀನುಗಳು;

(ix) ಸಂಶೋಧನೆಯ ಮತ್ತು ವಿಸ್ತರಣಾ ಶಿಕ್ಷಣದ ಎಲ್ಲಾ ಸಹವರ್ತಿ ನಿರ್ದೇಶಕರುಗಳು;

(x) ತೋಟಗಾರಿಕೆ ಮತ್ತು ಸಂಬಂಧಿಸಿದ ವಿಭಾಗಗಳಲ್ಲಿ ವಿಶೇಷ ಪರಿಣತಿಯನ್ನು ಹೊಂದಿರುವ ರೈತರ ವಿಶೇಷ ಜ್ಞಾನ ಮತ್ತು ಅನುಭವದ ಪ್ರಯೋಜನವನ್ನು ಪಡೆದುಕೊಳ್ಳಲು ಕುಲಪತಿಯವರು ನಾಮನಿರ್ದೇಶನ ಮಾಡಿದಂಥ ತೋಟಗಾರಿಕೆ ಕ್ಷೇತ್ರದ ಪರಿಣಿತರಾದ ಇಬ್ಬರು ಪ್ರಗತಿಪರ ರೈತರು;

(xi) ಯಾವುದೇ ಸಭೆಯ ಸಂಬಂಧದಲ್ಲಿ ಪ್ರಸಿದ್ಧ ವಿಜ್ಞಾನಿಗಳ ವಿಶೇಷ ಜ್ಞಾನದ ಪ್ರಯೋಜನವನ್ನು ಪಡೆಯುವುದಕ್ಕಾಗಿ ಕುಲಪತಿಯವರು ನಾಮನಿರ್ದೇಶನ ಮಾಡಿದ, ರಾಜ್ಯ ತೋಟಗಾರಿಕೆ ವಿಶ್ವವಿದ್ಯಾಲಯಗಳ ಹೊರಗಿನಿಂದ ಅಥವಾ ಭಾರತೀಯ ವಿಜ್ಞಾನ ಸಂಸ್ಥೆಯಿಂದ ಅಥವಾ ಭಾರತದ ಕೃಷಿ ಸಂಶೋಧನಾ ಪರಿಷತ್ತು ಸಂಸ್ಥೆಗಳಿಂದ ಒಬ್ಬ ಪ್ರಸಿದ್ಧ ತೋಟಗಾರಿಕಾ ವಿಜ್ಞಾನಿ;

(xii) ಯಾವುದೇ ಸಭೆಯ ಸಂಬಂಧದಲ್ಲಿ ಅಂತಹ ಸಭೆಯ ಕಾರ್ಯಸೂಚಿಯಲ್ಲಿರುವ ವಿಷಯಗಳ ಬಗ್ಗೆ ಕೃಷಿ ಕೈಗಾರಿಕೋದ್ಯಮಿಯ ವಿಶೇಷ ಜ್ಞಾನದ ಪ್ರಯೋಜನವನ್ನು ಪಡೆಯುವುದಕ್ಕಾಗಿ ಕುಲಪತಿಯವರು ನಾಮನಿರ್ದೇಶನ ಮಾಡಿದ, ಒಬ್ಬ ಕೃಷಿ ಕೈಗಾರಿಕೋದ್ಯಮಿ;

(xiii) ಸಫಲ್ ಮಾರುಕಟ್ಟೆ ಘಟಕ, ಬೆಂಗಳೂರು (ಮದರ್ ಡೈರಿ ಆಹಾರ ಸಂಸ್ಕರಣಾ ನಿಯಮಿತ) ಇದರ ಮಹಾ ವ್ಯವಸ್ಥಾಪಕರು ಅಥವಾ ಮುಖ್ಯಸ್ಥರು;

(xiv) ಭಾರತೀಯ ತೋಟಗಾರಿಕೆ ಸಂಶೋಧನಾ ಸಂಸ್ಥೆ, ಬೆಂಗಳೂರು ಇದರ ನಿರ್ದೇಶಕರು ಅಥವಾ ಅವರ ನಾಮನಿರ್ದೇಶಿತರು;

(xv) ಕೇಂದ್ರ ಆಹಾರ ತಂತ್ರಜ್ಞಾನ ಸಂಶೋಧನಾ ಸಂಸ್ಥೆ, ಮೈಸೂರು ಇದರ ನಿರ್ದೇಶಕರು ಅಥವಾ ಅವರ ನಾಮನಿರ್ದೇಶಿತರು;

(xvi) ಕರ್ನಾಟಕ ರಾಜ್ಯ ವ್ಯವಸಾಯೋತ್ಪನ್ನ ಸಂಸ್ಕರಣಾ ಮತ್ತು ರಫ್ತು ನಿಗಮ ನಿಯಮಿತ (ಕೆಎಪಿಪಿಇಸಿ), ಬೆಂಗಳೂರು ಇದರ ವ್ಯವಸ್ಥಾಪಕ ನಿರ್ದೇಶಕರು ಅಥವಾ ಅವರ ನಾಮನಿರ್ದೇಶಿತರು;

(xvii) ತೋಟಗಾರಿಕೆ ಉತ್ಪನ್ನ ಬೆಳೆಗಾರರ ಸಹಕಾರಿ ಮಾರಾಟ ಸಂಘ ಇದರ ವ್ಯವಸ್ಥಾಪಕ ನಿರ್ದೇಶಕರು;

(xviii) ಕುಲಸಚಿವರು;

(xix) ಕುಲಪತಿಗಳು ನಾಮನಿರ್ದೇಶಿಸಿದ ಸಂಯೋಜಿತ ಕಾಲೇಜಿನ ಒಬ್ಬ ಡೀನ್/ಪ್ರಾಂಶುಪಾಲರು;

(xx) ಸಂಶೋಧನಾ ನಿರ್ದೇಶಕರು – ಇವರು ಸದಸ್ಯ ಕಾರ್ಯದರ್ಶಿಯಾಗಿರತಕ್ಕದ್ದು;

ಪದನಿಮಿತ್ತ ಸದಸ್ಯರನ್ನು ಹೊರತುಪಡಿಸಿ ಸಂಶೋಧನಾ ಪರಿಷತ್ತಿನ ಎಲ್ಲಾ ಸದಸ್ಯರ ಪದಾವಧಿಯು ಎರಡು ವರ್ಷಗಳಾಗಿರತಕ್ಕದ್ದು ಮತ್ತು ವಿಶ್ವವಿದ್ಯಾಲಯದ ಯಾವುದೇ ಪ್ರಾಧಿಕಾರಕ್ಕೆ ಮರುನಾಮನಿರ್ದೇಶನಕ್ಕೆ ಅರ್ಹರಾಗಿರತಕ್ಕದ್ದಲ್ಲ.

**17. ಸಂಶೋಧನಾ ಪರಿಷತ್ತಿನ ಪ್ರಕಾರ್ಯಗಳು.–** ಸಂಶೋಧನಾ ಪರಿಷತ್ತು ಈ ಮುಂದಿನವುಗಳಿಗೆ ಸಂಬಂಧಿಸಿದುವುಗಳನ್ನು ಪರ್ಯಾಲೋಚಿಸತಕ್ಕದ್ದು ಮತ್ತು ಶಿಫಾರಸ್ಸುಗಳನ್ನು ಮಾಡತಕ್ಕದ್ದು.

(i) ಪರಿಣಾಮಕಾರಿ ಸಮನ್ವಯವನ್ನು ಪ್ರೋತ್ಸಾಹಿಸುವ ದೃಷ್ಟಿಯಿಂದ ತೋಟಗಾರಿಕೆ ಮತ್ತು ಇತರ ಸಂಬಂಧಿತ ವಿಜ್ಞಾನಗಳ ಕ್ಷೇತ್ರದಲ್ಲಿ ವಿಶ್ವವಿದ್ಯಾಲಯದ ವಿವಿಧ ಘಟಕಗಳು ಕೈಗೊಂಡ ಅಥವಾ ಕೈಗೊಳ್ಳಬೇಕಾದ ಸಂಶೋಧನಾ ಕಾರ್ಯಕ್ರಮಗಳು ಮತ್ತು ಯೋಜನೆಗಳು;

(ii) ಸಂಶೋಧನಾ ಯೋಜನೆಗಳನ್ನು ಅನುಷ್ಠಾನಗೊಳಿಸುವುದಕ್ಕೆ ಅಗತ್ಯವಾದ ಭೌತಿಕ, ಆರ್ಥಿಕ ಮತ್ತು ಆಡಳಿತಾತ್ಮಕ ಸೌಲಭ್ಯಗಳು;

(iii) ರೈತರ ಮತ್ತು ಇತರ ಹಿತಾಸಕ್ತಿದಾರರ ಅಗತ್ಯತೆಗಳನ್ನು ಪೂರೈಸುವ ಕಡೆಗೆ ಸಂಶೋಧನೆಯು ಅಭಿಮುಖವಾಗಿರುವಂತೆ ಮಾಡುವುದು.

(iv) ಸಂಶೋಧನೆ, ವಿಸ್ತರಣಾ ಶಿಕ್ಷಣ ಮತ್ತು ಬೋಧನೆಗಳನ್ನು ಸಮ್ಮಿಲನಗೊಳಿಸುವುದು ಮತ್ತು ಸಂಶೋಧಕರು ಬೋಧನೆ ಮತ್ತು ವಿಸ್ತರಣಾ ಶಿಕ್ಷಣ ಕಾರ್ಯಕ್ರಮಗಳಲ್ಲಿ ಪಾಲ್ಗೊಳ್ಳುವಂತೆ ಮಾಡುವುದು.

(v) ಸಂಶೋಧನೆಯಲ್ಲಿ ಸಾರ್ವಜನಿಕ ಮತ್ತು ಖಾಸಗಿ ಪಾಲುದಾರಿಕೆಯನ್ನು ಪೋಷಿಸುವುದು ಮತ್ತು ಸಮನ್ವಯಗೊಳಿಸುವುದು;

(vi) ಕುಲಪತಿಯವರು ಅಥವಾ ಮಂಡಲಿ ಅಥವಾ ವಿಶ್ವವಿದ್ಯಾಲಯದ ಯಾವುದೇ ಇತರ ಪ್ರಾಧಿಕಾರವು ತನಗೆ ಪರಿಶೀಲಿಸಲು ಕಳುಹಿಸಬಹುದಾದ ಸಂಶೋಧನಾ ಕಾರ್ಯಕ್ರಮಗಳಿಗೆ ಸಂಬಂಧಪಟ್ಟ ಯಾವುದೇ ಇತರೆ ವಿಷಯ.

**18. ವಿಸ್ತರಣಾ ಶಿಕ್ಷಣ ಪರಿಷತ್ತು.–** (1) ಈ ಮುಂದಿನ ಸದಸ್ಯರನ್ನೊಳಗೊಂಡ ಒಂದು ವಿಸ್ತರಣಾ ಶಿಕ್ಷಣ ಪರಿಷತ್ತು ಇರತಕ್ಕದ್ದು, ಎಂದರೆ:–

(i) ಕುಲಪತಿಯವರು – ಅಧ್ಯಕ್ಷರು;

(ii) ತೋಟಗಾರಿಕೆ ಇಲಾಖೆಯ ನಿರ್ದೇಶಕರು, ಕರ್ನಾಟಕ ಸರ್ಕಾರ ಅಥವಾ ಜಂಟಿ ನಿರ್ದೇಶಕರ ದರ್ಜೆಗಿಂತ ಕಡಿಮೆಯಿಲ್ಲದ ದರ್ಜೆಯ ಅವರ ನಾಮನಿರ್ದೇಶಿತರು;

(iii) ಕೃಷಿ ಇಲಾಖೆಯ ನಿರ್ದೇಶಕರು, ಕರ್ನಾಟಕ ಸರ್ಕಾರ ಅಥವಾ ಜಂಟಿ ನಿರ್ದೇಶಕರ ದರ್ಜೆಗಿಂತ ಕಡಿಮೆಯಿಲ್ಲದ ದರ್ಜೆಯ ಅವರ ನಾಮನಿರ್ದೇಶಿತರು;

(iv) ಕೃಷಿ ಮಾರುಕಟ್ಟೆ ಇಲಾಖೆಯ ನಿರ್ದೇಶಕರು, ಕರ್ನಾಟಕ ಸರ್ಕಾರ ಅಥವಾ ಜಂಟಿ ನಿರ್ದೇಶಕರ ದರ್ಜೆಗಿಂತ ಕಡಿಮೆಯಿಲ್ಲದ ದರ್ಜೆಯ ಅವರ ನಾಮನಿರ್ದೇಶಿತರು;

(v) ಮಹಿಳಾ ಮತ್ತು ಮಕ್ಕಳ ಕಲ್ಯಾಣ ಇಲಾಖೆ ನಿರ್ದೇಶಕರು, ಕರ್ನಾಟಕ ಸರ್ಕಾರ;

(vi) ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ, ಸಾಮಾಜಿಕ ಅರಣ್ಯ ವಿಜ್ಞಾನ ಇಲಾಖೆ, ಕರ್ನಾಟಕ ಸರ್ಕಾರ;

(vii) ಭಾರತೀಯ ತೋಟಗಾರಿಕೆ ಸಂಸ್ಥೆಯ ನಿರ್ದೇಶಕರು, ಬೆಂಗಳೂರು ಅಥವಾ ಅವರ ನಾಮನಿರ್ದೇಶಿತರು;

(viii) ಕೇಂದ್ರ ಆಹಾರ ತಂತ್ರಜ್ಞಾನ ಸಂಶೋಧನಾ ಸಂಸ್ಥೆ, ಮೈಸೂರು ಇದರ ನಿರ್ದೇಶಕರು ಅಥವಾ ಅವರ ನಾಮನಿರ್ದೇಶಿತರು;

(ix) ಕರ್ನಾಟಕ ರಾಜ್ಯ ವ್ಯವಸಾಯೋತ್ಪನ್ನ ಸಂಸ್ಕರಣಾ ಮತ್ತು ರಫ್ತು ನಿಗಮ ನಿಯಮಿತ (ಕೆಎಪಿಪಿಇಸಿ), ಬೆಂಗಳೂರು ಇದರ ನಿರ್ದೇಶಕರು ಅಥವಾ ಅವರ ನಾಮನಿರ್ದೇಶಿತರು;

(x) ಸಫಲ್ ಮಾರುಕಟ್ಟೆ ಘಟಕ, ಬೆಂಗಳೂರು (ಮದರ್ ಡೈರಿ ಆಹಾರ ಸಂಸ್ಕರಣಾ ನಿಯಮಿತ) ಇದರ ಮಹಾ ವ್ಯವಸ್ಥಾಪಕರು ಅಥವಾ ಮುಖ್ಯಸ್ಥರು;

(xi) ಜಲವಿಭಾಜಕ ಕ್ಷೇತ್ರ ಅಭಿವೃದ್ಧಿ ಇಲಾಖೆ ನಿರ್ದೇಶಕರು, ಕರ್ನಾಟಕ ಸರ್ಕಾರ;

(xii) ವಿಶ್ವವಿದ್ಯಾಲಯದ ಎಲ್ಲಾ ನಿರ್ದೇಶಕರು ಮತ್ತು ಡೀನ್‌ಗಳು;

(xiii) ಕುಲಸಚಿವರು;

(xiv) ಸಂಶೋಧನೆಯ ಎಲ್ಲಾ ಸಹವರ್ತಿ ನಿರ್ದೇಶಕರು ಮತ್ತು ವಿಸ್ತರಣಾ ಶಿಕ್ಷಣದ ಸಹವರ್ತಿ ನಿರ್ದೇಶಕರುಗಳು;

(xv) ವಿಶ್ವವಿದ್ಯಾಲಯದ ಎಲ್ಲಾ ವಿಭಾಗಗಳ ಮುಖ್ಯಸ್ಥರು;

(xvi) ತೋಟಗಾರಿಕೆ ಮತ್ತು ಇತರ ಸಂಬಂಧಿತ ಶಾಖೆಗಳಲ್ಲಿ ವಿಶೇಷ ಪರಿಣಿತಿಯುಳ್ಳ, ಪ್ರಗತಿಪರ ರೈತರ ವಿಶೇಷ ಜ್ಞಾನ ಹಾಗೂ ಅನುಭವದ ಪ್ರಯೋಜನವನ್ನು ಪಡೆದುಕೊಳ್ಳಲು ಕುಲಪತಿಯವರು ನಾಮನಿರ್ದೇಶನ ಮಾಡಿದಂಥ ಇಬ್ಬರು ಪ್ರಗತಿಪರ ರೈತರು;

(xvii) ಯಾವುದೇ ಸಭೆಯ ಸಂಬಂಧದಲ್ಲಿ ಅಂಥ ಸಭೆಯ ಕಾರ್ಯಸೂಚಿಯಲ್ಲಿನ ವಿಷಯಗಳ ಬಗ್ಗೆ ಅವರ ವಿಶೇಷ ಜ್ಞಾನದ ಪ್ರಯೋಜನವನ್ನು ಪಡೆದುಕೊಳ್ಳುವುದಕ್ಕಾಗಿ ಕುಲಪತಿಯವರು ನಾಮನಿರ್ದೇಶನ ಮಾಡಿದ ವಿಶ್ವವಿದ್ಯಾಲಯಕ್ಕೆ ಹೊರಗಿನವರಾದ ಒಬ್ಬ ಖ್ಯಾತ ವಿಸ್ತರಣಾ ಶಿಕ್ಷಣ ತಜ್ಞರು;

(xviii) ಯಾವುದೇ ಸಭೆಯ ಸಂದರ್ಭದಲ್ಲಿ ಅಂಥ ಸಭೆಯ ಕಾರ್ಯಸೂಚಿಯಲ್ಲಿನ ವಿಷಯಗಳ ಬಗ್ಗೆ ಅವರ ವಿಶೇಷ ಜ್ಞಾನದ ಪ್ರಯೋಜನವನ್ನು ಪಡೆದುಕೊಳ್ಳುವುದಕ್ಕಾಗಿ ಕುಲಪತಿಯವರು ನಾಮ ನಿರ್ದೇಶನ ಮಾಡಿದ ಒಬ್ಬ ವ್ಯವಸಾಯೋದ್ಯಮಿಗಳು;

(xix) ವ್ಯವಸ್ಥಾಪಕ ನಿರ್ದೇಶಕರು, ತೋಟಗಾರಿಕೆ ಉತ್ಪನ್ನ ಬೆಳೆಗಾರರ ಸಹಕಾರಿ ಮಾರುಕಟ್ಟೆ ಸಂಸ್ಥೆ;

(xx) ಕುಲಪತಿಗಳು ನಾಮನಿರ್ದೇಶಿಸಿದ ತೋಟಗಾರಿಕೆಗೆ ಸಂಬಂಧಿಸಿದ ಸರ್ಕಾರೇತರ ಸಂಸ್ಥೆಗಳಿಂದ ಒಬ್ಬ ಪ್ರತಿನಿಧಿ;

(xxi) ಕುಲಪತಿಯವರ ಕೋರಿಕೆಗನುಸಾರ ಐವರಿಗೆ ಮಿತಿಗೊಳಿಸಿದ ಈ ಮುಂದಿನ ಸಂಸ್ಥೆಗಳ ಒಬ್ಬೊಬ್ಬ ಪ್ರತಿನಿಧಿ.–

(ಎ) ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ, ಕರ್ನಾಟಕ ಸರ್ಕಾರ.

(ಬಿ) ಸಹಕಾರ ಇಲಾಖೆ, ಕರ್ನಾಟಕ ಸರ್ಕಾರ.

(ಸಿ) ಜಲಸಂಪನ್ಮೂಲ ಇಲಾಖೆ, ಕರ್ನಾಟಕ ಸರ್ಕಾರ.

(ಡಿ) ಭಾರತದ ರಸಗೊಬ್ಬರ ನಿಗಮ.

(ಇ) ರಾಷ್ಟ್ರೀಯ ಬೀಜಗಳ ನಿಗಮ

(ಎಫ್) ಯಾವುದೇ ಇತರ ವ್ಯವಸಾಯೋದ್ಯಮ ಅಥವಾ ವ್ಯವಸಾಯ ಸೇವಾಸಂಸ್ಥೆ/ಬೀಜ ಕಂಪೆನಿಗಳು.

(ಜಿ) ಕರ್ನಾಟಕ ರಾಜ್ಯ ಬೀಜಗಳ ನಿಗಮ.

(ಎಚ್) ಕರ್ನಾಟಕ ರಾಜ್ಯ ಬೀಜ ಪ್ರಮಾಣಪತ್ರ ನೀಡಿಕೆ ಏಜೆನ್ಸಿ.

(xxii) ವಿಸ್ತರಣಾ ಶಿಕ್ಷಣ ನಿರ್ದೇಶಕರು – ಸದಸ್ಯ ಕಾರ್ಯದರ್ಶಿ.

(2) ಪದನಿಮಿತ್ತ ಸದಸ್ಯರುಗಳನ್ನು ಹೊರತುಪಡಿಸಿ ವಿಸ್ತರಣಾ ಶಿಕ್ಷಣ ಪರಿಷತ್ತಿನ ಎಲ್ಲಾ ಸದಸ್ಯರುಗಳ ಪದಾವಧಿಯು ಎರಡು ವರ್ಷಗಳಾಗಿರತಕ್ಕದ್ದು ಮತ್ತು ಅವರು ವಿಶ್ವವಿದ್ಯಾಲಯದ ಯಾವುದೇ ಪ್ರಾಧಿಕಾರಕ್ಕೆ ಮರುನಾಮನಿರ್ದೇಶನ ಹೊಂದಲು ಅರ್ಹರಾಗಿರತಕ್ಕದ್ದಲ್ಲ.

**19. ವಿಸ್ತರಣಾ ಶಿಕ್ಷಣ ಪರಿಷತ್ತಿನ ಪ್ರಕಾರ್ಯಗಳು.–** ವಿಸ್ತರಣಾ ಶಿಕ್ಷಣ ಪರಿಷತ್ತು ಈ ಮುಂದಿನವುಗಳನ್ನು ಪರಿಶೀಲಿಸತಕ್ಕದ್ದು ಮತ್ತು ಆ ಬಗ್ಗೆ ಶಿಫಾರಸ್ಸು ಮಾಡತಕ್ಕದ್ದು ಎಂದರೆ:–

(i) ವಿಶ್ವವಿದ್ಯಾಲಯದ ವಿಸ್ತರಣಾ ಶಿಕ್ಷಣ ಕಾರ್ಯಕ್ರಮಗಳು ಮತ್ತು ಯೋಜನೆಗಳು.

(ii) ತೋಟಗಾರಿಕೆ ಮತ್ತು ಸಂಬಂಧಿತ ಶಾಖೆಗಳ ಸುಧಾರಣೆಗಾಗಿ ಮತ್ತು ಗ್ರಾಮೀಣ ಸಮುದಾಯಗಳ ಅಭಿವೃದ್ಧಿಗಾಗಿ, ವಿಸ್ತರಣಾ ಶಿಕ್ಷಣವನ್ನು ಸಮನ್ವಯಗೊಳಿಸುವುದು.

(iii) ರೈತರ ಶಿಕ್ಷಣ ಮತ್ತು ತರಬೇತಿಯನ್ನು ಮತ್ತು ಸಲಹಾ ಸೇವೆಗಳನ್ನು ಅಭಿವೃದ್ಧಿಗೊಳಿಸುವುದು.

(iv) ಕ್ಷೇತ್ರ ಸಮಸ್ಯೆಗಳನ್ನು ಗುರುತಿಸಿ ಪರಿಹರಿಸುವುದು ಮತ್ತು ಮಾಹಿತಿಯ ಪ್ರಸಾರ ಮಾಡುವುದು.

(v) ವಿಸ್ತರಣಾ ಶಿಕ್ಷಣದ ವಿಧಾನ:

(vi) ತೋಟಗಾರಿಕೆ/ತೋಟಗಾರಿಕೆ ವಿಜ್ಞಾನ ಕೇಂದ್ರ/ವಿಸ್ತರಣಾ ಶಿಕ್ಷಣ ಘಟಕಗಳ ಕೆಲಸಕಾರ್ಯಗಳನ್ನು ಮೌಲ್ಯಮಾಪನ ಮಾಡುವುದು;

(vii) ಕುಲಪತಿಯವರು ಅಥವಾ ಮಂಡಳಿ ಅಥವಾ ವಿಶ್ವವಿದ್ಯಾಲಯದ ಯಾವುದೇ ಇತರ ಪ್ರಾಧಿಕಾರವು ತನಗೆ ಪರಿಶೀಲನೆಗಾಗಿ ಕಳುಹಿಸಿಕೊಟ್ಟ ಯಾವುದೇ ಇತರ ವಿಷಯ.

**20. ಅಧ್ಯಯನ ಮಂಡಳಿಗಳು, ಅವುಗಳ ರಚನೆ ಮತ್ತು ಪ್ರಕಾರ್ಯಗಳು.–** (1) ಪದವಿ ಮತ್ತು ಸ್ನಾತಕೋತ್ತರ ಕಾರ್ಯಕ್ರಮಗಳಿಗೆ ಬೇರೆ ಬೇರೆ ಅಧ್ಯಯನ ಮಂಡಳಿಯಿರತಕ್ಕದ್ದು. ಅಧ್ಯಯನ ಮಂಡಳಿಯ ಅಧಿಕಾರಗಳು ಮತ್ತು ಪ್ರಕಾರ್ಯಗಳು ಶಾಸನಗಳ ಮೂಲಕ ನಿಯಮಿಸಲಾದಂತೆ ಇರತಕ್ಕದ್ದು.

(2) ಪದವಿ ಕಾರ್ಯಕ್ರಮಗಳಿಗೆ ಅಧ್ಯಯನ ಮಂಡಳಿಯ ರಚನೆಯು ಈ ಮುಂದಿನಂತೆ ಇರತಕ್ಕದ್ದು, ಎಂದರೆ:–

(i) ಶಿಕ್ಷಣ ಇಲಾಖೆ ನಿರ್ದೇಶಕರು – ಅಧ್ಯಕ್ಷರು.

(ii) ಎಲ್ಲಾ ಘಟಕ ಕಾಲೇಜುಗಳ ಡೀನ್‌ಗಳು.

(iii) ಕುಲಪತಿಯವರು ನಾಮನಿರ್ದೇಶಿಸಿದ ಪ್ರೊಫೆಸರ್ ದರ್ಜೆಗಿಂತ ಕಡಿಮೆ ದರ್ಜೆಯವರಲ್ಲದ ಸಂಯೋಜಿತ ಕಾಲೇಜಿನ ಒಬ್ಬರು ಪ್ರತಿನಿಧಿ.

(iv) ಸಂಶೋಧನಾ ನಿರ್ದೇಶಕರು ಮತ್ತು ವಿಸ್ತರಣಾ ಶಿಕ್ಷಣ ನಿರ್ದೇಶಕರು.

(v) ಕುಲಸಚಿವರು.

(vi) ವಿದ್ಯಾರ್ಥಿ ಕ್ಷೇಮಾಭಿವೃದ್ಧಿ ಡೀನ್.

(vii) ವಿಶ್ವವಿದ್ಯಾಲಯದ ಎಲ್ಲಾ ವಿಭಾಗಗಳ ಮುಖ್ಯಸ್ಥರು.

(viii) ಸುತ್ತು ಸರದಿಯ ಆಧಾರದ ಮೇಲೆ ಎರಡು ವರ್ಷಗಳ ಅವಧಿಗೆ, ಅಧ್ಯಕ್ಷರು ನಾಮನಿರ್ದೇಶನದ ಇಲಾಖಾ ಮುಖ್ಯಸ್ಥರಲ್ಲದ ವಿಶ್ವವಿದ್ಯಾಲಯದ ಪ್ರತಿಯೊಂದು ಇಲಾಖೆಯ ಒಬ್ಬ ಪ್ರೊಫೆಸರ್.

(ix) ಸುತ್ತು ಸರದಿಯ ಆಧಾರದ ಮೇಲೆ ಎರಡು ವರ್ಷಗಳ ಅವಧಿಗೆ ಅಧ್ಯಕ್ಷರು ನಾಮನಿರ್ದೇಶನ ಮಾಡಿದ ಸಹವರ್ತಿ ಪ್ರೊಫೆಸರರ ಕೇಡರ್‌ನಲ್ಲಿನ ಐವರು ಅಧ್ಯಾಪಕರು.

(x) ಸುತ್ತು ಸರದಿಯ ಆಧಾರದ ಮೇಲೆ ಎರಡು ವರ್ಷಗಳ ಅವಧಿಗೆ ಅಧ್ಯಕ್ಷರು ನಾಮನಿರ್ದೇಶನ ಮಾಡಿದ ಸಹಾಯಕ ಪ್ರೊಫೆಸರರ ಕೇಡರ್‌ನಲ್ಲಿನ ಐವರು ಅಧ್ಯಾಪಕರು.

(xi) ಎರಡು ವರ್ಷಗಳ ಅವಧಿಗೆ ಅಧ್ಯಕ್ಷರು ನಾಮನಿರ್ದೇಶನ ಮಾಡಿರುವ ವಿಶ್ವವಿದ್ಯಾಲಯಕ್ಕೆ ಹೊರಗಿನವರಾದ ಇಬ್ಬರು ತೋಟಗಾರಿಕೆಯ ಪ್ರಖ್ಯಾತ ಪ್ರೊಫೆಸರುಗಳು.

(xii) ವಿಶ್ವವಿದ್ಯಾಲಯ ಕುಲಪತಿಯವರು ನಾಮನಿರ್ದೇಶನ ಮಾಡಿದ ಕಾಲೇಜಿನ ಒಬ್ಬರು ಡೀನ್ ಸದಸ್ಯ ಕಾರ್ಯದರ್ಶಿಯಾಗಿ ಕರ್ತವ್ಯ ನಿರ್ವಹಿಸತಕ್ಕದ್ದು.

(3) ಪದವಿ ಕಾರ್ಯಕ್ರಮಗಳಿಗೆ ಅಧ್ಯಯನ ಮಂಡಳಿಗಳ ಪ್ರಕಾರ್ಯಗಳು ಈ ಮುಂದಿನಂತೆ ಇರತಕ್ಕದ್ದು. ಎಂದರೆ:–

(i) ಪದವಿ ಬೋಧನಾ ಕಾರ್ಯಕ್ರಮದ ಅಡಿಯಲ್ಲಿ ಪುನರಾವಲೋಕನ ಮಾಡುವುದು ಮತ್ತು ಅದರ ಸುಧಾರಣೆಗಳಿಗೆ ಸಲಹೆ ನೀಡುವುದು;

(ii) ಅಧ್ಯಯನಗಳ ಮಂಡಳಿಯು ರಚಿಸಿದಂಥ ವ್ಯಾಸಂಗ ಕ್ರಮಗಳ, ಪಠ್ಯವಿಷಯಗಳ, ಸಮಿತಿಯ ಅಥವಾ ಅದೇ ತರಹದ ಸಮಿತಿಯ ಶಿಫಾರಸ್ಸುಗಳನ್ನು ಪರಿಗಣಿಸುವುದು ಮತ್ತು ಅವನ್ನು ಪರ್ಯಾಲೋಚನೆ ಮತ್ತು ಅಂಗೀಕಾರಕ್ಕಾಗಿ ವಿದ್ಯಾವಿಷಯಕ ಪರಿಷತ್ತಿನ ಮುಂದೆ ಮಂಡಿಸುವುದು;

(iii) ವಿದ್ಯಾವಿಷಯಕ ಪರಿಷತ್ತು ಅಥವಾ ಕುಲಪತಿಯವರು ಗೊತ್ತುಪಡಿಸಬಹುದಾದಂಥ ಇತರ ಪ್ರಕಾರ್ಯಗಳನ್ನು ನಿರ್ವಹಿಸುವುದು;

(4) ಸ್ನಾತಕೋತ್ತರ ಕಾರ್ಯಕ್ರಮಗಳಿಗಾಗಿ ಅಧ್ಯಯನಗಳ ಮಂಡಳಿಯ ರಚನೆಯು ಈ ಮುಂದಿನಂತೆ ಇರತಕ್ಕದ್ದು, ಎಂದರೆ:–

(i) ಶಿಕ್ಷಣ ಇಲಾಖೆಯ ನಿರ್ದೇಶಕರು – ಅಧ್ಯಕ್ಷರು.

(ii) ಘಟಕ ಕಾಲೇಜುಗಳ ಡೀನ್‌ಗಳು.

(iii) ಸಂಶೋಧನಾ ನಿರ್ದೇಶಕರು ಮತ್ತು ವಿಸ್ತರಣಾ ಶಿಕ್ಷಣದ ನಿರ್ದೇಶಕರು.

(iv) ಕುಲಸಚಿವರು.

(v) ವಿದ್ಯಾರ್ಥಿ ಕ್ಷೇಮಾಭಿವೃದ್ಧಿ ಡೀನ್.

(vi) ವಿಶ್ವವಿದ್ಯಾಲಯದ ಎಲ್ಲಾ ವಿಭಾಗಗಳ ಮುಖ್ಯಸ್ಥರು.

(vii) ಸುತ್ತು ಸರದಿಯ ಆಧಾರದ ಮೇಲೆ ಎರಡು ವರ್ಷಗಳ ಅವಧಿಗಾಗಿ ಅಧ್ಯಕ್ಷರು ನಾಮನಿರ್ದೇಶಿಸಿದ ಪ್ರೊಫೆಸರ್ ದರ್ಜೆಯ ಹತ್ತು ಜನ ಸ್ನಾತಕೋತ್ತರ ಅಧ್ಯಾಪಕರು.

(viii) ಸುತ್ತು ಸರದಿಯ ಆಧಾರದ ಮೇಲೆ ಎರಡು ವರ್ಷಗಳ ಅವಧಿಗಾಗಿ ಅಧ್ಯಕ್ಷರು ನಾಮನಿರ್ದೇಶಿಸಿದ ಸಹವರ್ತಿ ಪ್ರೊಫೆಸರ್ ದರ್ಜೆಯ ಹತ್ತು ಜನ ಸ್ನಾತಕೋತ್ತರ ಅಧ್ಯಾಪಕರು.

(ix) ಸುತ್ತು ಸರದಿಯ ಆಧಾರದ ಮೇಲೆ ಎರಡು ವರ್ಷಗಳ ಅವಧಿಗಾಗಿ ಅಧ್ಯಕ್ಷರು ನಾಮನಿರ್ದೇಶಿಸಿದ ಸಹಾಯಕ ಪ್ರೊಫೆಸರ್ ದರ್ಜೆಯ ಹತ್ತು ಜನ ಸ್ನಾತಕೋತ್ತರ ಅಧ್ಯಾಪಕರು.

(x) ಎರಡು ವರ್ಷಗಳ ಅವಧಿಗಾಗಿ ಅಧ್ಯಕ್ಷರು ನಾಮನಿರ್ದೇಶಿಸಿದ ವಿಶ್ವವಿದ್ಯಾಲಯಕ್ಕೆ ಹೊರಗಿನವರಾದ ಇಬ್ಬರು ಖ್ಯಾತ ಪ್ರೊಫೆಸರ್‌ಗಳು.

(xi) ಸ್ನಾತಕೋತ್ತರ ವ್ಯಾಸಂಗದ ಡೀನ್ ಅವರು ಸದಸ್ಯ ಕಾರ್ಯದರ್ಶಿಯಾಗಿ ಕೆಲಸ ನಿರ್ವಹಿಸತಕ್ಕದ್ದು.

(5) ಸ್ನಾತಕೋತ್ತರ ವ್ಯಾಸಂಗ ಕ್ರಮದ ಅಧ್ಯಯನ ಮಂಡಳಿಯು ಈ ಮುಂದಿನ ಪ್ರಕಾರ್ಯಗಳನ್ನು ನೆರವೇರಿಸತಕ್ಕದ್ದು, ಎಂದರೆ:–

(i) ಸ್ನಾತಕೋತ್ತರ ಮತ್ತು ಡಿಪ್ಲೊಮಾ ಬೋಧನಾ ಕಾರ್ಯಕ್ರಮಗಳ ಪುನರಾವಲೋಕನ ಮಾಡುವುದು ಮತ್ತು ಅವುಗಳ ಸುಧಾರಣೆಗೆ ಸಲಹೆಗಳನ್ನು ನೀಡುವುದು;

(ii) ಅಧ್ಯಯನ ಮಂಡಳಿಯು ರಚಿಸಿದ ವ್ಯಾಸಂಗ ಕ್ರಮಗಳು, ಪಠ್ಯಕ್ರಮಗಳ, ಸಮಿತಿಗಳ ಅಥವಾ ಅಂತಹುದೇ ಸಮಿತಿಗಳ ಶಿಫಾರಸ್ಸುಗಳನ್ನು ಪರಿಗಣಿಸುವುದು ಮತ್ತು ವಿದ್ಯಾವಿಷಯಕ ಪರಿಷತ್ತಿನ ಮುಂದೆ ಅವುಗಳನ್ನು ಪರ್ಯಾಲೋಚನೆ ಮತ್ತು ಅನುಮೋದನೆಗಾಗಿ ಮಂಡಿಸುವುದು;

(iii) ವಿದ್ಯಾವಿಷಯಕ ಪರಿಷತ್ತು ಅಥವಾ ಕುಲಪತಿಯವರು ವಹಿಸಬಹುದಾದಂತಹ ಇತರ ಪ್ರಕಾರ್ಯಗಳನ್ನು ನೆರವೇರಿಸುವುದು.

**21. ಸಮಿತಿಗಳ ರಚನೆ.–** ಪ್ರತಿಯೊಂದು ಪ್ರಾಧಿಕಾರವು ಸಮಿತಿಗಳನ್ನು ನೇಮಿಸಲು ಅಧಿಕಾರವನ್ನು ಹೊಂದಿರತಕ್ಕದ್ದು ಮತ್ತು ಅಂಥ ಸಮಿತಿಯು ಈ ಅಧಿನಿಯಮ ಅಥವಾ ಶಾಸನಗಳಲ್ಲಿ ಅನ್ಯಥಾ ಉಪಬಂಧಿಸಿದ್ದ ಹೊರತು, ಪ್ರಾಧಿಕಾರದ ಸದಸ್ಯರುಗಳನ್ನು ಅಥವಾ ತಾನು ಸರಿಯೆಂದು ಭಾವಿಸಬಹುದಾದ ಇತರ ವ್ಯಕ್ತಿಗಳನ್ನೊಳಗೊಂಡಿರತಕ್ಕದ್ದು.

**22. ಪ್ರಾಧಿಕಾರಗಳ ಸದಸ್ಯರ ಸ್ಥಾನವು ಖಾಲಿಯಾದ ಸಂದರ್ಭದಲ್ಲಿ ಉಪಬಂಧ.–** (1) ಈ ಅಧಿನಿಯಮದಲ್ಲಿ ಅನ್ಯಥಾ ಉಪಬಂಧಿಸಿರುವುದನ್ನುಳಿದು, ವಿಶ್ವವಿದ್ಯಾಲಯದ ಯಾವುದೇ ಪ್ರಾಧಿಕಾರದ ಅಥವಾ ನಿಕಾಯದ ಪದನಿಮಿತ್ತ ಸದಸ್ಯನನ್ನು ಹೊರತುಪಡಿಸಿ ಇತರ ಯಾವುದೇ ಸದಸ್ಯರು ಮರಣ, ರಾಜೀನಾಮೆ, ತೆಗೆದುಹಾಕುವಿಕೆ ಅಥವಾ ಅನ್ಯಥಾ ಹಾಜರಾಗಲು ಅಥವಾ ತನ್ನ ಪೂರ್ಣ ಪದಾವಧಿಯನ್ನು ಪೂರ್ತಿಗೊಳಿಸಲು ಸಾಧ್ಯವಾಗದಿದ್ದಲ್ಲಿ, ಹಾಗೆ ಉಂಟಾದ ಖಾಲಿ ಸ್ಥಾನವನ್ನು ಅನುಕೂಲವಾದಷ್ಟು ಬೇಗನೆ, ಸಂದರ್ಭಾನುಸಾರ, ನೇಮಕಾತಿ, ನಾಮ ನಿರ್ದೇಶನ ಅಥವಾ ಸಹ ಸದಸ್ಯನನ್ನಾಗಿ ಸೇರಿಸುವಿಕೆಯಿಂದ ಭರ್ತಿಗೊಳಿಸತಕ್ಕದ್ದು ಮತ್ತು ಹಾಗೆ ನೇಮಕಗೊಂಡ, ನಾಮನಿರ್ದೇಶಿತನಾದ ಅಥವಾ ಸಹ ಸದಸ್ಯನಾಗಿ ಸೇರಿಕೊಂಡ ವ್ಯಕ್ತಿಯು, ಅಂಥ ಖಾಲಿ ಸ್ಥಾನವನ್ನು ತಾನು ಯಾರ ಸ್ಥಾನದಲ್ಲಿ ನೇಮಕಗೊಂಡಿರುವನೋ, ನಾಮ ನಿರ್ದೇಶಿತನಾಗಿರುವನೋ ಅಥವಾ ಸಹ ಸದಸ್ಯನಾಗಿ ಸೇರಿಕೊಂಡಿರುವನೋ ಆ ವ್ಯಕ್ತಿಯು ಸದಸ್ಯನ ಸ್ಥಾನದಲ್ಲಿ ಮುಂದುವರೆಯುತ್ತಿದ್ದ ಉಳಿದ ಭಾಗದ ಅವಧಿಯವರೆಗೆ ಅಂಥ ಖಾಲಿ ಸ್ಥಾನವನ್ನು ಭರ್ತಿಗೊಳಿಸತಕ್ಕದ್ದು.

(2) ಮಂಡಳಿಯು ಯಾವುದೇ ಪ್ರಾಧಿಕಾರದ ಅಥವಾ ವಿಶ್ವವಿದ್ಯಾಲಯದ ನಿಕಾಯದ ಸದಸ್ಯನಾದ ಯಾವುದೇ ವ್ಯಕ್ತಿಯನ್ನು ಅಂಥ ವ್ಯಕ್ತಿಯು ನೈತಿಕ ಪತನವನ್ನೊಳಗೊಂಡ ಯಾವುದೇ ಅಪರಾಧಕ್ಕಾಗಿ ನಿರ್ಣೀತ ಅಪರಾಧಿಯೆಂಬ ಅಥವಾ ಸಂಬಂಧಪಟ್ಟ ಸದಸ್ಯನು ನಿರ್ವಹಿಸುತ್ತಿರುವ ಹುದ್ದೆಯ ಘನತೆಗೆ ಆತನ ನಡತೆಯು ಸರಿಹೊಂದುತ್ತಿಲ್ಲವೆಂಬ ಕಾರಣದ ಮೇಲೆ ಕುಲಾಧಿಪತಿಯವರ ಅನುಮೋದನೆ ಪಡೆದು ಸದಸ್ಯತ್ವದಿಂದ ತೆಗೆದುಹಾಕಬಹುದು. ಅಂಥ ವ್ಯಕ್ತಿಯು ಸಕ್ಷಮ ನ್ಯಾಯಾಲಯದಿಂದ ಹಾಗೆ ಅಪರಾಧಿಯಾಗಿ ನಿರ್ಣೀತನಾಗಿದ್ದರೆ ಕುಲಾಧಿಪತಿಯವರ ಪೂರ್ವಾನುಮೋದನೆಯು ಅವಶ್ಯಕವಾಗುವುದಿಲ್ಲ:

ಪರಂತು, ಯಾವುದೇ ವ್ಯಕ್ತಿಗೆ ತನ್ನ ಅಹವಾಲು ಹೇಳಿಕೊಳ್ಳಲು ಸಮಂಜಸ ಅವಕಾಶವನ್ನು ನೀಡಿದ ಹೊರತು ಅವರ ವಿರುದ್ಧ ಅಂಥ ಆದೇಶವನ್ನು ಹೊರಡಿಸತಕ್ಕದ್ದಲ್ಲ.

(3) ಬೇರೊಂದು ನಿಕಾಯದ ಸದಸ್ಯನಾದ ಯಾವನೇ ವ್ಯಕ್ತಿಯು ಆ ಸಂಸ್ಥೆಯು ವಿಶ್ವವಿದ್ಯಾಲಯದ ಒಂದು ನಿಕಾಯವಾಗಿರಲಿ ಇಲ್ಲದಿರಲಿ, ಅದರ ಪ್ರತಿನಿಧಿಯಾಗಿ ವಿಶ್ವವಿದ್ಯಾಲಯದ ಯಾವುದೇ ಪ್ರಾಧಿಕಾರ ಅಥವಾ ನಿಕಾಯದ ಸದಸ್ಯನಾಗಿರುವ ಸಂದರ್ಭದಲ್ಲಿ, ಆತನು ತನ್ನ ಸದಸ್ಯತ್ವದ ಅವಧಿ ಮುಕ್ತಾಯವಾಗುವುದಕ್ಕಿಂತ ಮುಂಚೆ, ತನ್ನನ್ನು ನೇಮಿಸಿದ ಅಥವಾ ನಾಮನಿರ್ದೇಶನ ಮಾಡಿದ ನಿಕಾಯದ ಸದಸ್ಯನಾಗಿರುವುದು ಮುಕ್ತಾಯವಾಗಿದ್ದರೆ, ವಿಶ್ವವಿದ್ಯಾಲಯದ ಆ ಪ್ರಾಧಿಕಾರ ಅಥವಾ ನಿಕಾಯದ ಸದಸ್ಯತ್ವವೂ ನಿಂತುಹೋಗತಕ್ಕದ್ದು.

(4) ಯಾವುದೇ ವ್ಯಕ್ತಿಯು ತಾನು ಹೊಂದಿರುವ ಹುದ್ದೆಯ ಬಲದಿಂದಾಗಿ ವಿಶ್ವವಿದ್ಯಾಲಯದ ಯಾವುದೇ ಪ್ರಾಧಿಕಾರದ ಅಥವಾ ನಿಕಾಯದ ಸದಸ್ಯನಾಗಿರುವಲ್ಲೆಲ್ಲಾ, ತನ್ನ ಸದಸ್ಯತ್ವದ ಅವಧಿಯು ಮುಕ್ತಾಯವಾಗುವ ಮುನ್ನವೆ ಆತ ಆ ಹುದ್ದೆಯಲ್ಲಿರುವುದು ನಿಂತುಹೋದರೆ, ಆತ/ಆಕೆಯು ಹೊಂದಿರುವ ಅಂಥ ಪ್ರಾಧಿಕಾರದ ಅಥವಾ ನಿಕಾಯದ ಸದಸ್ಯತ್ವವೂ ನಿಂತುಹೋಗತಕ್ಕದ್ದು:

ಪರಂತು, ನಾಲ್ಕು ತಿಂಗಳಿಗೆ ಮೀರದ ಅವಧಿಗೆ ಆತನು ರಜೆಯ ಮೇಲೆ ಹೋಗಿದ್ದರೆ ಅದನ್ನು ಆತನು ಹುದ್ದೆಯಲ್ಲಿರುವುದು ನಿಂತುಹೋಗಿದೆಯೆಂದು ಭಾವಿಸತಕ್ಕದ್ದಲ್ಲ.

(5) ವಿಶ್ವವಿದ್ಯಾಲಯದ ಯಾವುದೇ ಪ್ರಾಧಿಕಾರ ಅಥವಾ ನಿಕಾಯದ ಪದನಿಮಿತ್ತ ಸದಸ್ಯನಲ್ಲದ ಇತರ ಯಾವುದೇ ಸದಸ್ಯನು ಕುಲಪತಿಯವರ ವಿಳಾಸಕ್ಕೆ ಒಂದು ಪತ್ರವನ್ನು ಬರೆದು ರಾಜೀನಾಮೆ ನೀಡಬಹುದು ಮತ್ತು ಅಂಥ ರಾಜೀನಾಮೆಯು ಅದನ್ನು ಸ್ವೀಕರಿಸಿದ ದಿನಾಂಕದಿಂದ ಜಾರಿಗೆಬರತಕ್ಕದ್ದು.

**23. ಕ್ರಮಗಳ ಸಿಂಧುತ್ವ ಮತ್ತು ಅದಕ್ಕೆ ರಕ್ಷಣೆ.–** (1) ವಿಶ್ವವಿದ್ಯಾಲಯದ ಯಾವುದೇ ಪ್ರಾಧಿಕಾರ ಅಥವಾ ನಿಕಾಯದ ಯಾವುದೇ ಕ್ರಮ ಅಥವಾ ವ್ಯವಹರಣೆಯು ಅದರ ಸದಸ್ಯರುಗಳ ಸ್ಥಾನಗಳಲ್ಲಿ ಯಾವುದೇ ಸ್ಥಾನವು ಖಾಲಿ ಇರುವ ಕಾರಣದಿಂದಾಗಿ ಅಥವಾ ಯಾವೊಬ್ಬ ವ್ಯಕ್ತಿಯು ಮೊದಲು ವ್ಯವಹರಣೆಗಳಲ್ಲಿ ಭಾಗವಹಿಸಿದ್ದು ನಂತರ ಹಾಗೆ ಮಾಡಲು ಹಕ್ಕುಳ್ಳವನಲ್ಲವೆಂದು ಕಂಡುಬಂದ ಕಾರಣದಿಂದಾಗಿ ಅಸಿಂಧುವಾಗತಕ್ಕದ್ದಲ್ಲ

(2) ಈ ಅಧಿನಿಯಮದಲ್ಲಿ ಅನ್ಯಥಾ ಉಪಬಂಧಿಸಿರುವುದನ್ನುಳಿದು, ವಿಶ್ವವಿದ್ಯಾಲಯದಿಂದ ಅಥವಾ ಅದರ ಪ್ರಾಧಿಕಾರಗಳಿಂದ ಸದ್ಭಾವನೆಯಿಂದ ಕೈಗೊಂಡ ಎಲ್ಲಾ ಕ್ರಮಗಳು ಅಥವಾ ಹೊರಡಿಸಿದ ಎಲ್ಲಾ ಆದೇಶಗಳು ಅಂತಿಮವಾಗಿರತಕ್ಕದ್ದು ಮತ್ತು ಈ ಅಧ್ಯಾದೇಶ ಅಥವಾ ಶಾಸನಗಳು ಅಥವಾ ವಿನಿಯಮಗಳನ್ನು ಅನುಸರಿಸಿ ಮಾಡಿದೆ ಅಥವಾ ಮಾಡಲಾಗಿದೆ ಎಂದು ತಾತ್ಪರ್ಯವಾಗಿರುವ ಯಾವುದೇ ಕಾರ್ಯದ ಸಂಬಂಧದಲ್ಲಿ ವಿಶ್ವವಿದ್ಯಾಲಯ ಅಥವಾ ಅದರ ಪ್ರಾಧಿಕಾರದ ವಿರುದ್ಧವಾಗಿ ಯಾವುದೇ ದಾವೆಯನ್ನು ಹೂಡತಕ್ಕದ್ದಲ್ಲ ಅಥವಾ ಹಾನಿ ಪರಿಹಾರವನ್ನು ಕ್ಲೈಮು ಮಾಡತಕ್ಕದ್ದಲ್ಲ.

(3) ಈ ಅಧಿನಿಯಮದ ಅಥವಾ ಅದರಡಿಯಲ್ಲಿ ರಚಿಸಿರುವ ಯಾವುದೇ ಶಾಸನಗಳ ಪಾಲನೆಯಲ್ಲಿ ಸದ್ಭಾವನೆಯಿಂದ ಮಾಡಿದ ಅಥವಾ ಮಾಡಬೇಕೆಂದು ಉದ್ದೇಶಿಸಿದ ಯಾವುದೇ ಕಾರ್ಯದ ಸಂಬಂಧದಲ್ಲಿ ವಿಶ್ವವಿದ್ಯಾಲಯದ ಯಾವೊಬ್ಬ ಅಧಿಕಾರಿಯ ಅಥವಾ ಇತರ ನೌಕರನ ವಿರುದ್ಧ ಯಾವುದೇ ದಾವೆ ಅಥವಾ ಇತರ ಕಾನೂನು ವ್ಯವಹರಣೆಯನ್ನು ಹೂಡಲು ಅವಕಾಶವಿರತಕ್ಕದ್ದಲ್ಲ.

## ಅಧ್ಯಾಯ – IV

## ವಿಶ್ವವಿದ್ಯಾಲಯದ ಅಧಿಕಾರಿಗಳು

**24. ವಿಶ್ವವಿದ್ಯಾಲಯದ ಅಧಿಕಾರಿಗಳು.–** ಈ ಮುಂದಿನವರುಗಳು ವಿಶ್ವವಿದ್ಯಾಲಯದ ಅಧಿಕಾರಿಗಳಾ ಗಿರತಕ್ಕದ್ದು, ಎಂದರೆ:–

(1) ಕುಲಾಧಿಪತಿಯವರು;

(2) ಸಹಕುಲಾಧಿಪತಿಯವರು;

(3) ಕುಲಪತಿಯವರು;

(4) ನಿರ್ದೇಶಕರುಗಳು;

(5) ಡೀನ್‌ಗಳು;

(6) ಕುಲಸಚಿವರು;

(7) ವಿದ್ಯಾರ್ಥಿ ಕ್ಷೇಮಾಭಿವೃದ್ಧಿ ಡೀನ್;

(8) ವಿಶ್ವವಿದ್ಯಾಲಯ ಗ್ರಂಥಪಾಲಕರು;

(9) ಶಾಸನಗಳ ಮೂಲಕ ವಿಶ್ವವಿದ್ಯಾಲಯದ ಅಧಿಕಾರಿಗಳೆಂದು ಘೋಷಿಸಬಹುದಾದಂತಹ ವಿಶ್ವವಿದ್ಯಾಲಯದ ಸೇವೆಯಲ್ಲಿರುವ ಇತರ ವ್ಯಕ್ತಿಗಳು; ಮತ್ತು

(10) ಲೆಕ್ಕ ನಿಯಂತ್ರಕರು;

**25. ಕುಲಾಧಿಪತಿ.–** (1) ಕರ್ನಾಟಕ ರಾಜ್ಯದ ರಾಜ್ಯಪಾಲರು ತಮ್ಮ ಹುದ್ದೆಯ ಬಲದಿಂದಾಗಿ ವಿಶ್ವವಿದ್ಯಾಲಯದ ಕುಲಾಧಿಪತಿಯಾಗಿರತಕ್ಕದ್ದು.

(2) ಕುಲಾಧಿಪತಿಯವರು ವಿಶ್ವವಿದ್ಯಾಲಯದ ಮುಖ್ಯಸ್ಥರಾಗಿರತಕ್ಕದ್ದು ಮತ್ತು ಅವರು ಹಾಜರಿದ್ದಾಗ ವಿಶ್ವವಿದ್ಯಾಲಯದ ಘಟಿಕೋತ್ಸವಗಳ ಅಧ್ಯಕ್ಷತೆಯನ್ನು ವಹಿಸತಕ್ಕದ್ದು.

(3) ಗೌರವ ಪದವಿಯನ್ನು ನೀಡುವ ಪ್ರತಿಯೊಂದು ಪ್ರಸ್ತಾವಕ್ಕೂ ವ್ಯವಸ್ಥಾಪನಾ ಮಂಡಳಿಯ ಅನುಮೋದನೆ ನೀಡಿ ಕುಲಾಧಿಪತಿಯವರು ಸ್ಥಿರೀಕರಿಸಿರತಕ್ಕದ್ದು.

(4) ಈ ಅಧಿನಿಯಮ ಮತ್ತು ಶಾಸನಗಳಿಗೆ ಅನುಸಾರವಾಗಿರದ ವಿಶ್ವವಿದ್ಯಾಲಯದ ಯಾವುದೇ ಅಧಿಕಾರಿಯ ಅಥವಾ ಪ್ರಾಧಿಕಾರದ ಯಾವುದೇ ಆದೇಶ ಅಥವಾ ವ್ಯವಹರಣೆಗಳನ್ನು ಕುಲಾಧಿಪತಿಯವರು ಲಿಖಿತದ ಆದೇಶದ ಮೂಲಕ ಶೂನ್ಯಗೊಳಿಸಬಹುದು :

ಪರಂತು ಅಂತಹ ಆದೇಶವನ್ನು ಹೊರಡಿಸುವ ಮೊದಲು ಅವರು ಅಂತಹ ಆದೇಶವನ್ನು ಏಕೆ ಹೊರಡಿಸಬಾರದು ಎಂದು ಕಾರಣ ಕೇಳುವ ನೋಟೀಸನ್ನು ಸಂಬಂಧಪಟ್ಟ ಅಧಿಕಾರಿ ಅಥವಾ ಪ್ರಾಧಿಕಾರಕ್ಕೆ ನೀಡತಕ್ಕದ್ದು ಮತ್ತು ಅಂತಹ ಆದೇಶದಲ್ಲಿ ಈ ಸಂಬಂಧದಲ್ಲಿ ನಿರ್ದಿಷ್ಟಪಡಿಸಿದ ಅವಧಿಯೊಳಗೆ ಯಾವುದೇ ಕಾರಣವನ್ನು ನೀಡಿದಲ್ಲಿ ಅದನ್ನು ಅವರು ಪರಿಗಣಿಸತಕ್ಕದ್ದು.

(5) ಕುಲಾಧಿಪತಿಯವರು ಈ ಅಧಿನಿಯಮದ ಅಥವಾ ಶಾಸನಗಳ ಮೂಲಕ ತಮಗೆ ಪ್ರದತ್ತವಾದಂತಹ ಇತರ ಅಧಿಕಾರಗಳನ್ನು ಚಲಾಯಿಸತಕ್ಕದ್ದು ಮತ್ತು ಅಂತಹ ಇತರ ಕರ್ತವ್ಯಗಳನ್ನು ನಿರ್ವಹಿಸತಕ್ಕದ್ದು.

**26. ಸಹಕುಲಾಧಿಪತಿಯವರು.–** (1) ಕರ್ನಾಟಕ ರಾಜ್ಯದ ತೋಟಗಾರಿಕೆ ಸಚಿವರು ತಮ್ಮ ಹುದ್ದೆಯ ಬಲದಿಂದಾಗಿ ಸಹಕುಲಾಧಿಪತಿಗಳಾಗಿರತಕ್ಕದ್ದು.

(2) ಸಹಕುಲಾಧಿಪತಿಯವರು ಈ ಅಧಿನಿಯಮದ ಮೂಲಕ ಅದರಡಿಯಲ್ಲಿ ಅಥವಾ ಶಾಸನಗಳ ಅಡಿಯಲ್ಲಿ ತಮಗೆ ಪ್ರದತ್ತವಾಗಬಹುದಾದಂತಹ ಕುಲಾಧಿಪತಿಯವರ ಅಧಿಕಾರಗಳು ಮತ್ತು ಪ್ರಕಾರ್ಯಗಳನ್ನು ಚಲಾಯಿಸತಕ್ಕದ್ದು. ಕುಲಾಧಿಪತಿಯವರು ಸಹಕುಲಾಧಿಪತಿಯವರಿಗೆ ಲಿಖಿತ ಆದೇಶದ ಮೂಲಕ ಪ್ರತ್ಯಾಯೋಜಿಸಬಹುದಾದಂತಹ ಕುಲಾಧಿಪತಿಯವರ ಅಧಿಕಾರಗಳನ್ನು ಸಹ ಅವರು ಚಲಾಯಿಸತಕ್ಕದ್ದು ಮತ್ತು ಅಂತಹ ಇತರ ಕರ್ತವ್ಯಗಳನ್ನು ಸಹ ನಿರ್ವಹಿಸತಕ್ಕದ್ದು ಹಾಗೂ ಅಂತಹ ಪ್ರತ್ಯಾಯೋಜನೆಯು ಆದೇಶದಲ್ಲಿ ನಿರ್ದಿಷ್ಟಪಡಿಸಿದಂತಹ ನಿರ್ಬಂಧಗಳಿಗೆ ಒಳಪಟ್ಟಿರತಕ್ಕದ್ದು.

(3) ಅವರು ಕುಲಾಧಿಪತಿಯವರ ಅನುಪಸ್ಥಿತಿಯಲ್ಲಿ ವಿಶ್ವವಿದ್ಯಾಲಯದ ಘಟಿಕೋತ್ಸವದ ಅಧ್ಯಕ್ಷತೆಯನ್ನು ವಹಿಸತಕ್ಕದ್ದು.

**27. ಕುಲಪತಿಯವರು.–** (1) ಕುಲಪತಿಯವರು ವಿಶ್ವವಿದ್ಯಾಲಯದ ಪೂರ್ಣಕಾಲಿಕ ಅಧಿಕಾರಿಯಾಗಿರತಕ್ಕದ್ದು.

(2) ರಾಜ್ಯ ಸರ್ಕಾರವು ಈ ಮುಂದಿನ ವ್ಯಕ್ತಿಗಳನ್ನು ಒಳಗೊಂಡ ಒಂದು ಶೋಧನಾ ಸಮಿತಿಯನ್ನು ರಚಿಸತಕ್ಕದ್ದು, ಎಂದರೆ:–

(i) ಮಹಾ ನಿರ್ದೇಶಕರು, ಭಾರತದ ಕೃಷಿ ಸಂಶೋಧನಾ ಪರಿಷತ್ತು

(ii) ಅಧ್ಯಕ್ಷರು, ವಿಶ್ವವಿದ್ಯಾಲಯ ಅನುದಾನ ಆಯೋಗ ಅಥವಾ ಅವರ ನಾಮನಿರ್ದೇಶಿತರು

(iii) ಕುಲಾಧಿಪತಿಯವರ ಒಬ್ಬ ನಾಮನಿರ್ದೇಶಿತರು;

(iv) ರಾಜ್ಯ ಸರ್ಕಾರದ ಒಬ್ಬ ನಾಮನಿರ್ದೇಶಿತರು;

ರಾಜ್ಯ ಸರ್ಕಾರವು ಅಂಥ ಸಮಿತಿಯ ಸದಸ್ಯರಲ್ಲಿ ಒಬ್ಬರನ್ನು ಸಮಿತಿಯ ಅಧ್ಯಕ್ಷರಾಗಿ ನೇಮಕಮಾಡತಕ್ಕದ್ದು. ತೋಟಗಾರಿಕೆ ಇಲಾಖೆಯ ಪ್ರಭಾರದಲ್ಲಿರುವ ಸರ್ಕಾರದ ಕಾರ್ಯದರ್ಶಿಗಳು ಅಥವಾ ಸರ್ಕಾರದ ಉಪ ಕಾರ್ಯದರ್ಶಿಗಳ ದರ್ಜೆಗಿಂತ ಕಡಿಮೆಯಿಲ್ಲದ ದರ್ಜೆಯ ಅವರ ನಾಮ ನಿರ್ದೇಶಿತರು ಶೋಧನಾ ಸಮಿತಿಯ ಸಂಚಾಲಕರಾಗಿರತಕ್ಕದು.

(3) ಶೋಧನಾ ಸಮಿತಿಯು .

(4) ಖ್ಯಾತ ತೋಟಗಾರಿಕೆ ತಜ್ಞರಾದ ಮೂರು ವ್ಯಕ್ತಿಗಳ ಹೆಸರಿನ ಪಟ್ಟಿಯನ್ನು ಅಕಾರದಿಯಾಗಿ ರಾಜ್ಯ ಸರ್ಕಾರಕ್ಕೆ ಸಲ್ಲಿಸತಕ್ಕದ್ದು. ರಾಜ್ಯ ಸರ್ಕಾರವು ಕುಲಾಧಿಪತಿಯವರಿಗೆ ಆ ಪಟ್ಟಿಯನ್ನು ಕಳುಹಿಸತಕ್ಕದ್ದು. ಕುಲಾಧಿಪತಿಯವರು ಅರ್ಹತೆ, ಸಮದರ್ಶಿತ್ವ ಮತ್ತು ಸಾಮಾಜಿಕ ನ್ಯಾಯ ಇವುಗಳನ್ನು ಗಮನದಲ್ಲಿಟ್ಟುಕೊಂಡು ಮತ್ತು ರಾಜ್ಯ ಸರ್ಕಾರದ ಸಹಮತಿಯೊಡನೆ ಸದರಿ ಪಟ್ಟಿಯಿಂದ ಒಬ್ಬ ವ್ಯಕ್ತಿಯನ್ನು ಕುಲಪತಿಯಾಗಿ ನೇಮಿಸತಕ್ಕದ್ದು:

ಪರಂತು, ಕುಲಾಧಿಪತಿಯವರು, ಅವಶ್ಯವಿದ್ದಲ್ಲಿ ರಾಜ್ಯ ಸರ್ಕಾರದ ಸಹಮತಿಯೊಡನೆ ಎರಡನೇ ಪಟ್ಟಿಯನ್ನು ಕೇಳಬಹುದು ಮತ್ತು ಶೋಧನಾ ಸಮಿತಿಯು ಎರಡನೇ ಪಟ್ಟಿಯನ್ನು ಕಳುಹಿಸತಕ್ಕದ್ದು ಮತ್ತು ಅದು ಅಂತಿಮವಾಗಿರತಕ್ಕದ್ದು.

(4) (3)ನೇ ಉಪ ಪ್ರಕರಣದಲ್ಲಿ ಏನೇ ಇದ್ದರೂ, ವಿಶ್ವವಿದ್ಯಾಲಯದ ಮೊದಲ ಕುಲಪತಿಯವರನ್ನು ರಾಜ್ಯ ಸರ್ಕಾರದ ಶಿಫಾರಸ್ಸಿನ ಮೇಲೆ ಕುಲಾಧಿಪತಿಯವರು ನೇಮಕ ಮಾಡತಕ್ಕದ್ದು.

(5) ಕುಲಪತಿಯವರು ನಾಲ್ಕು ವರ್ಷಗಳವರೆಗೆ ಅಥವಾ ಅವರಿಗೆ ಅರವತ್ತೈದು ವರ್ಷಗಳಾಗುವವರೆಗೆ ಇವುಗಳಲ್ಲಿ ಯಾವುದು ಮೊದಲೋ ಆ ಅವಧಿಯವರೆಗೆ ಪದಧಾರಣೆಯನ್ನು ಮಾಡಿರತಕ್ಕದ್ದು. ಅವರು ಪುನರ್ ನೇಮಕಾತಿಗೆ ಅರ್ಹರಾಗಿರತಕ್ಕದ್ದಲ್ಲ.

(6) ಕುಲಪತಿಯವರ ಉಪಲಬ್ಧಿಗಳು ಮತ್ತು ಇತರ ಸೇವಾ ಷರತ್ತುಗಳು ಕುಲಾಧಿಪತಿಯವರು ನಿರ್ಧರಿಸಬಹುದಾದಂತೆ ಇರತಕ್ಕದ್ದು ಮತ್ತು ಅವುಗಳನ್ನು ಅವರು ಕುಲಪತಿಯಾಗಿ ನೇಮಕವಾದ ತರುವಾಯ ಅವರಿಗೆ ಅನಾನುಕೂಲವಾಗುವಂತೆ ಬದಲಾಯಿಸತಕ್ಕದಲ್ಲ.

(7) ಕುಲಪತಿಯವರು ಕುಲಾಧಿಪತಿಯವರಿಗೆ ತನ್ನ ಕೈ ಬರಹದಲ್ಲಿ ರಾಜಿನಾಮೆ ಪತ್ರವನ್ನು ಬರೆದು ತಾನು ಬಿಡುಗಡೆಗೊಳ್ಳಲು ಇಚ್ಛಿಸುವ ದಿನಾಂಕದಿಂದ ಅರವತ್ತು ದಿನಗಳಿಗೆ ಮೊದಲು ಅದನ್ನು ಕುಲಾಧಿಪತಿಯವರಿಗೆ ಕಳುಹಿಸುವ ಮೂಲಕ ತನ್ನ ಸ್ಥಾನವನ್ನು ತ್ಯಜಿಸಬಹುದು ಆದರೆ ಕುಲಾಧಿಪತಿಯವರು ಅವರನ್ನು ಅದಕ್ಕೂ ಮೊದಲೇ ಬಿಡುಗಡೆಗೊಳಿಸಬಹುದು.

(8) ಕುಲಪತಿಯವರ ಹುದ್ದೆಯು ತಾತ್ಕಾಲಿಕವಾಗಿ ಖಾಲಿಯಾದರೆ ಅಥವಾ ಅವರ ರಜೆಯ ಕಾರಣದಿಂದಾಗಿ ಗೈರುಹಾಜರಾದಲ್ಲಿ ಅಥವಾ ಇನ್ನಾವುದೇ ಕಾರಣಗಳಿಗಾಗಿ ಖಾಲಿಯಾದರೆ ಶಿಕ್ಷಣ ನಿರ್ದೇಶಕರು ಮತ್ತು ಶಿಕ್ಷಣ ನಿರ್ದೇಶಕರ ಗೈರು ಹಾಜರಿಯಲ್ಲಿ, ಕುಲಸಚಿವರು ಅಥವಾ ಕೇಂದ್ರ ಕಾರ್ಯಸ್ಥಾನದಲ್ಲಿರುವ ವಿಶ್ವವಿದ್ಯಾಲಯದ ಅತ್ಯಂತ ಹಿರಿಯ

ನಿರ್ದೇಶಕರು, ಕುಲಾಧಿಪತಿಯವರ ಅನುಮೋದನೆ ಪಡೆದು ಕುಲಪತಿಯವರ ಕರ್ತವ್ಯಗಳನ್ನು ನಿರ್ವಹಿಸಬಹುದು. ಆದರೆ ಅವರ ಪದಾವಧಿಯು ಆರು ತಿಂಗಳುಗಳನ್ನು ಮೀರತಕ್ಕದ್ದಲ್ಲ.

(9) ಕುಲಪತಿಯವರನ್ನು, ಅವರ ದುರ್ನಡತೆಯ ಕಾರಣದ ಮೇಲೆ ಅಥವಾ ಅಸಮರ್ಥತೆಯ ಕಾರಣದ ಮೇಲೆ ಅಥವಾ ಕುಲಪತಿಯವರು ತಮ್ಮ ಪದದಲ್ಲಿ ಮುಂದುವರಿಯುವುದರಿಂದ ವಿಶ್ವವಿದ್ಯಾಲಯದ ಹಿತಾಸಕ್ತಿಗೆ ದಕ್ಕೆ ಉಂಟಾಗುತ್ತದೆಂದು ಕುಲಾಧಿಪತಿಯವರು ಮನಗಂಡರೆ ಆಗ ಕುಲಾಧಿಪತಿಯವರು ಉಚ್ಚ ನ್ಯಾಯಾಲಯದ ನ್ಯಾಯಮೂರ್ತಿಯವರನ್ನು ಅಥವಾ ನ್ಯಾಯಮೂರ್ತಿ ಆಗಿದ್ದವರನ್ನು ನಾಮನಿರ್ದೇಶನ ಮಾಡಿ ಅವರಿಂದ ಯುಕ್ತ ವಿಚಾರಣೆಯನ್ನು ನಡೆಸಿದ ತರುವಾಯ ಮತ್ತು ಆ ವಿಚಾರಣೆಯಲ್ಲಿ ಕುಲಪತಿಯವರಿಗೆ ಮನವಿಯನ್ನು ಸಲ್ಲಿಸಲು ಅವಕಾಶವನ್ನು ನೀಡಿ, ಕುಲಾಧಿಪತಿಯವರು ಹೊರಡಿಸಿದ ಆದೇಶದ ಮೂಲಕವಾಗಿ ಹೊರತು ಅನ್ಯಥಾ ಕುಲಪತಿಯವರನ್ನು ಅವರ ಸ್ಥಾನದಿಂದ ತೆಗೆಯತಕ್ಕದ್ದಲ್ಲ.

**28. ವಿಶೇಷಾಧಿಕಾರಿ.–** (1) ಸರ್ಕಾರವು ಒಬ್ಬ ಅಧಿಕಾರಿಯನ್ನು ವಿಶೇಷಾಧಿಕಾರಿಯಾಗಿ ನೇಮಕ ಮಾಡತಕ್ಕದ್ದು.

(2) (1)ನೇ ಉಪ ಪ್ರಕರಣದ ಅಡಿಯಲ್ಲಿ ನೇಮಕಗೊಂಡ ವಿಶೇಷಾಧಿಕಾರಿಯು ವಿಶ್ವವಿದ್ಯಾಲಯದ ಸ್ಥಾಪನೆಗೆ ಅವಶ್ಯ ಕ್ರಮಗಳನ್ನು ಕೈಗೊಳ್ಳತಕ್ಕದ್ದು ಮತ್ತು ರಾಜ್ಯ ಸರ್ಕಾರವು ನಿರ್ದಿಷ್ಟಪಡಿಸಬಹುದಾದಂಥ ವಿಶ್ವವಿದ್ಯಾಲಯದ ಕುಲಪತಿಗಳ ಅಧಿಕಾರಗಳನ್ನು ಚಲಾಯಿಸತಕ್ಕದ್ದು ಮತ್ತು ಪ್ರಕಾರ್ಯಗಳನ್ನು ನೆರವೇರಿಸತಕ್ಕದ್ದು.

(3) ವಿಶೇಷಾಧಿಕಾರಿಯು ಮೊದಲನೇ ಕುಲಪತಿಯವರು ನೇಮಕವಾಗುವವರೆಗೆ ಪದಧಾರಣೆಯನ್ನು ಮಾಡಿರುತ್ತಾರೆ.

**29. ಕುಲಪತಿಯವರ ಅಧಿಕಾರಗಳು ಮತ್ತು ಕರ್ತವ್ಯಗಳು.– (1)** ಕುಲಪತಿಯವರು ವಿಶ್ವವಿದ್ಯಾಲಯದ ಪ್ರಧಾನ ಕಾರ್ಯನಿರ್ವಾಹಕ ಶೈಕ್ಷಣಿಕ ಅಧಿಕಾರಿ ಮತ್ತು ಮಂಡಳಿಯ, ವಿದ್ಯಾವಿಷಯಕ ಪರಿಷತ್ತಿನ ಮತ್ತು ಇತರ ಪ್ರಾಧಿಕಾರಗಳ ಪದನಿಮಿತ್ತ ಅಧ್ಯಕ್ಷರಾಗಿರತಕ್ಕದ್ದು ಹಾಗೂ ಕುಲಾಧಿಪತಿಯವರ ಮತ್ತು ಸಹಕುಲಾಧಿಪತಿಯವರ ಅನುಪಸ್ಥಿತಿಯಲ್ಲಿ ವಿಶ್ವವಿದ್ಯಾಲಯದ ಘಟಿಕೋತ್ಸವದ ಅಧ್ಯಕ್ಷತೆಯನ್ನು ವಹಿಸತಕ್ಕದ್ದು ಹಾಗೂ ಪದವಿಗಳನ್ನು ಪಡೆಯಲು ಅರ್ಹರಾದವರಿಗೆ ಪದವಿಗಳನ್ನು ಪ್ರದಾನ ಮಾಡತಕ್ಕದ್ದು.

(2) ಕುಲಪತಿಯವರು ವಿಶ್ವವಿದ್ಯಾಲಯದ ವ್ಯವಹಾರಗಳ ಮೇಲೆ ಸಾಮಾನ್ಯ ನಿಯಂತ್ರಣವನ್ನು ಹೊಂದಿರತಕ್ಕದ್ದು ಮತ್ತು ವಿಶ್ವವಿದ್ಯಾಲಯದ ಶಿಸ್ತನ್ನು ಕಾಪಾಡುವುದಕ್ಕೆ ಜವಾಬ್ದಾರರಾಗಿರತಕ್ಕದ್ದು.

(3) ಕುಲಪತಿಯವರು ಮಂಡಳಿಯ, ವಿದ್ಯಾವಿಷಯಕ ಪರಿಷತ್ತಿನ, ಸಂಶೋಧನಾ ಪರಿಷತ್ತಿನ ವಿಸ್ತರಣಾ ಶಿಕ್ಷಣ ಪರಿಷತ್ತಿನ ಸಭೆಗಳನ್ನು ಏರ್ಪಡಿಸತಕ್ಕದ್ದು.

(4) ಕುಲಪತಿಯವರು ಈ ಅಧಿನಿಯಮದ, ಶಾಸನಗಳ ಮತ್ತು ವಿನಿಯಮಗಳ ಉಪಬಂಧಗಳು ಸರಿಯಾಗಿ ಪಾಲನೆಯಾಗುವಂತೆ ನೋಡಿಕೊಳ್ಳತಕ್ಕದ್ದು.

(5) ಕುಲಪತಿಯವರು ವಾರ್ಷಿಕ ಹಣಕಾಸು ಅಂದಾಜುಗಳನ್ನು ಮತ್ತು ವಾರ್ಷಿಕ ಲೆಕ್ಕಪತ್ರಗಳನ್ನು ಮಂಡಳಿಗೆ ಮಂಡಿಸುವುದಕ್ಕೆ ಹೊಣೆಗಾರರಾಗಿರತಕ್ಕದ್ದು.

(6) ಕುಲಪತಿಯವರು ಯಾವುದೇ ತುರ್ತು ಪರಿಸ್ಥಿತಿಯ ಸಂದರ್ಭದಲ್ಲಿ ತಕ್ಷಣ ಕ್ರಮಕೈಗೊಳ್ಳಬೇಕಾಗಿದೆ ಎಂದು ಅಭಿಪ್ರಾಯಪಟ್ಟಲ್ಲಿ ಅವರು ಅಂಥ ಯಾವುದೇ ಕ್ರಮವನ್ನು ಕೈಗೊಳ್ಳಬಹುದು. ಅಂತಹ ಸಂದರ್ಭದಲ್ಲಿ ಅವರು ತದನಂತರ ತಾನು ಕೈಗೊಂಡ ಕ್ರಮಗಳ ಬಗ್ಗೆ, ಆದಷ್ಟು ಬೇಗನೆ ಒಂದು ವರದಿಯನ್ನು ಸಾಮಾನ್ಯವಾಗಿ ಅಂತಹ ವಿಷಯಗಳನ್ನು ನಿರ್ವಹಿಸುವ ಪ್ರಾಧಿಕಾರಕ್ಕೆ ಅಥವಾ ನಿಕಾಯಕ್ಕೆ ಸಲ್ಲಿಸತಕ್ಕದ್ದು. ಕುಲಪತಿಯವರ ಕ್ರಮವನ್ನು ಆ ಪ್ರಾಧಿಕಾರ ಅಥವಾ ನಿಕಾಯವು ಒಪ್ಪಿಕೊಳ್ಳದಿದ್ದಲ್ಲಿ ಅಂತಹ ವಿಷಯವನ್ನು ಕುಲಾಧಿಪತಿಯವರಿಗೆ ಕಳುಹಿಸತಕ್ಕದ್ದು ಮತ್ತು ಅದರ ಬಗ್ಗೆ ಅವರ ತೀರ್ಮಾನವು ಅಂತಿಮವಾಗಿರತಕ್ಕದ್ದು.

(7) ಕುಲಪತಿಯವರು ಕೈಗೊಂಡ ಕ್ರಮದಿಂದಾಗಿ ವಿಶ್ವವಿದ್ಯಾಲಯದ ಸೇವೆಯಲ್ಲಿರುವ ಯಾವುದೇ ವ್ಯಕ್ತಿಗೆ ತೊಂದರೆ ಉಂಟಾದಲ್ಲಿ, ಅಂತಹ ವ್ಯಕ್ತಿಯು ಕೈಗೊಂಡ ಕ್ರಮದ ಬಗ್ಗೆ ನೋಟೀಸನ್ನು ಸ್ವೀಕರಿಸಿದ ದಿನಾಂಕದಿಂದ ಮೂವತ್ತು ದಿನಗಳೊಳಗೆ ಮಂಡಳಿಗೆ ಅಪೀಲನ್ನು ಸಲ್ಲಿಸಬಹುದು.

(8) ಮಂಡಳಿಯ ಮೇಲ್ಮನವಿ ಆದೇಶದಿಂದ ಬಾಧಿತನಾದ ಯಾವೊಬ್ಬ ವ್ಯಕ್ತಿಯು ಅಂತಹ ಆದೇಶವನ್ನು ಸ್ವೀಕರಿಸಿದ ದಿನಾಂಕದಿಂದ ಮೂವತ್ತು ದಿನಗಳೊಳಗೆ ಕುಲಾಧಿಪತಿಯವರಿಗೆ ಎರಡನೇ ಅಪೀಲನ್ನು ಸಲ್ಲಿಸಬಹುದು ಮತ್ತು ಅಂತಹ ಅಪೀಲಿನ ಮೇಲೆ ಕುಲಾಧಿಪತಿಯವರ ತೀರ್ಮಾನವು ಅಂತಿಮವಾಗಿರತಕ್ಕದ್ದು.

(9) ಕುಲಪತಿಯವರು, (8)ನೇ ಉಪ ಪ್ರಕರಣದಡಿಯಲ್ಲಿಯ ತೀರ್ಮಾನವನ್ನು ಹೊರತುಪಡಿಸಿ ಮಂಡಳಿಯ ತೀರ್ಮಾನವು ಅಧಿನಿಯಮಗಳ ಮತ್ತು ಶಾಸನಗಳ ಉಪಬಂಧಗಳಿಗೆ ಸರ್ಕಾರದ ವಿನಿಯಮಗಳಿಗೆ ಅನುಗುಣವಾಗಿಲ್ಲವೆಂದು, ಹಾಗೂ ವಿಶ್ವವಿದ್ಯಾಲಯದ ಹಿತಾಸಕ್ತಿಗೆ ಪೂರಕವಾಗಿ ಇಲ್ಲವೆಂದು ಅಭಿಪ್ರಾಯಪಟ್ಟಲ್ಲಿ ಆತನು ಹದಿನೈದು ದಿನಗಳೊಳಗಾಗಿ ಅದನ್ನು ಕುಲಾಧಿಪತಿಯವರಿಗೆ ಅವರ ತೀರ್ಮಾನವನ್ನು ಕೋರಿ ಕಳುಹಿಸಿಕೊಡತಕ್ಕದ್ದು. ಅದರ ಮೇಲೆ ಕುಲಾಧಿಪತಿಯವರು

ಕೈಗೊಂಡ ತೀರ್ಮಾನವು ಅಂತಿಮವಾಗಿರತಕ್ಕದ್ದು. ಕುಲಾಧಿಪತಿಯವರು ಹಾಗೆ ಕಳುಹಿಸಿಕೊಟ್ಟ ವಿಷಯವನ್ನು ವಿಲೆಮಾಡುವವರೆಗೆ ಮಂಡಳಿಯ ತೀರ್ಮಾನವನ್ನು ಜಾರಿಗೊಳಿಸತಕ್ಕದ್ದಲ್ಲ.

(10) ಮೇಲಿನ ಉಪ ಪ್ರಕರಣದ ಉಪಬಂಧಗಳಿಗೆ ಒಳಪಟ್ಟು ಕುಲಪತಿಯವರು ವಿಶ್ವವಿದ್ಯಾಲಯದ ಅಧಿಕಾರಿಗಳು, ಅಧ್ಯಾಪಕರು ಹಾಗೂ ಇತರ ನೌಕರರ ನೇಮಕಾತಿಗಳು, ಮುಂಬಡ್ತಿಗಳು ಮತ್ತು ವಜಾ ವಿಷಯಗಳಿಗೆ ಸಂಬಂಧಿಸಿದ ಮಂಡಳಿಯ ತೀರ್ಮಾನಗಳನ್ನು ಜಾರಿಗೊಳಿಸತಕ್ಕದು.

(11) ಕುಲಪತಿಯವರು ವಿಶ್ವವಿದ್ಯಾಲಯದ ವ್ಯವಹರಣೆಗಳ ಸೂಕ್ತ ಆಡಳಿತಕ್ಕೆ ಮತ್ತು ಬೋಧನೆ, ಸಂಶೋಧನೆ ಹಾಗೂ ವಿಸ್ತರಣಾ ಶಿಕ್ಷಣ ಇವುಗಳ ನಿಕಟ ಸಹವರ್ತನೆ ಮತ್ತು ಒಗ್ಗೂಡುವಿಕೆಗೆ ಜವಾಬ್ದಾರನಾಗಿರತಕ್ಕದ್ದು.

(12) ಕುಲಪತಿಯವರು ಈ ಅಧಿನಿಯಮ ಮತ್ತು ಶಾಸನಗಳ ಉಪಬಂಧಗಳ ಅಡಿಯಲ್ಲಿ ತಮಗೆ ಪ್ರದಾನ ಮಾಡಿದ ಅಥವಾ ವಹಿಸಿದಂತಹ ಇತರ ಅಧಿಕಾರಗಳನ್ನು ಚಲಾಯಿಸತಕ್ಕದ್ದು ಮತ್ತು ಅಂತಹ ಇತರ ಕರ್ತವ್ಯಗಳನ್ನು ನೆರವೇರಿಸತಕ್ಕದ್ದು.

**30. ವಿಶ್ವವಿದ್ಯಾಲಯದ ಇತರ ಅಧಿಕಾರಿಗಳ ಸಾಮಾನ್ಯ ನಿಬಂಧನೆಗಳು ಮತ್ತು ಷರತ್ತುಗಳು.– (1)** 24ನೇ ಪ್ರಕರಣದ (4) ರಿಂದ (9)ನೇ ಖಂಡಗಳಲ್ಲಿ ನಿರ್ದಿಷ್ಟಪಡಿಸಿದ ವಿಶ್ವವಿದ್ಯಾಲಯದ ಅಧಿಕಾರಿಗಳನ್ನು ನಿಯಮಿಸಬಹುದಾದಂತಹ ನಿಬಂಧನೆಗಳು ಮತ್ತು ಷರತ್ತುಗಳ ಮೇಲೆ ಮಂಡಳಿಯ ಅನುಮೋದನೆಯೊಂದಿಗೆ ಕುಲಪತಿಯವರು ನೇಮಿಸತಕ್ಕದ್ದು:

ಪರಂತು, ಕುಲಪತಿಯವರು ಅಂಥ ಅಧಿಕಾರಿಗಳ ನೇಮಕಾತಿಗಳನ್ನು ವಿಶ್ವವಿದ್ಯಾಲಯದ ಸಂಬಂಧಪಟ್ಟ ಪ್ರಾಧಿಕಾರಕ್ಕೆ ಮಾಹಿತಿ ಒದಗಿಸಿ ತಾತ್ಕಾಲಿಕ ಕ್ರಮವಾಗಿ ಮಾಡಬಹುದು.

(2) 24ನೇ ಪ್ರಕರಣದ (4) ರಿಂದ (10)ರ ವರೆಗಿನ ಖಂಡಗಳಲ್ಲಿ ಉಲ್ಲೇಖಿಸಿದ ವಿಶ್ವವಿದ್ಯಾಲಯದ ಅಧಿಕಾರಿಗಳು ತಮ್ಮ ವೇತನ, ಭತ್ಯೆಗಳು, ಇತರ ಸೇವಾ ಷರತ್ತುಗಳನ್ನು ಕುರಿತು ಶಾಸನಗಳು ಅಥವಾ ಇತರ ಆದೇಶಗಳಲ್ಲಿ ವಿನಿಯಮಿಸಲಾದುದನ್ನು ಉಳಿದು ವಿಶ್ವವಿದ್ಯಾಲಯದ ಯಾವುದೇ ಕೆಲಸಕ್ಕಾಗಿ ಅವರಿಗೆ ಯಾವುದೇ ಸಂಭಾವನೆಯನ್ನು ಕೊಡಮಾಡತಕ್ಕದ್ದಲ್ಲ ಅಥವಾ ಅವರು ಸ್ವೀಕರಿಸತಕ್ಕದ್ದಲ್ಲ.

**31. ನಿರ್ದೇಶಕರುಗಳು, ಡೀನ್‌ಗಳು, ಕುಲಸಚಿವರು, ಲೆಕ್ಕ ನಿಯಂತ್ರಕರು ಇತ್ಯಾದಿ.–**

(1) **ಶಿಕ್ಷಣ ನಿರ್ದೇಶಕರು:**

(ಎ) ಇವರು ವಿಶ್ವವಿದ್ಯಾಲಯದ ಬೋಧನೆ, ಸಂಶೋಧನೆ ಮತ್ತು ವಿಸ್ತರಣಾ ಶಿಕ್ಷಣ ಕಾರ್ಯಕ್ರಮಗಳನ್ನು ಸಮನ್ವಯಗೊಳಿಸಲು ಜವಾಬ್ದಾರರಾಗಿರತಕ್ಕದ್ದು. ವಿಶ್ವವಿದ್ಯಾಲಯದಲ್ಲಿನ ಕಾರ್ಯನೀತಿ ವಿಷಯಗಳ ಮತ್ತು ನಿವಾಸಿ ಬೋಧನೆ ಬಗೆಗಿನ ಪದ್ದತಿಗೆ ಮತ್ತು ಶೈಕ್ಷಣಿಕ ತಂತ್ರಜ್ಞಾನ ಮತ್ತು ಅಧ್ಯಾಪಕರ ತರಬೇತಿ ಕಾರ್ಯಕ್ರಮಗಳ ಬಗ್ಗೆ ಕಾರ್ಯನಿರ್ವಹಿಸುತ್ತಾರೆ. ಇವರು ಪರೀಕ್ಷೆಯ ಮೇಲ್ವಿಚಾರಣೆಯನ್ನೂ ಮಾಡತಕ್ಕದ್ದು;

(ಬಿ) ವಿದ್ಯಾವಿಷಯಕ ಪರಿಷತ್ತು, ಪದವಿ ಕಾರ್ಯಕ್ರಮಗಳ ಅಧ್ಯಯನಗಳ ಮಂಡಳಿ ಮತ್ತು ಸ್ನಾತಕೋತ್ತರ ಕಾರ್ಯಕ್ರಮಗಳ ಅಧ್ಯಯನ ಮಂಡಳಿಗಳ ಶಾಶ್ವತವಾದ ದಾಖಲೆಗಳನ್ನು ನಿರ್ವಹಿಸಲು ಮತ್ತು ವಿದ್ಯಾರ್ಥಿಗಳ ಶಿಸ್ತನ್ನು ಕಾಪಾಡಿಕೊಂಡು ಬರಲು ಜವಾಬ್ದಾರರಾಗಿರತಕ್ಕದ್ದು;

(ಸಿ) ವಿದ್ಯಾವಿಷಯಕ ಪರಿಷತ್ತಿನ ಸದಸ್ಯ ಕಾರ್ಯದರ್ಶಿಯಾಗಿ ಮತ್ತು ಪದವಿ ಹಾಗೂ ಸ್ನಾತಕೋತ್ತರ ಕಾರ್ಯಕ್ರಮಗಳ ಅಧ್ಯಯನ ಮಂಡಳಿಯ ಅಧ್ಯಕ್ಷರಾಗಿ ಕರ್ತವ್ಯ ನಿರ್ವಹಿಸತಕ್ಕದ್ದು;

(ಡಿ) ವಿಶ್ವವಿದ್ಯಾಲಯದಲ್ಲಿ ಎಲ್ಲಾ ಸಂಶೋಧನೆ ಮತ್ತು ವಿಸ್ತರಣಾ ಶಿಕ್ಷಣ ಕಾರ್ಯಕ್ರಮಗಳ ಸಮನ್ವಯ ನಡೆಸತಕ್ಕದ್ದು ಮತ್ತು ಪುನರಾವಲೋಕಿಸತಕ್ಕದ್ದು;

(ಇ) ಮಾಹಿತಿ ಕೇಂದ್ರ ಮತ್ತು ವಿಶ್ವವಿದ್ಯಾಲಯದ ಪ್ರಕಟಣೆ ವಿಭಾಗದ ಚಟುವಟಿಕೆಗಳ ಮೇಲ್ವಿಚಾರಣೆ ಮಾಡತಕ್ಕದ್ದು.

**(2) ಸಂಶೋಧನಾ ನಿರ್ದೇಶಕರು:** ಇವರು 51ನೇ ಪ್ರಕರಣದಲ್ಲಿ ಹೇಳಿದಂತೆ ವಿಶ್ವವಿದ್ಯಾಲಯದಲ್ಲಿ ಸಂಶೋಧನಾ ಕಾರ್ಯಕ್ರಮಗಳ ನಿರ್ದೇಶನ ಮತ್ತು ಸಮನ್ವಯ ಮತ್ತು ಸಂಶೋಧನೆ ಕೇಂದ್ರಗಳ ದಕ್ಷ ಕಾರ್ಯನಿರ್ವಹಣೆಗೆ ಜವಾಬ್ದಾರರಾಗಿರತಕ್ಕದ್ದು.

**(3) ವಿಸ್ತರಣಾ ನಿರ್ದೇಶಕರು:** ಇವರು 52ನೇ ಪ್ರಕರಣದಲ್ಲಿ ನಿರ್ದಿಷ್ಟಪಡಿಸಿದಂತೆ ತೋಟಗಾರಿಕೆ ವಿಸ್ತರಣಾ ಶಿಕ್ಷಣದ ಕಾರ್ಯನಿರ್ವಹಣೆಗೆ ಜವಾಬ್ದಾರರಾಗಿರತಕ್ಕದ್ದು.

**(4) ಡೀನ್:** ಇವರು ಕಾಲೇಜಿನ ಮುಖ್ಯಸ್ಥನಾಗಿರತಕ್ಕದ್ದು ಮತ್ತು ಕಾಲೇಜಿನಲ್ಲಿ ಕಲಿಸುವ, ಸಂಶೋಧನೆಯ ಮತ್ತು ವಿಸ್ತರಣಾ ಶಿಕ್ಷಣದ ಚಟುವಟಿಕೆಗಳ ಆಡಳಿತಕ್ಕೆ ಮತ್ತು ಅನುಷ್ಠಾನಕ್ಕೆ ಜವಾಬ್ದಾರರಾಗಿರತಕ್ಕದ್ದು.

**(5) ಸ್ನಾತಕೋತ್ತರ ಅಧ್ಯಯನಗಳ ಡೀನ್:** ಇವರು ಸ್ನಾತಕೋತ್ತರ ಅಧ್ಯಯನಗಳು ಮತ್ತು ಡಿಪ್ಲೊಮೊಗಳನ್ನೊಳಗೊಂಡಂತೆ ಇತರ ಶೈಕ್ಷಣಿಕ ಕಾರ್ಯಕ್ರಮಗಳ ಆಡಳಿತ ಮತ್ತು ಅನುಷ್ಠಾನಕ್ಕೆ ಜವಾಬ್ದಾರರಾಗಿರತಕ್ಕದ್ದು.

**(6) ವಿದ್ಯಾರ್ಥಿ ಕ್ಷೇಮಾಭಿವೃದ್ಧಿ ಡೀನ್:**

(ಎ) ಇವರು ವಿದ್ಯಾರ್ಥಿಗಳ ಸಲಹೆ ನೀಡಿಕೆ ಮತ್ತು ಕೌನ್ಸಿಲಿಂಗ್ ಕಾರ್ಯಕ್ರಮವನ್ನು ಯೋಜಿಸುವುದು ಮತ್ತು ನಿರ್ದೇಶನ ಮಾಡುವುದು ಮತ್ತು ವಿಶ್ವವಿದ್ಯಾಲಯದ ಪದವೀಧರರಿಗೆ ಉದ್ಯೋಗ ದೊರಕಿಸಿಕೊಡಲು ಸಹಾಯ ಮಾಡುವುದಕ್ಕಾಗಿ ಭಾವೀ ಉದ್ಯೋಗದಾತರು ಮತ್ತು ಉದ್ಯೋಗ ಏಜೆನ್ಸಿಗಳ ಸಹಕಾರವನ್ನು ಪಡೆದುಕೊಳ್ಳುವುದು ಮತ್ತು ವಿಶ್ವವಿದ್ಯಾಲಯದ ವಿದ್ಯಾರ್ಥಿಗಳಲ್ಲಿ ಶಿಸ್ತನ್ನು ಪ್ರೋತ್ಸಾಹಿಸತಕ್ಕದ್ದು;

(ಬಿ) ಕ್ರೀಡೆಗಳು, ಸಾಂಸ್ಕೃತಿಕ ಮತ್ತು ಇತರ ಮನರಂಜನಾ ಚಟುವಟಿಕೆಗಳು, ರಾಷ್ಟ್ರೀಯ ಯುವಸೇನಾದಳ (ಎನ್.ಸಿ.ಸಿ.), ಎನ್‌ಎಸ್‌ಎಸ್, ಮಾತುಗಾರಿಕೆ ಕೌಶಲ್ಯ ಸುಧಾರಣೆ ಮುಂತಾದ ವಿದ್ಯಾರ್ಥಿಗಳ ಪಠ್ಯೇತರ ಚಟುವಟಿಕೆಗಳು ಹಾಗೂ ಅದೇ ತರಹದ ಇತರ ಚಟುವಟಿಕೆಗಳನ್ನು ವಿಶ್ವವಿದ್ಯಾಲಯ ಮಟ್ಟದಲ್ಲಿ ಯೋಜಿಸುವುದು ಮತ್ತು ಏರ್ಪಡಿಸುವುದು.

(ಸಿ) ವಿದ್ಯಾರ್ಥಿ ನಿಲಯ ಹಾಗೂ ಕೆಫ್ಟೆರಿಯಾಗಳ ಮೇಲ್ವಿಚಾರಣೆ ಮತ್ತು ನಿರ್ವಹಣೆಯಲ್ಲಿ ಕ್ರೀಡೆಗಳನ್ನು ಮತ್ತು ಸಾಂಸ್ಕೃತಿಕ ಕಾರ್ಯಕ್ರಮಗಳನ್ನು ನಡೆಸುವಲ್ಲಿ ಡೀನ್‌ಗಳಿಗೆ ಸಹಾಯ ಮಾಡತಕ್ಕದ್ದು;

(ಡಿ) ವಿಶ್ವವಿದ್ಯಾಲಯದಲ್ಲಿ ವಿದ್ಯಾರ್ಥಿಗಳ ವೈದ್ಯಕೀಯ ಮತ್ತು ಆರೋಗ್ಯ ಸೇವೆಗಳು ಮತ್ತು ಇತರ ಕ್ಷೇಮಾಭಿವೃದ್ಧಿ ಕ್ರಮಗಳ ಮೇಲ್ವಿಚಾರಣೆ ಮಾಡತಕ್ಕದ್ದು ಮತ್ತು ನಿಯಂತ್ರಿಸತಕ್ಕದ್ದು.

**(7) ಕುಲಸಚಿವರು:**

(ಎ) ಇವರು ವಿಶ್ವವಿದ್ಯಾಲಯದ ಪ್ರೊಫೆಸರ್ ದರ್ಜೆಗಿಂತ ಕಡಿಮೆಯಲ್ಲದ ದರ್ಜೆಯ ತೋಟಗಾರಿಕೆ ವಿಜ್ಞಾನಗಳ ಕ್ಷೇತ್ರದ ಒಬ್ಬ ವಿದ್ವಾಂಸರಾಗಿರತಕ್ಕದ್ದು ಅಥವಾ ಸರ್ಕಾರದ ಉಪ ಕಾರ್ಯದರ್ಶಿಯ ದರ್ಜೆಗಿಂತ ಕಡಿಮೆಯಲ್ಲದ ದರ್ಜೆಯ ರಾಜ್ಯ ಸರ್ಕಾರದ ಒಬ್ಬ ಅಧಿಕಾರಿಯಾಗಿರತಕ್ಕದ್ದು;

(ಬಿ) ವ್ಯವಸ್ಥಾಪನಾ ಮಂಡಳಿಯ, ವಿದ್ಯಾವಿಷಯಕ ಪರಿಷತ್ತಿನ ಪದನಿಮಿತ್ತ ಸದಸ್ಯ ಕಾರ್ಯದರ್ಶಿಯಾಗಿರತಕ್ಕದ್ದು ಮತ್ತು ಎಲ್ಲಾ ಪರಿಷತ್ತುಗಳಿಗೆ ಇವರು ಖಾಯಂ ಆಹ್ವಾನಿತರಾಗಿರತಕ್ಕದ್ದು.

(ಸಿ) ವಿಶ್ವವಿದ್ಯಾಲಯದ ದಾಖಲೆಗಳು ಮತ್ತು ಸಾಮಾನ್ಯ ಮೊಹರಿನ ಕ್ರಮಬದ್ಧ ಅಭಿರಕ್ಷೆಗೆ ಜವಾಬ್ದಾರರಾಗಿರತಕ್ಕದ್ದು;

(ಡಿ) ನಿಯಮಿಸಲಾದಂತೆ ವಿಶ್ವವಿದ್ಯಾಲಯದಲ್ಲಿ ಮಾನವ ಸಂಪನ್ಮೂಲ ಅಭಿವೃದ್ಧಿ ಮತ್ತು ಸಾಮಾನ್ಯ ಆಡಳಿತ ನಡೆಸಲು ಜವಾಬ್ದಾರರಾಗಿರತಕ್ಕದ್ದು.

**(8) ವಿಶ್ವವಿದ್ಯಾಲಯದ ಗ್ರಂಥಪಾಲಕ.–**

ವಿಶ್ವವಿದ್ಯಾಲಯದ ಗ್ರಂಥಾಲಯ ಮಾಹಿತಿ ಪದ್ಧತಿಯ ನಿರ್ವಹಣೆ ಮತ್ತು ವ್ಯವಸ್ಥಾಪನೆಗೆ ಮತ್ತು ವಿಶ್ವವಿದ್ಯಾಲಯದ ಎಲ್ಲಾ ಘಟಕಗಳ ಗ್ರಂಥಾಲಯ ಚಟುವಟಿಕೆಗಳಿಗೆ ಮಾರ್ಗದರ್ಶನ ನೀಡಲು ಮತ್ತು ಸಮನ್ವಯ ನಡೆಸುವುದಕ್ಕೆ ಇವರು ಜವಾಬ್ದಾರರಾಗಿರತಕ್ಕದ್ದು.

ಈ ಅಧಿನಿಯಮದ ಉಪಬಂಧಗಳಿಗೊಳಪಟ್ಟು, 24ನೇ ಪ್ರಕರಣದ (4) ರಿಂದ (9)ನೇ ಖಂಡದಲ್ಲಿ ನಿರ್ದಿಷ್ಟಪಡಿಸಲಾದ ವಿಶ್ವವಿದ್ಯಾಲಯದ ಅಧಿಕಾರಿಗಳು, ಕುಲಪತಿಯವರು ಕಾಲಕಾಲಕ್ಕೆ ನಿಯಮಿಸಬಹುದಾದ ಅಥವಾ ಅವರಿಗೆ ವಹಿಸಿಕೊಡಬಹುದಾದಂತಹ ಇತರ ಕರ್ತವ್ಯಗಳನ್ನು ನಿರ್ವಹಿಸತಕ್ಕದ್ದು.

**(9) ಲೆಕ್ಕ ನಿಯಂತ್ರಕರು.–**

(ಎ) ಲೆಕ್ಕ ನಿಯಂತ್ರಕರು, ವಿಶ್ವವಿದ್ಯಾಲಯದ ಒಬ್ಬ ಪೂರ್ಣಕಾಲಿಕ ಅಧಿಕಾರಿಯಾಗಿರತಕ್ಕದ್ದು. ಇವರು, ಕುಲಪತಿಯವರು ವ್ಯವಸ್ಥಾಪನಾ ಮಂಡಳಿಗೆ ಶಿಫಾರಸು ಮಾಡಿದ ಲೆಕ್ಕ ಪರಿಶೋಧನೆ, ಲೆಕ್ಕಪತ್ರ ನಿರ್ವಹಣೆ ಮತ್ತು ಹಣಕಾಸು ಆಡಳಿತದಲ್ಲಿ ಅನುಭವವುಳ್ಳ ರಾಜ್ಯ ಲೆಕ್ಕಪತ್ರ ಇಲಾಖೆಯ ಜಂಟಿ ನಿಯಂತ್ರಕರ ಕೇಡರ್‌ನ ಅಧಿಕಾರಿಗಳು ಅಥವಾ ಲೆಕ್ಕ ಪರಿಶೋಧನೆ ಮತ್ತು ಲೆಕ್ಕಪತ್ರ ಇಲಾಖೆಯ ಉಪಮಹಾಲೇಖಪಾಲರ ದರ್ಜೆಯ ಒಬ್ಬ ಅಧಿಕಾರಿ – ಇವರುಗಳ ಹೆಸರುಗಳುಳ್ಳ ಮೂವರಿಗೆ ಕಡಿಮೆಯಿಲ್ಲದ ವ್ಯಕ್ತಿಗಳ ಒಂದು ಹೆಸರುಪಟ್ಟಿಯಿಂದ ವ್ಯವಸ್ಥಾಪನಾ ಮಂಡಳಿಯು ಅನುಮೋದಿಸಿದ ಮತ್ತು ಕುಲಪತಿಯವರು ನೇಮಿಸಿದ ಅಧಿಕಾರಿಯಾಗಿರತಕ್ಕದ್ದು. ಹೆಸರು ಪಟ್ಟಿಯಲ್ಲಿರುವ ಯಾರನ್ನೂ ವ್ಯವಸ್ಥಾಪನಾ ಮಂಡಳಿಯು ಮೂವತ್ತು ದಿನಗಳೊಳಗೆ ಅನುಮೋದಿಸದಿದ್ದಲ್ಲಿ, ಕುಲಾಧಿಪತಿಯವರು ಕುಲಪತಿಯವರೊಡನೆ ಸಮಾಲೋಚಿಸಿ, ಲೆಕ್ಕ ನಿಯಂತ್ರಕರಾಗಲು ಸೂಕ್ತ ವ್ಯಕ್ತಿಯೆಂದು ತಾವು ಭಾವಿಸುವಂಥ ಇತರ ವ್ಯಕ್ತಿಯನ್ನು ಲೆಕ್ಕ ನಿಯಂತ್ರಕರನ್ನಾಗಿ ನೇಮಿಸಬಹುದು.

(ಬಿ) ಲೆಕ್ಕ ನಿಯಂತ್ರಕರ ನೇಮಕಾತಿಯ ಅವಧಿಯು ನಾಲ್ಕು ವರ್ಷಗಳಾಗಿರತಕ್ಕದ್ದು.

(ಸಿ) ಲೆಕ್ಕ ನಿಯಂತ್ರಕರು, ಹಣಕಾಸು ಸಮಿತಿಯ ನಿಯಂತ್ರಣಕ್ಕೊಳಪಟ್ಟು, ಶಾಸನಗಳು ಮತ್ತು ವಿನಿಯಮಗಳಲ್ಲಿ ನಿಯಮಿಸಬಹುದಾದ ಅಥವಾ ಕುಲಪತಿಯವರು ಅಥವಾ ಕುಲಸಚಿವರು ಕಾಲದಿಂದ ಕಾಲಕ್ಕೆ ಅಗತ್ಯ ಪಡಿಸಬಹುದಾದಂಥ ಅಧಿಕಾರಗಳನ್ನು ಚಲಾಯಿಸತಕ್ಕದ್ದು ಮತ್ತು ಅಂತಹ ಕರ್ತವ್ಯಗಳನ್ನು ನಿರ್ವಹಿಸತಕ್ಕದ್ದು. ಅವರು ವಿದ್ಯಾವಿಷಯಕ ಪರಿಷತ್ತಿನ ಪದನಿಮಿತ್ತ ಸದಸ್ಯರಾಗಿರತಕ್ಕದ್ದು ಮತ್ತು ಹಣಕಾಸು ಸಮಿತಿಯ ಪದನಿಮಿತ್ತ ಸದಸ್ಯ ಕಾರ್ಯದರ್ಶಿಯಾಗಿರತಕ್ಕದ್ದು.

## ಅಧ್ಯಾಯ – V

## ಶಿಕ್ಷಣ, ಸಂಶೋಧನೆ ಮತ್ತು ವಿಸ್ತರಣಾ ಶಿಕ್ಷಣ

**32. ಶಿಕ್ಷಣ.–** (1) ಈ ಅಧಿನಿಯಮದ ಉಪಬಂಧಗಳಿಗೊಳಪಟ್ಟು, ವಿಶ್ವವಿದ್ಯಾಲಯದಲ್ಲಿ ಶಿಕ್ಷಣವು ನಿಯಮಿಸಲಾದಂತೆ ತೋಟಗಾರಿಕೆ ಹಾಗೂ ಅದಕ್ಕೆ ಸಂಬಂಧಿಸಿದ ವಿಜ್ಞಾನಗಳ ವಿಷಯದಲ್ಲಿ ಪದವಿಯ, ಸ್ನಾತಕೋತ್ತರ ಪದವಿಯ ಮತ್ತು ಡಾಕ್ಟರಲ್ ಡಿಗ್ರಿ ಕಾರ್ಯಕ್ರಮಗಳು ಮತ್ತು ಅಲ್ಪಾವಧಿ ಡಿಪ್ಲೊಮಾ/ ಸರ್ಟಿಫಿಕೇಟ್ ಕೋರ್ಸುಗಳನ್ನು ಒಳಗೊಂಡಿರತಕ್ಕದ್ದು.

(2) ಈ ಶೈಕ್ಷಣಿಕ ಕಾರ್ಯಕ್ರಮಗಳು ರಾಜ್ಯ ಮತ್ತು ರಾಷ್ಟ್ರೀಯ ಕಾರ್ಯನೀತಿಗಳಿಗೆ ಅನುಗುಣವಾಗಿರತಕ್ಕದ್ದು.

(3) ವಿಶ್ವವಿದ್ಯಾಲಯವು ಇ–ಕಲಿಕೆ, ವಿತರಿತ/ದೂರ ಶಿಕ್ಷಣ, ಮಾಹಿತಿ ಮತ್ತು ಸಂವಹನ ತಂತ್ರಜ್ಞಾನ ಆಧಾರಿತ ಜ್ಞಾನವನ್ನು ಹಂಚಿಕೊಳ್ಳುವುದು ಈ ಸಾಧನಗಳನ್ನು ಬಳಸಿಕೊಳ್ಳತಕ್ಕದ್ದು.

(4) ಸಕ್ಷಮ ಮತ್ತು ಕುಶಲ ಪದವೀಧರರನ್ನು ಮತ್ತು ಸ್ನಾತಕೋತ್ತರ ಪದವೀಧರರನ್ನು ತಯಾರಿಸುವ ಗುರಿಯನ್ನು ತೋಟಗಾರಿಕೆ ಶಿಕ್ಷಣ ಕಾರ್ಯಕ್ರಮಗಳು ಹೊಂದಿರತಕ್ಕದ್ದು.

**33. ಸಂಶೋಧನೆ.–** (1) ಈ ಅಧಿನಿಯಮ ಮತ್ತು ಶಾಸನಗಳ ಉಪಬಂಧಗಳಿಗೊಳಪಟ್ಟು, ವಿಶ್ವವಿದ್ಯಾಲಯವು ತೋಟಗಾರಿಕೆ ಮತ್ತು ಸಂಬಂಧಿತ ವಿಜ್ಞಾನಗಳಲ್ಲಿ ಕಾರ್ಯತಂತ್ರದ, ಮೂಲಭೂತ ಮತ್ತು ಆನ್ವಯಿಕ ಸಂಶೋಧನೆಗಳನ್ನು ಮಾಡತಕ್ಕದ್ದು.

(2) ವಿಶ್ವವಿದ್ಯಾಲಯವು ತನ್ನ ಸಂಶೋಧನಾ ಸಂಸ್ಥೆಯ ಮೂಲಕ ತನ್ನ ಅಧಿಕಾರ ಕ್ಷೇತ್ರ ವ್ಯಾಪ್ತಿಯಲ್ಲಿ ನಡೆಯುವ ತೋಟಗಾರಿಕೆ ಮತ್ತಿತರ ಸಂಬಂಧಪಟ್ಟ ಶಾಖೆಗಳಲ್ಲಿನ ಸಂಶೋಧನಾ ಚಟುವಟಿಕೆಗಳ ಮೇಲೆ ನಿಯಂತ್ರಣವನ್ನು ಹೊಂದಿರುವ ಪ್ರಧಾನ ಏಜೆನ್ಸಿಯಾಗಿರತಕ್ಕದ್ದು.

(3) ವಿಶ್ವವಿದ್ಯಾಲಯವು ತನ್ನ ಅಧಿಕಾರ ಕ್ಷೇತ್ರ ವ್ಯಾಪ್ತಿಯಲ್ಲಿ ಕಾರ್ಯಾಚರಣೆ ಸಂಶೋಧನೆಯೂ ಸೇರಿದಂತೆ ಸಂಶೋಧನೆಗಳನ್ನು ನಡೆಸುವುದಕ್ಕೆ ಬೇರೆ ಬೇರೆ ಕೃಷಿ–ವಾತಾವರಣ ವಲಯಗಳಲ್ಲಿ ಸರ್ಕಾರದ ಸಹಮತಿಯೊಂದಿಗೆ ಪ್ರಾದೇಶಿಕ ವಲಯ ಸಂಶೋಧನಾ ಕೇಂದ್ರಗಳು ಮತ್ತು ಉಪಕೇಂದ್ರಗಳನ್ನು ಸ್ಥಾಪಿಸಬಹುದು.

**34. ವಿಸ್ತರಣಾ ಶಿಕ್ಷಣ.–** (1) ತಾಂತ್ರಿಕ ಮೌಲ್ಯಮಾಪನ ಮತ್ತು ಪರಿಷ್ಕರಣೆಯಾಗುವಂತೆ ನೋಡಿಕೊಳ್ಳಲು ಮತ್ತು ಸಂಶೋಧನೆಗಳಲ್ಲಿ ಕಂಡುಬಂದ ವಿಚಾರಗಳನ್ನು ಆಧರಿಸಿದ ತಂತ್ರಜ್ಞಾನವನ್ನು ತ್ವರಿತ ತೋಟಗಾರಿಕೆ ಬೆಳವಣಿಗೆಗಾಗಿ ರೈತರು ಮತ್ತು ಇತರರು ಅಳವಡಿಸಿಕೊಳ್ಳುವುದಕ್ಕೆ ಅವಕಾಶಕಲ್ಪಿಸಲು ವಿಸ್ತರಣಾ ಶಿಕ್ಷಣ ಕಾರ್ಯಕ್ರಮಗಳನ್ನು ವಿಶ್ವ ವಿದ್ಯಾಲಯದಲ್ಲಿ ಈ ಅಧಿನಿಯಮ ಮತ್ತು ಶಾಸನಗಳಿಗೊಳಪಟ್ಟು ಸ್ಥಾಪಿಸತಕ್ಕದ್ದು. ಈ ವಿಭಾಗವು ವಿವಿಧ ಹಿತಾಸಕ್ತಿದಾರರ ಅನುಕೂಲಕ್ಕಾಗಿ ಪ್ರಾತ್ಯಕ್ಷಿಕೆಗಳನ್ನು ಮತ್ತು ತರಬೇತಿಯನ್ನು ನಡೆಸತಕ್ಕದ್ದು. ಈ ವಿಸ್ತರಣಾ ಕಾರ್ಯವನ್ನು ವಿಶ್ವವಿದ್ಯಾಲಯದ ವಿವಿಧ ಘಟಕಗಳು ಮತ್ತು ಕೇಂದ್ರ ಹಾಗೂ ರಾಜ್ಯದ ಇತರ ಸಮುಚಿತ ಏಜೆಂಟ್‌ಗಳೊಂದಿಗೆ ಸಮನ್ವಯದಿಂದ ಮಾಡತಕ್ಕದ್ದು.

(2) ರಾಜ್ಯದಲ್ಲಿ ವಿಸ್ತರಣಾ ತೋಟಗಾರಿಕೆ ಮಾದರಿಗಳನ್ನು ಅಭಿವೃದ್ಧಿಪಡಿಸುವುದಕ್ಕೆ ವಿಶ್ವವಿದ್ಯಾಲಯವು ಜವಾಬ್ದಾರಿಯಾಗಿರತಕ್ಕದ್ದು.

**35. ಸಂಶೋಧನೆ ಮತ್ತು ವಿಸ್ತರಣಾ ಶಿಕ್ಷಣಗಳ ಸಮ್ಮಿಲನ.–** (1) ವಿಶ್ವವಿದ್ಯಾಲಯದ ಯುಕ್ತ ಅಧಿಕಾರಿಗಳೊಂದಿಗೆ ಸಮಾಲೋಚಿಸಿ, ವಿಶ್ವವಿದ್ಯಾಲಯದ ಬೋಧನೆ, ಸಂಶೋಧನೆ ಮತ್ತು ವಿಸ್ತರಣಾ ಶಿಕ್ಷಣದ ಚಟುವಟಿಕೆಗಳು ಸಂಪೂರ್ಣವಾಗಿ ಬೆರೆತು ಕೆಲಸಮಾಡುವುದಕ್ಕೆ ಅವಶ್ಯವಾಗಬಹುದಾದ ಕ್ರಮಗಳನ್ನು ತೆಗೆದುಕೊಳ್ಳಲು ಕುಲಪತಿಯವರು ಜವಾಬ್ದಾರರಾಗಿರತಕ್ಕದ್ದು.

(2) ಬೋಧಕರ ಕೇಡರ್‌ನಲ್ಲಿರತಕ್ಕ ಪ್ರತಿಯೊಬ್ಬ ಫ್ಯಾಕಲ್ಟಿ ಸದಸ್ಯರು ಬೋಧನೆಯ ಕಾರ್ಯದ ಜೊತೆಗೆ ತಮ್ಮ ಶೇಕಡ ಮೂವತ್ತರಷ್ಟು ಸಮಯವನ್ನು ಸಂಶೋಧನೆ ಮತ್ತು ವಿಸ್ತರಣೆ ಶಿಕ್ಷಣ ಕೈಗೊಳ್ಳಲು ಮೀಸಲಿಡತಕ್ಕದ್ದು. ಹಾಗೆಯೇ ಸಂಶೋಧನೆ ಮತ್ತು ವಿಸ್ತರಣಾ ಶಿಕ್ಷಣದಲ್ಲಿರತಕ್ಕ ಫ್ಯಾಕಲ್ಟಿ ಸದಸ್ಯರು ಸಂದರ್ಭಾನುಸಾರ ಬೋಧನೆ ಅಥವಾ ವಿಸ್ತರಣೆ ಅಥವಾ ಸಂಶೋಧನೆಯ ಕೆಲಸಕ್ಕೆ ತಮ್ಮ ಶೇಕಡಾ ಮೂವತ್ತರಷ್ಟು ಸಮಯವನ್ನು ವಿನಿಯೋಗಿಸತಕ್ಕದ್ದು.

(3) ಕಾಲೇಜಿನಲ್ಲಿರುವ ಎಲ್ಲಾ ಬೋಧನೆ, ಸಂಶೋಧನೆಯ ಮತ್ತು ವಿಸ್ತರಣಾ ಶಿಕ್ಷಣದ ಸಿಬ್ಬಂದಿಯು ಸಂದರ್ಭಾನುಸಾರ ಕಾಲೇಜಿನ ಡೀನ್‌ರವರ ಆಡಳಿತ ನಿಯಂತ್ರಣ ಅಥವಾ ನಿರ್ದೇಶಕರು (ಸಂಶೋಧನೆ) ಮತ್ತು ನಿರ್ದೇಶಕರು (ವಿಸ್ತರಣಾ ಶಿಕ್ಷಣ) ಇವರ ತಾಂತ್ರಿಕ ನಿಯಂತ್ರಣದಲ್ಲಿರತಕ್ಕದ್ದು.

(4) ವಿಶ್ವವಿದ್ಯಾಲಯವು ರಾಜ್ಯದ ಪ್ರಾದೇಶಿಕ ಅವಶ್ಯಕತೆಗಳನ್ನು ದೃಷ್ಟಿಯಲ್ಲಿಟ್ಟುಕೊಂಡು ತನ್ನ ಸಂಶೋಧನೆ ಮತ್ತು ವಿಸ್ತರಣಾ ಶಿಕ್ಷಣ ಕಾರ್ಯಕ್ರಮಗಳನ್ನು ಅಭಿವೃದ್ಧಿಪಡಿಸತಕ್ಕದ್ದು ಮತ್ತು ರಾಜ್ಯ ಸರ್ಕಾರಕ್ಕೆ ಹಾಗೂ ಇತರ ಹಿತಾಸಕ್ತಿದಾರರಿಗೆ ಸೂಕ್ತವಾದ ತಾಂತ್ರಿಕ ಬೆಂಬಲ ಒದಗಿಸತಕ್ಕದ್ದು.

## ಅಧ್ಯಾಯ – VI

## ನಿಧಿಗಳು ಮತ್ತು ಲೆಕ್ಕಪತ್ರಗಳು

**36. ವಿಶ್ವವಿದ್ಯಾಲಯದ ನಿಧಿಗಳು.–** (1) ವಿಶ್ವವಿದ್ಯಾಲಯವು ಒಂದು ಸಾಮಾನ್ಯ ನಿಧಿಯನ್ನು ಹೊಂದಿರತಕ್ಕದ್ದು ಮತ್ತು ಅದಕ್ಕೆ ಈ ಮುಂದಿನವುಗಳು ಜಮೆಯಾಗತಕ್ಕದ್ದು,–

(ಎ) ಶುಲ್ಕಗಳಿಂದ, ದತ್ತಿಗಳಿಂದ ಮತ್ತು ಯಾವುದಾದರೂ ದಾನಗಳು ಇದ್ದರೆ ಅವುಗಳಿಂದ ಬರುವ ಆದಾಯ, ವಿದ್ಯಾರ್ಥಿ ನಿಲಯ, ಪ್ರಯೋಗ ಕೇಂದ್ರಗಳು ಹಾಗೂ ಫಾರ್ಮುಗಳೂ ಸೇರಿದಂತೆ ವಿಶ್ವವಿದ್ಯಾಲಯದ ಸ್ವತ್ತುಗಳಿಂದ ಬರುವ ಆದಾಯ;

(ಬಿ) ಈ ಅಧಿನಿಯಮದ ಉಪಬಂಧಗಳಿಗೆ ಸುಸಂಗತವಾಗಿರುವಂತಹ ಷರತ್ತುಗಳಿಗೆ ಒಳಪಟ್ಟು ಸರ್ಕಾರವು ನೀಡಿದ ವಂತಿಕೆಗಳು ಅಥವಾ ಅನುದಾನಗಳು;

(ಸಿ) ಇತರ ವಂತಿಕೆಗಳು, ಅನುದಾನಗಳು, ದೇಣಿಗೆಗಳು, ಲಾಭಗಳು, ಸಾಲಗಳು ಮತ್ತು ಇತರ ಸ್ವೀಕೃತಿಗಳು.

(2) ವಿಶ್ವವಿದ್ಯಾಲಯವು ಪ್ರತಿಷ್ಠಾನ ನಿಧಿ ಎಂಬ ಹೆಸರಿನ ನಿಧಿಯನ್ನು ಹೊಂದಿರತಕ್ಕದ್ದು. ಇದಕ್ಕೆ ಕೇಂದ್ರ ಸರ್ಕಾರವು ಅಥವಾ ರಾಜ್ಯ ಸರ್ಕಾರವು ಅಥವಾ ಯಾವುದೇ ಅನುಮೋದಿತ ಏಜೆನ್ಸಿಯು ನೀಡುವ ವಂತಿಕೆಗಳು ಮತ್ತು ಅನುದಾನಗಳು ಹಾಗೂ ಮಂಡಳಿಯು ನಿರ್ದಿಷ್ಟಪಡಿಸಬಹುದಾದಂತಹ ಇತರ ಮೊತ್ತಗಳು ಜಮೆಯಾಗತಕ್ಕದ್ದು. ಮಂಡಳಿಯು ಅವಶ್ಯವಿದ್ದಾಗಲೆಲ್ಲ ಅಂತಹ ಮೊಬಲಗನ್ನು ನಿರ್ದಿಷ್ಟಪಡಿಸಬಹುದಾದಂತೆ ಪ್ರತಿಷ್ಠಾನ ನಿಧಿಯಿಂದ ಸಾಮಾನ್ಯ ನಿಧಿಗೆ ನಿಯಮಿಸಬಹುದಾದ ವಿಧಾನದಲ್ಲಿ ವರ್ಗಾಯಿಸಬಹುದು.

(3) ವಿಶ್ವವಿದ್ಯಾಲಯವು, ಸರ್ಕಾರವು ನೀಡಿದ ಯಾವುದೇ ಅನುದಾನಗಳ ಸಂಬಂಧದಲ್ಲಿ ಲೆಕ್ಕಪತ್ರ ತ:ಖ್ತೆಗಳನ್ನು, ವರದಿಗಳನ್ನು ಮತ್ತು ಇತರ ವಿವರಗಳನ್ನು ಸರ್ಕಾರಕ್ಕೆ ನೀಡತಕ್ಕದ್ದು ಹಾಗೂ ಸರ್ಕಾರವು ನಿರ್ದೇಶಿಸಬಹುದಾದಂತಹ ಅವಧಿಯೊಳಗೆ ಮತ್ತು ವಿಧಾನದಲ್ಲಿ ಯಾವುದೇ ಅನುದಾನದ ಬಳಕೆಗೆ ಸಂಬಂಧಿಸಿದಂತೆ ತ:ಖ್ತೆಗಳು, ಲೆಕ್ಕಪತ್ರಗಳು, ವರದಿಗಳು ಹಾಗೂ ಇತರ ವಿವರಗಳನ್ನು ಸಲ್ಲಿಸತಕ್ಕದ್ದು.

(4) ವಿಶ್ವವಿದ್ಯಾಲಯವು ಸರ್ಕಾರದಿಂದ ಅಥವಾ ಯಾವುದೇ ಇತರ ರಾಜ್ಯ ಸರ್ಕಾರಗಳಿಂದ ಅಥವಾ ಕೇಂದ್ರ ಸರ್ಕಾರದಿಂದ ಅಥವಾ ಶಾಸನಾತ್ಮಕ ನಿಕಾಯಗಳಿಂದ ಅಥವಾ ದತ್ತಿಗಳಿಂದ ಅಥವಾ ದಾನಗಳಿಂದ, ವಿಶ್ವವಿದ್ಯಾಲಯವು ಮತ್ತು ದಾನಿ ಅಥವಾ ಅನುದಾನದಾತರ ನಡುವೆ ಮಾಡಿಕೊಂಡ ಒಪ್ಪಂದಗಳಲ್ಲಿಯ ಷರತ್ತುಗಳಿಗೆ ಒಳಪಟ್ಟು ತನ್ನ ಧ್ಯೇಯೋದ್ದೇಶಗಳ ಸಾಧನೆಗಾಗಿ ಅನುದಾನ ಸ್ವೀಕರಿಸಲು ಸಕ್ಷಮವಾಗಿರತಕ್ಕದ್ದು.

**37. ನಿಧಿಯ ಆಡಳಿತ.–** ವಿಶ್ವವಿದ್ಯಾಲಯದ ಸಾಮಾನ್ಯ ನಿಧಿ, ಪ್ರತಿಷ್ಠಾನ ನಿಧಿ ಮತ್ತು ಇತರ ನಿಧಿಗಳನ್ನು ಶಾಸನಗಳಲ್ಲಿ ಹೇಳಿದ ಉಪಬಂಧಗಳಿಗೆ ಅನುಗುಣವಾಗಿ ನಿರ್ವಹಿಸತಕ್ಕದ್ದು.

**38. ಲೆಕ್ಕಪರಿಶೋಧನೆಗೆ ಆದೇಶಿಸಲು ಸರ್ಕಾರದ ಅಧಿಕಾರ.–** ಸರ್ಕಾರವು, ಯಾವುದೇ ಸಮಯದಲ್ಲಿ ವಿಶ್ವವಿದ್ಯಾಲಯದ ಲೆಕ್ಕಪತ್ರಗಳ ಪರಿಶೋಧನೆಯನ್ನು ತಾನು ನಿರ್ದೇಶಿಸಬಹುದಾದಂತಹ ಲೆಕ್ಕಪರಿಶೋಧಕರಿಂದ ಮಾಡಿಸಬೇಕೆಂದು ಆದೇಶಿಸಲು ಅಧಿಕಾರವನ್ನು ಹೊಂದಿರತಕ್ಕದ್ದು.

**39. ಹಣಕಾಸಿನ ಅಂದಾಜುಗಳು.–** (1) ಕುಲಪತಿಯು ಮುಂಬರುವ ವರ್ಷಕ್ಕಾಗಿ ವಿಶ್ವವಿದ್ಯಾಲಯದ ಹಣಕಾಸಿನ ಅಂದಾಜುಗಳನ್ನು ತಯಾರಿಸುವಂತೆ ಮಾಡತಕ್ಕದ್ದು ಮತ್ತು ಅನುಮೋದನೆಗಾಗಿ ಅದನ್ನು ಮಂಡಳಿಯ ಮುಂದೆ ಮಂಡಿಸತಕ್ಕದ್ದು.

(2) ಮಂಡಳಿಯು, ತಾನು ಸೂಕ್ತವೆಂದು ಭಾವಿಸಬಹುದಾದಂತಹ ಮಾರ್ಪಾಡುಗಳಿಗೆ ಒಳಪಟ್ಟು ಹಣಕಾಸಿನ ಅಂದಾಜುಗಳನ್ನು ಅನುಮೋದಿಸಬಹುದು ಮತ್ತು ಮಂಡಳಿಯು ಅನುಮೋದಿಸಿದ ಹಣಕಾಸಿನ ಅಂದಾಜಿಗೆ ಅನುಸಾರವಾಗಿ ಅಲ್ಲದೆ ಯಾವ ವೆಚ್ಚವನ್ನು ಮಾಡತಕ್ಕದ್ದಲ್ಲ.

**40. ಲೆಕ್ಕಪತ್ರಗಳು ಮತ್ತು ಲೆಕ್ಕಪರಿಶೋಧನೆ.–** (1) ಲೆಕ್ಕಪತ್ರ ನಿರ್ವಹಣೆಯು ಜೋಡಿ ದಾಖಲಾತಿ ಪದ್ಧತಿಯನ್ನು ಆಧರಿಸಿದ ವಿಶ್ವವಿದ್ಯಾಲಯದ ವಾರ್ಷಿಕ ಲೆಕ್ಕಪತ್ರಗಳನ್ನು ಕುಲಪತಿಯವರ ನಿರ್ದೇಶನದ ಮೇರೆಗೆ ಲೆಕ್ಕ ನಿಯಂತ್ರಕರು ತಯಾರಿಸತಕ್ಕದ್ದು ಮತ್ತು ವಿಶ್ವವಿದ್ಯಾಲಯಕ್ಕೆ ಯಾವುದೇ ಮೂಲಗಳಿಂದ ಪ್ರಾಪ್ತವಾಗುವ ಅಥವಾ ಅದು ಸ್ವೀಕರಿಸುವ ಎಲ್ಲಾ ಮೊಬಲಗುಗಳನ್ನು ಹಾಗೂ ವಿಶ್ವವಿದ್ಯಾಲಯವು ವಿತರಣೆ ಮಾಡುವ ಅಥವಾ ಸಂದಾಯ ಮಾಡುವ ಎಲ್ಲಾ ಮೊಬಲಗುಗಳನ್ನು ಈ ಲೆಕ್ಕಪತ್ರಗಳಲ್ಲಿ ದಾಖಲಿಸತಕ್ಕದ್ದು.

(2) ವಾರ್ಷಿಕ ಲೆಕ್ಕಪತ್ರ ಮತ್ತು ಜಮಾ ಖರ್ಚು ಪಟ್ಟಿಯನ್ನು ಕುಲಪತಿಯವರು ರಾಜ್ಯ ಸರ್ಕಾರಕ್ಕೆ ಸಲ್ಲಿಸತಕ್ಕದ್ದು, ರಾಜ್ಯ ಸರ್ಕಾರವು ಈ ಸಂಬಂಧದಲ್ಲಿ ತಾನು ನೇಮಿಸಬಹುದಾದಂತಹ ವ್ಯಕ್ತಿಗಳು ಲೆಕ್ಕ ಪರಿಶೋಧನೆಯನ್ನು ನಡೆಸುವಂತೆ ಮಾಡತಕ್ಕದ್ದು. ಲೆಕ್ಕಪತ್ರಗಳನ್ನು ಪರಿಶೋಧಿಸಿದ ಮೇಲೆ ಅವುಗಳನ್ನು ಮುದ್ರಿಸತಕ್ಕದ್ದು ಹಾಗೂ ಕುಲಪತಿಯವರು ಅವುಗಳ ಪ್ರತಿಗಳನ್ನು ಲೆಕ್ಕಪರಿಶೋಧನೆಯ ವರದಿಯೊಡನೆ ಮಂಡಲಿಗೆ ಮತ್ತು ಕುಲಾಧಿಪತಿಯವರಿಗೆ ಮಂಡಿಸತಕ್ಕದ್ದು.

(3) ಮಂಡಳಿಯು, ಲೆಕ್ಕಪತ್ರಗಳ ಪ್ರತಿಯನ್ನು ಹಾಗೂ ವರದಿಯನ್ನು ಲೆಕ್ಕಪರಿಶೋಧನೆಯ ವರದಿಯ ಮೇಲೆ ವಿಶ್ವವಿದ್ಯಾಲಯವು ಕೈಗೊಂಡ ಕ್ರಮದ ಬಗ್ಗೆ ಒಂದು ಹೇಳಿಕೆಯೊಡನೆ ರಾಜ್ಯ ಸರ್ಕಾರಕ್ಕೆ ಸಲ್ಲಿಸತಕ್ಕದ್ದು, ಹಾಗೂ ರಾಜ್ಯ ಸರ್ಕಾರವು ಅವನ್ನು ರಾಜ್ಯ ವಿಧಾನಮಂಡಲದ ಉಭಯ ಸದನಗಳ ಮುಂದೆ ಮಂಡಿಸುವಂತೆ ಮಾಡತಕ್ಕದ್ದು.

(4) ವಿಶ್ವವಿದ್ಯಾಲಯವು ಯೋಜನೆಗಳ ಸಂಬಂಧದಲ್ಲಿ ಮತ್ತು ಭಾರತದ ಕೃಷಿ ಸಂಶೋಧನಾ ಪರಿಷತ್ತು, ಭಾರತ ಸರ್ಕಾರ ಮತ್ತು ಇತರ ಯೋಜನೆಗಳು/ಚಾರ್ಟೆಡ್ ಆಕೌಂಟೆಟ್ ಪ್ರಮಾಣ ಪತ್ರ ನೀಡಿದ ಸಂಸ್ಥೆಗಳು ಪ್ರಾಯೋಜಿಸಿದ ಕೃಷಿ ವಿಜ್ಞಾನ ಕೇಂದ್ರಗಳು/ತೋಟಗಾರಿಕೆ ವಿಜ್ಞಾನ ಕೇಂದ್ರಗಳ ಸಂಬಂಧದಲ್ಲಿ ಲೆಕ್ಕಪರಿಶೋಧನೆ ಬಳಕೆ ಪ್ರಮಾಣ ಪತ್ರಗಳನ್ನು ನೀಡುವಂತೆ ಮಾಡತಕ್ಕದ್ದು.

**41. ಭವಿಷ್ಯ ನಿಧಿ, ನಿವೃತ್ತಿ ವೇತನ ಮತ್ತು ವಿಮೆ.–** (1) ಸರ್ಕಾರದ ಪೂರ್ವಾನುಮೋದನೆಯೊಡನೆ ವಿಶ್ವವಿದ್ಯಾಲಯವು ತನ್ನ ಅಧಿಕಾರಿಗಳು, ಪ್ರಾಧ್ಯಾಪಕರು, ಲಿಪಿಕ ಸಿಬ್ಬಂದಿ ಮತ್ತು ಇತರ ನೌಕರರ ಪ್ರಯೋಜನಕ್ಕಾಗಿ ನಿಯಮಿಸಬಹುದಾದಂತಹ ವಿಧಾನಗಳು ಮತ್ತು ಷರತ್ತುಗಳಿಗೆ ಒಳಪಟ್ಟು ತಾನು ಸೂಕ್ತವೆಂದು ಭಾವಿಸಬಹುದಾದಂತಹ ನಿವೃತ್ತಿ ವೇತನ, ಉಪದಾನ, ವಿಮೆ ಅಥವಾ ಭವಿಷ್ಯ ನಿಧಿ, ವಂತಿಗೆ, ನಿವೃತ್ತಿ ವೇತನ ನಿಧಿ ಮತ್ತು ಇನ್ನಾವುದೇ ಅಂತಹ ನಿಧಿಗಳನ್ನು ರಚಿಸತಕ್ಕದ್ದು.

(2) ಸರ್ಕಾರವು, ಭವಿಷ್ಯ ನಿಧಿ ಅಧಿನಿಯಮ 1925 (1925ರ ಕೇಂದ್ರ ಅಧಿನಿಯಮ 19) ವಿಶ್ವವಿದ್ಯಾಲಯವು ಹಾಗೆ ರಚಿಸಿದ ಭವಿಷ್ಯ ನಿಧಿ ಅಥವಾ ನಿವೃತ್ತಿ ವೇತನ ನಿಧಿಗಳಿಗೆ ಅವು ಸರ್ಕಾರದ ಭವಿಷ್ಯ ನಿಧಿಗಳು ಆಗಿದ್ದರೆ ಹೇಗೋ ಹಾಗೆ ಅನ್ವಯಿಸತಕ್ಕದ್ದೆಂದು ಘೋಷಿಸಬಹುದು:

ಪರಂತು, ವಿಶ್ವವಿದ್ಯಾಲಯವು ಹಣಕಾಸು ಸಮಿತಿ ಮತ್ತು ಮಂಡಳಿಯೊಡನೆ ಸಮಾಲೋಚಿಸಿ ತಾನು ನಿರ್ಧರಿಸಬಹುದಾದಂತಹ ವಿಧಾನದಲ್ಲಿ ಭವಿಷ್ಯ ನಿಧಿಯ ಮೊಬಲಗನ್ನು ತೊಡಗಿಸಲು ಅಧಿಕಾರವನ್ನು ಹೊಂದಿರತಕ್ಕದ್ದು.

**42. ಸರ್ಕಾರದ ಅನುದಾನಗಳು.–** (1) ರಾಜ್ಯ ಸರ್ಕಾರವು, ಪ್ರತಿ ವರ್ಷವೂ ವಿಶ್ವವಿದ್ಯಾಲಯಕ್ಕೆ ಲುಪ್ತವಾಗದಂತಹ ಇಡಿಗಂಟು ಅನುದಾನವನ್ನು ನೀಡತಕ್ಕದ್ದು, ಎಂದರೆ :–

(i) ವಿಶ್ವವಿದ್ಯಾಲಯದ ಸೂಕ್ತ ಕಾರ್ಯನಿರ್ವಹಣೆಗಾಗಿ ವಿಶ್ವವಿದ್ಯಾಲಯದ ಸಿಬ್ಬಂದಿಯ ವೇತನ, ಭತ್ಯೆಗಳು, ಸಾದಿಲ್ವಾರು, ಇತರ ಸರಬರಾಜು ಮತ್ತು ಸೇವೆಗಳ ಮೇಲಿನ ಅಂದಾಜು ವೆಚ್ಚಕ್ಕಿಂತ ಕಡಿಮೆಯಲ್ಲದ ಒಂದು ಅನುದಾನ;

(ii) ರಾಜ್ಯ ಸರ್ಕಾರವು ವಿಶ್ವವಿದ್ಯಾಲಯದ ಸೂಕ್ತ ಕಾರ್ಯನಿರ್ವಹಣೆಗಾಗಿ ಅವಶ್ಯವೆಂದು ಭಾವಿಸಬಹುದಾದಂತಹ ಹೆಚ್ಚುವರಿ ಬಾಬುಗಳ ಆವರ್ತಕ ಮತ್ತು ಅನಾವರ್ತಕ ವೆಚ್ಚಗಳನ್ನು ಭರಿಸುವುದಕ್ಕೆ ಒಂದು ಅನುದಾನ.

(2) ರಾಜ್ಯ ಸರ್ಕಾರವು, ಪಂಚವಾರ್ಷಿಕ ಯೋಜನೆಯಲ್ಲಿ ಸೇರಿಸಿದ ಮತ್ತು ವಿಶ್ವವಿದ್ಯಾಲಯವು ಜಾರಿಗೊಳಿಸಲೆಂದು ವರ್ಗಾಯಿಸಿದ ಯೋಜನೆಗಳ ಸಂಬಂಧದಲ್ಲಿ ವಿಶ್ವವಿದ್ಯಾಲಯಕ್ಕೆ ಕೇಂದ್ರ ಸರ್ಕಾರ ಮತ್ತು ಅಂತಹ ಯೋಜನೆಗಳನ್ನು ಪ್ರಾಯೋಜಿಸಿದ ಇತರ ಏಜೆನ್ಸಿಗಳಿಂದ ನಿರೀಕ್ಷಿತ ಸಹಾಯವನ್ನು ಕಳೆದ ತರುವಾಯ ವಾರ್ಷಿಕ ಯೋಜನೆಯಲ್ಲಿ ತೋರಿಸಿದ ನಿವ್ವಳ ವೆಚ್ಚದ ಏರ್ಪಾಡಿಗೆ ಸಮನಾದ ಮೊತ್ತದ ಲುಪ್ತವಾಗದಂತಹ ಇಡಿಗಂಟು ಅನುದಾನವನ್ನು ಸಹ ನೀಡತಕ್ಕದ್ದು.

(3) ರಾಜ್ಯ ಸರ್ಕಾರವು ಯಾವುದೇ ಅನುದಾನವನ್ನು ನೀಡುವ ಮೊದಲು ಅದು ಅಗತ್ಯಪಡಿಸಬಹುದಾದಂತಹ ಅಂಕಿಅಂಶಗಳು, ಲೆಕ್ಕಪತ್ರಗಳು, ವರದಿಗಳು ಹಾಗೂ ಇತರ ವಿವರಗಳನ್ನು ರಾಜ್ಯ ಸರ್ಕಾರಕ್ಕೆ ವಿಶ್ವವಿದ್ಯಾಲಯವು ಸಲ್ಲಿಸತಕ್ಕದ್ದು ಮತ್ತು ವಿಶ್ವವಿದ್ಯಾಲಯವು ರಾಜ್ಯ ಸರ್ಕಾರವು ನಿರ್ದೇಶಿಸಬಹುದಾದಂತಹ ಅವಧಿಯೊಳಗೆ ಹಾಗೂ ಅಂತಹ ವಿಧಾನದಲ್ಲಿ ಕ್ರಮವನ್ನು ತೆಗೆದುಕೊಳ್ಳತಕ್ಕದ್ದು ಮತ್ತು ಯಾವುದೇ ಅನುದಾನವನ್ನು ಬಳಸಿಕೊಂಡಿರುವುದಕ್ಕೆ ಸಂಬಂಧಪಟ್ಟ ಅಂಕಿಅಂಶಗಳು, ಲೆಕ್ಕಪತ್ರಗಳು, ವರದಿಗಳು ಹಾಗೂ ಇತರ ವಿವರಗಳನ್ನು ಒದಗಿಸತಕ್ಕದ್ದು.

(4) ವಿಶ್ವವಿದ್ಯಾಲಯವು ಸರ್ಕಾರದಿಂದ ಅಥವಾ ಯಾವುದೇ ಇತರ ರಾಜ್ಯ ಸರ್ಕಾರಗಳಿಂದ ಅಥವಾ ಕೇಂದ್ರ ಸರ್ಕಾರದಿಂದ ಅಥವಾ ಶಾಸನಾತ್ಮಕ ನಿಕಾಯಗಳಿಂದ ಅಥವಾ ದತ್ತಿಗಳಿಂದ ಅಥವಾ ದಾನಗಳಿಂದ, ವಿಶ್ವವಿದ್ಯಾಲಯವು ಮತ್ತು ದಾನಿ ಅಥವಾ ಅನುದಾನದಾತರ ನಡುವೆ ಮಾಡಿಕೊಂಡ ಒಪ್ಪಂದಗಳಲ್ಲಿಯ ಷರತ್ತುಗಳಿಗೆ ಒಳಪಟ್ಟು ತನ್ನ ಧ್ಯೇಯೋದ್ದೇಶಗಳ ಸಾಧನೆಗಾಗಿ ಅನುದಾನ ಸ್ವೀಕರಿಸಲು ಸಕ್ಷಮವಾಗಿರತಕ್ಕದ್ದು.

**43. ಹಣಕಾಸು ಸಮಿತಿ.–** (1) ಮಂಡಳಿಯು ಈ ಮುಂದಿನ ಸದಸ್ಯರುಗಳನ್ನೊಳಗೊಂಡ ಒಂದು ಹಣಕಾಸು ಸಮಿತಿಯನ್ನು ರಚಿಸತಕ್ಕದ್ದು ಎಂದರೆ :–

(i) ಕುಲಪತಿಯವರು – ಅಧ್ಯಕ್ಷರಾಗಿರತಕ್ಕದ್ದು;

(ii) ಸರ್ಕಾರದ ಪ್ರಧಾನ ಕಾರ್ಯದರ್ಶಿ, ಹಣಕಾಸು ಇಲಾಖೆ ಅಥವಾ ಉಪ ಕಾರ್ಯದರ್ಶಿ ದರ್ಜೆಗಿಂತ ಕಡಿಮೆ ದರ್ಜೆಯವರಲ್ಲದ ಅವರ ನಾಮನಿರ್ದೇಶಿತರು;

(iii) ಸರ್ಕಾರದ ಪ್ರಧಾನ ಕಾರ್ಯದರ್ಶಿ ಅಥವಾ ಕಾರ್ಯದರ್ಶಿ, ತೋಟಗಾರಿಕೆ ಇಲಾಖೆ ಅಥವಾ ಉಪ ಕಾರ್ಯದರ್ಶಿ ದರ್ಜೆಗಿಂತ ಕಡಿಮೆ ದರ್ಜೆಯವರಲ್ಲದ ಅವರ ನಾಮನಿರ್ದೇಶಿತರು;

(iv) ಕುಲಪತಿಯವರು ನಾಮನಿರ್ದೇಶಿಸಿದ ವ್ಯವಸ್ಥಾಪನಾ ಮಂಡಳಿಯ ಒಬ್ಬ ಸದಸ್ಯರು;

(v) ಕುಲಸಚಿವರು;

(vi) ಲೆಕ್ಕ ನಿಯಂತ್ರಕರು – ಸದಸ್ಯ ಕಾರ್ಯದರ್ಶಿ.

(2) ಹಣಕಾಸು ಸಮಿತಿಯು ಈ ಮುಂದಿನ ಪ್ರಕಾರ್ಯಗಳನ್ನು ಹೊಂದಿರತಕ್ಕದ್ದು, ಎಂದರೆ:–

(i) ವಿಶ್ವವಿದ್ಯಾಲಯದ ವಾರ್ಷಿಕ ಲೆಕ್ಕಪತ್ರಗಳು ಮತ್ತು ಆಯವ್ಯಯ ಅಂದಾಜುಗಳನ್ನು ಪರೀಕ್ಷಿಸುವುದು ಮತ್ತು ಅದರ ಮೇಲೆ ಮಂಡಳಿಗೆ ಸಲಹೆಗಳನ್ನು ನೀಡುವುದು;

(ii) ವಿಶ್ವವಿದ್ಯಾಲಯದ ಹಣಕಾಸಿನ ಪರಿಸ್ಥಿತಿಯನ್ನು ಕಾಲಕಾಲಕ್ಕೆ ಪರಿವೀಕ್ಷಿಸುವುದು;

(iii) ವಿಶ್ವವಿದ್ಯಾಲಯದ ಹಣಕಾಸಿಗೆ ಸಂಬಂಧಿಸಿದ ಎಲ್ಲ ವಿಷಯಗಳ ಮೇಲೆ ಮಂಡಳಿಗೆ ಶಿಫಾರಸ್ಸುಗಳನ್ನು ಮಾಡುವುದು;

(iv) ಮಂಡಳಿಗೆ ಕಟ್ಟುನಿಟ್ಟಾದ ಆರ್ಥಿಕ ಮಿತವ್ಯಯವನ್ನು ಅನುಸರಿಸಲು ಕಠಿಣ ಕ್ರಮಗಳನ್ನು ಅಳವಡಿಸಿಕೊಳ್ಳಲು ಶಿಫಾರಸ್ಸುಗಳನ್ನು ಮಾಡುವುದು ಮತ್ತು ಅನಗತ್ಯ ವೆಚ್ಚಗಳನ್ನು ಕಡಿತಗೊಳಿಸಲು ಸಲಹೆಗಳನ್ನು ನೀಡುವುದು;

(v) ವಿಶ್ವವಿದ್ಯಾಲಯದ ಹಣ ಬಲವನ್ನು ಉತ್ತಮಗೊಳಿಸಲು ಸಂಶೋಧನೆ ಮತ್ತು ಬೋಧನೆಗಳೆರಡರಲ್ಲೂ ವೆಚ್ಚ ವಸೂಲಿ ವಿಧಾನಗಳ ಬಗ್ಗೆ ಮಂಡಳಿಗೆ ಸೂಕ್ತ ಶಿಫಾರಸ್ಸುಗಳನ್ನು ಮಾಡುವುದು.

## ಅಧ್ಯಾಯ – VII

## ಕಾಲೇಜುಗಳ ಸಂಯೋಜನೆ ಮತ್ತು ಸಂಸ್ಥೆಗಳಿಗೆ ಮನ್ನಣೆ

**44. ಕಾಲೇಜುಗಳ ಸಂಯೋಜನೆ.–** (1) ವಿಶ್ವವಿದ್ಯಾಲಯದ ಪ್ರದೇಶದಲ್ಲಿರುವ ಕಾಲೇಜುಗಳನ್ನು ಈ ಪ್ರಕರಣದಲ್ಲಿ ನಿರ್ದಿಷ್ಟಪಡಿಸಿದ ಷರತ್ತುಗಳನ್ನು ಪೂರೈಸಿದ ತರುವಾಯ ರಾಜ್ಯ ಸರ್ಕಾರವು ಮಾಡಿದ ಶಿಫಾರಸ್ಸುಗಳ ಮೇಲೆ ವಿಶ್ವವಿದ್ಯಾಲಯದ ಸಂಯೋಜಿತ ಕಾಲೇಜುಗಳಾಗಿ ವಿಶ್ವವಿದ್ಯಾಲಯಕ್ಕೆ ಸಂಯೋಜಿಸತಕ್ಕದ್ದು.

(2) ಕುಲಸಚಿವರು, ಹೊಸ ಕಾಲೇಜುಗಳ ಸಂಯೋಜನೆಯ ಬಗ್ಗೆ, ಅಸ್ತಿತ್ವದಲ್ಲಿರುವ ಸಂಯೋಜಿತ ಕಾಲೇಜುಗಳಲ್ಲಿ ಹೊಸ ವ್ಯಾಸಂಗ ಕ್ರಮಗಳ ಬಗ್ಗೆ, ಸಂಯೋಜಿತ ಕಾಲೇಜುಗಳಲ್ಲಿ ಹೊಸ ವಿಷಯಗಳು ಮತ್ತು ಮಂಜೂರಾದ ಪ್ರವೇಶ ಅವಕಾಶದಲ್ಲಿನ ಬದಲಾವಣೆಯ ಬಗ್ಗೆ ಅರ್ಜಿಗಳನ್ನು ಆಹ್ವಾನಿಸಿ, ಅರ್ಜಿಗಳ ಸ್ವೀಕೃತಿಗೆ ಕೊನೆಯ ದಿನಾಂಕವನ್ನು ನಿಗದಿಪಡಿಸಿ, ಒಂದು ಇಂಗ್ಲಿಷ್ ವೃತ್ತ ಪತ್ರಿಕೆ ಮತ್ತು ಒಂದು ಕನ್ನಡ ವೃತ್ತ ಪತ್ರಿಕೆ ಹೀಗೆ ಕಡೆಯ ಪಕ್ಷ ಎರಡು ಪ್ರಮುಖ ವೃತ್ತ ಪತ್ರಿಕೆಗಳಲ್ಲಿ ಅಧಿಸೂಚಿಸತಕ್ಕದ್ದು. ಈ ಜಾಹಿರಾತು, ವಿಶ್ವವಿದ್ಯಾಲಯವು ಅಗತ್ಯ ಪಡಿಸಬಹುದಾದಂತಹ ಇತರ ವಿವರಗಳನ್ನು ಒಳಗೊಂಡಿರತಕ್ಕದ್ದು ಮತ್ತು ಕಾಲೇಜುಗಳು ಭಾರತದ ಕೃಷಿ ಸಂಶೋಧನಾ ಪರಿಷತ್ತು ಅಥವಾ ಅಂತಹ ಇತರ ಪ್ರಾಧಿಕಾರಗಳ ಅನುಮೋದನೆ ಅಥವಾ ಮನ್ನಣೆಯನ್ನು ಪಡೆಯಬೇಕೆಂಬುದನ್ನು ಅಗತ್ಯಪಡಿಸಿದಲ್ಲಿ, ಆ ಬಗ್ಗೆ ನಿರ್ದಿಷ್ಟ ಸೂಚನೆ ನೀಡತಕ್ಕದು ಮತ್ತು ಸಂಯೋಜನೆಗಾಗಿ ಸಲ್ಲಿಸಬೇಕಾದ ಶುಲ್ಕದ ಮೊಬಲಗನ್ನು ಸಹ ನಿರ್ದಿಷ್ಟಪಡಿಸತಕ್ಕದ್ದು.

(3) ವಿಶ್ವವಿದ್ಯಾಲಯಕ್ಕೆ ಸಂಯೋಜನೆಗಾಗಿ ಅರ್ಜಿಸಲ್ಲಿಸುವ ಕಾಲೇಜು, ಈ ಮುಂದಿನವುಗಳಿಗೆ ಸಂಬಂಧಪಟ್ಟಂತೆ ಮಾಹಿತಿಯನ್ನು ಒದಗಿಸಿ ಜಾಹಿರಾತಿನಲ್ಲಿ ನಿಗದಿಪಡಿಸಿದ ಕಾಲಮಿತಿಯೊಳಗೆ ಅರ್ಜಿಯನ್ನು ಕುಲಸಚಿವರಿಗೆ ಕಳುಹಿಸತಕ್ಕದ್ದು, ಎಂದರೆ:–

(i) ಆ ಕಾಲೇಜು ಒದಗಿಸಲು ಉದ್ದೇಶಿಸಿದ ಶಿಕ್ಷಣದ ಮಾದರಿಯನ್ನು ನೆರೆಹೊರೆಯಲ್ಲಿರುವ ಇತರ ಕಾಲೇಜುಗಳು ಅದೇ ಮಾದರಿಯ ಶಿಕ್ಷಣಕ್ಕೆ ಮಾಡಿರುವ ಪ್ರಸ್ತುತ ಏರ್ಪಾಟನ್ನು ಮತ್ತು ಕಾಲೇಜನ್ನು ಯಾವ ಸ್ಥಳದಲ್ಲಿ ಸ್ಥಾಪಿಸಬೇಕಾಗಿದೆಯೋ ಆ ಸ್ಥಳದ ಸೂಕ್ತತೆಯನ್ನೂ ಗಮನದಲ್ಲಿಟ್ಟುಕೊಂಡು, ಆ ಕಾಲೇಜು ಸ್ಥಳೀಯ ಅವಶ್ಯಕತೆಯನ್ನು ಪೂರೈಸುತ್ತದೆ;

(ii) ಅದು ಕ್ರಮಬದ್ಧವಾಗಿ ರಚಿಸಲಾದ ಆಡಳಿತ ಮಂಡಳಿಯ ಆಡಳಿತ ನಿರ್ವಹಣೆಗೆ ಒಳಪಟ್ಟಿದೆ;

(iii) ಬೋಧಕ ಸಿಬ್ಬಂದಿಯ ಸಂಖ್ಯೆ ಮತ್ತು ಅರ್ಹತೆಗಳು ಮತ್ತು ಅವರ ಪದಾವಧಿಯನ್ನು ನಿಯಂತ್ರಿಸುವ ಷರತ್ತುಗಳು ಆ ಕಾಲೇಜಿನಲ್ಲಿ ಕೈಗೊಳ್ಳಬೇಕಾದ ಶಿಕ್ಷಣ, ಬೋಧನೆ ಅಥವಾ ತರಬೇತಿಗಳ ವ್ಯಾಸಂಗ ಕ್ರಮಗಳಿಗೆ ತಕ್ಕ ಏರ್ಪಾಟನ್ನು ಮಾಡುವಂಥದ್ದಾಗಿದೆ;

(iv) ಕಾಲೇಜನ್ನು ನಡೆಸುವಂಥ ಕಟ್ಟಡಗಳು ಸೂಕ್ತವಾಗಿವೆ ಮತ್ತು ತಂದೆ ತಾಯಿಗಳ ಅಥವಾ ಪಾಲಕರ ಜೊತೆಯಲ್ಲಿ ವಾಸವಾಗಿರದೆ ಇರುವ ವಿದ್ಯಾರ್ಥಿಗಳಿಗಾಗಿ ಆ ಕಾಲೇಜಿನಲ್ಲಿ ಅಥವಾ ಆ ಕಾಲೇಜು ಅನುಮೋದಿಸಿದ ವಸತಿಗಳಲ್ಲಿ ನಿವಾಸಕ್ಕಾಗಿ ಹಾಗೂ ಮೇಲ್ವಿಚಾರಣೆ ಮತ್ತು ಕ್ಷೇಮಾಭಿವೃದ್ಧಿಗಾಗಿ, ಶಾಸನಗಳು ಮತ್ತು ವಿನಿಯಮಗಳಿಗೆ ಅನುಗುಣವಾಗಿ ಏರ್ಪಾಟು ಮಾಡಲಾಗುವುದು;

(v) ಗ್ರಂಥಾಲಯಕ್ಕೆ ಹಾಗೂ ಇತರ ಸೇವಾ ಕೇಂದ್ರಗಳಿಗೆ ಸೂಕ್ತ ವ್ಯವಸ್ಥೆ ಮಾಡಲಾಗಿದೆ;

(vi) ಪ್ರಾಯೋಗಿಕ ವಿಜ್ಞಾನದ ಯಾವುದೇ ಶಾಖೆಯಲ್ಲಿ ಸಂಯೋಜನೆಯನ್ನು ಕೋರಿರುವಲ್ಲಿ, ಶಾಸನಗಳು ಮತ್ತು ವಿನಿಯಮಗಳಿಗೆ ಅನುಗುಣವಾಗಿ ಆ ವಿಜ್ಞಾನದ ಶಾಖೆಯಲ್ಲಿ ಶಿಕ್ಷಣ ಕೊಡುವುದಕ್ಕಾಗಿ ಸರಿಯಾದ ರೀತಿಯಲ್ಲಿ ಸಜ್ಜುಗೊಳಿಸಿದ ಪ್ರಯೋಗಶಾಲೆ ಅಥವಾ ವಸ್ತು ಸಂಗ್ರಹಾಲಯ, ಪ್ರಯೋಗಿಕ ಕ್ಷೇತ್ರಗಳ ವ್ಯವಸ್ಥೆಗಳನ್ನು ನಿರ್ದಿಷ್ಟಪಡಿಸಿದ ಅವಧಿಯೊಳಗೆ ಮಾಡಲಾಗಿದೆ ಅಥವಾ ಮಾಡಲಾಗುವುದು;

(vii) ಸನ್ನಿವೇಶಗಳಲ್ಲಿ ಅವಕಾಶವಿರುವಷ್ಟರ ಮಟ್ಟಿಗೆ ಕಾಲೇಜಿನ ಪರಿಮಿತಿಯಲ್ಲಿ ಅಥವಾ ಅದರ ಹತ್ತಿರ ಅಥವಾ ವಿದ್ಯಾರ್ಥಿಗಳ ನಿವಾಸಕ್ಕಾಗಿ ಒದಗಿಸಿರುವ ಸ್ಥಳದಲ್ಲಿ ಪ್ರಾಂಶುಪಾಲರ ಮತ್ತು ಬೋಧಕ ಸಿಬ್ಬಂದಿಯ ಸದಸ್ಯರ ವಸತಿಗಾಗಿ ಸೂಕ್ತ ಏರ್ಪಾಟು ಮಾಡಲಾಗುವುದು;

(viii) ಕಾಲೇಜಿನ ನಿರಂತರ ನಿರ್ವಹಣೆ ಮತ್ತು ದಕ್ಷ ಕಾರ್ಯ ನಿರ್ವಹಣೆಗಾಗಿ ತಕ್ಕ ಏರ್ಪಾಟು ಮಾಡುವಷ್ಟು ಕಾಲೇಜಿನ ಹಣಕಾಸು ಸಂಪನ್ಮೂಲಗಳಿವೆ; ಮತ್ತು

(ix) ವಿದ್ಯಾರ್ಥಿಗಳು ಸಂದಾಯ ಮಾಡಬೇಕಾದ ಫೀಜು ಏನಾದರೂ ಇದ್ದರೆ ಅದನ್ನು ನಿಗದಿಮಾಡುವ ನಿಯಮಗಳನ್ನು ರಚಿಸಲಾಗಿದೆ.

(4) ಹೊಸ ಕಾಲೇಜುಗಳಿಗೆ ಸಂಯೋಜನೆಯ ಅರ್ಜಿಗಳನ್ನು ವ್ಯಕ್ತಿಗಳಿಂದ ಅಂಗೀಕರಿಸತಕ್ಕದ್ದಲ್ಲ, ರಾಜ್ಯ ಸರ್ಕಾರದ ನೆರವು ಇಲ್ಲದೆಯೇ ಕಾಲೇಜುಗಳನ್ನು ನಡೆಸಲು ಸಾಧ್ಯವಾಗುವ ಹಣಕಾಸು ಚೈತನ್ಯ ಹೊಂದಿರುವ, ನೋಂದಾಯಿತ ಸಂಘ ಅಥವಾ ನೋಂದಾಯಿತ ಸಾರ್ವಜನಿಕ ಟ್ರಸ್ಟ್‌ಗಳಿಂದ ಮಾತ್ರವೇ ಅಂಗೀಕರಿಸತಕ್ಕದ್ದು.

(5) ಅರ್ಜಿಯ ಜೊತೆಗೆ, ಕಾಲೇಜನ್ನು ಸಂಯೋಜಿಸಿದ ನಂತರ ರಾಜ್ಯ ಸರ್ಕಾರ ಮತ್ತು ವಿಶ್ವವಿದ್ಯಾಲಯದ ಪೂರ್ವಾನುಮೋದನೆ ಇಲ್ಲದೆ ವ್ಯವಸ್ಥಾಪನೆಯನ್ನು ವರ್ಗಾವಣೆ ಮಾಡುವುದಿಲ್ಲ ಅಥವಾ ಕಾಲೇಜಿನ ಹೆಸರು ಮತ್ತು ಅಭಿನಾಮವನ್ನು ಬದಲಾವಣೆ ಮಾಡುವುದಿಲ್ಲವೆಂಬ ಒಂದು ಮುಚ್ಚಳಿಕೆಯು ಇರತಕ್ಕದ್ದು.

(6) (2)ನೇ ಉಪಪ್ರಕರಣದ ಮೇರೆಗೆ ಅರ್ಜಿಯನ್ನು ಸ್ವೀಕರಿಸಿದ ತರುವಾಯ, ಅದನ್ನು ಪರಿಶೀಲನೆಗಾಗಿ ಮಂಡಳಿಯ ಮುಂದೆ ಇಡತಕ್ಕದ್ದು. ಮಂಡಳಿಯು ಸಂಯೋಜನೆಯ ಪ್ರತಿಯೊಂದು ಅರ್ಜಿಯನ್ನು ಪರಿಶೀಲಿಸಿದ ತರುವಾಯ ಒಂದು ಸ್ಥಳೀಯ ವಿಚಾರಣಾ ಸಮಿತಿಯಿಂದ ಸ್ಥಳೀಯ ವಿಚಾರಣೆ ಮಾಡಬೇಕೆಂದು ನಿರ್ದೇಶನ ನೀಡತಕ್ಕದ್ದು.

(7) ಸ್ಥಳೀಯ ವಿಚಾರಣಾ ಸಮಿತಿಯು, ಅದನ್ನು ರಚಿಸಿದ ದಿನಾಂಕದಿಂದ ಮೂವತ್ತು ದಿನಗಳೊಳಗಾಗಿ, ಒಂದು ವರದಿಯನ್ನು ವಿದ್ಯಾ ವಿಷಯಕ ಪರಿಷತ್ತಿಗೆ ಸಲ್ಲಿಸತಕ್ಕದ್ದು.

(8) ವಿದ್ಯಾವಿಷಯಕ ಪರಿಷತ್ತು, ಸ್ಥಳೀಯ ವಿಚಾರಣಾ ಸಮಿತಿಯ ವರದಿಯನ್ನು ಸ್ವೀಕರಿಸಿದ ತರುವಾಯ ಕೂಡಲೇ ವರದಿಯಲ್ಲಿ ವಿವರಿಸಿದ ಸಮಿತಿಯ ತೀರ್ಮಾನಗಳನ್ನು ಪರಿಗಣಿಸತಕ್ಕದ್ದು ಮತ್ತು ತನಗೆ ಅವಶ್ಯಕವೆಂದು ಕಂಡುಬರಬಹುದಾದಂಥ ಹೆಚ್ಚಿನ ವಿಚಾರಣೆಯನ್ನು ಮಾಡತಕ್ಕದ್ದು ಮತ್ತು ಅಂಥ ಮನವಿಯ ಮೇಲೆ ತನ್ನ ಅಭಿಪ್ರಾಯವನ್ನು ದಾಖಲು ಮಾಡತಕ್ಕದ್ದು ಮತ್ತು ಅದನ್ನು ಮಂಡಳಿಗೆ ಕಳುಹಿಸತಕ್ಕದ್ದು.

(9) ಮಂಡಳಿಯು, ಸಮಿತಿಯ ವರದಿಯನ್ನು ಮತ್ತು ವಿದ್ಯಾ ವಿಷಯಕ ಪರಿಷತ್ತಿನ ಗೊತ್ತುವಳಿಯನ್ನು ಪರಿಗಣಿಸತಕ್ಕದ್ದು ಹಾಗೂ ತಾನು ಅವಶ್ಯವೆಂದು ಭಾವಿಸಬಹುದಾದಂತಹ ಹೆಚ್ಚಿನ ವಿಚಾರಣೆಯನ್ನು ಮಾಡಿದ ತರುವಾಯ ಮನವಿಯನ್ನು ಪೂರ್ಣವಾಗಿ ಅಥವಾ ಭಾಗಶ: ಮಂಜೂರುಮಾಡಬೇಕೆ ಅಥವಾ ನಿರಾಕರಿಸಬೇಕೆ ಎಂಬ ಪ್ರಶ್ನೆಯ ಬಗ್ಗೆ ತನ್ನ ಅಭಿಪ್ರಾಯವನ್ನು ದಾಖಲಿಸತಕ್ಕದ್ದು.

(10) ಕುಲಸಚಿವರು ಅರ್ಜಿಯನ್ನು ಅದರ ಅಡಕವನ್ನು, ಅನುಬಂಧಗಳನ್ನು ಸ್ಥಳೀಯ ವಿಚಾರಣಾ ಸಮಿತಿಯ ವರದಿ ಮತ್ತು ವಿದ್ಯಾ ವಿಷಯಕ ಪರಿಷತ್ತಿನ ಹಾಗೂ ಮಂಡಳಿಯ ಎಲ್ಲಾ ನಡವಳಿಗಳನ್ನು ಮುಂಬರುವ ವರ್ಷದ ಮಾರ್ಚ್ ಮೂವತ್ತೊಂದಕ್ಕೆ ಮೊದಲು ತೀರ್ಮಾನ ಕೈಗೊಳ್ಳುವುದಕ್ಕಾಗಿ ರಾಜ್ಯ ಸರ್ಕಾರಕ್ಕೆ ಕಳುಹಿಸತಕ್ಕದ್ದು.

(11) ರಾಜ್ಯ ಸರ್ಕಾರವು, ಸ್ಥಳಿಯ ವಿಚಾರಣಾ ಸಮಿತಿಯ, ವಿದ್ಯಾ ವಿಷಯಕ ಪರಿಷತ್ತಿನ ಮತ್ತು ಮಂಡಳಿಯ ಶಿಫಾರಸ್ಸುಗಳ ಹಿನ್ನೆಲೆಯಲ್ಲಿ ಅಂತಹ ಅರ್ಜಿಗಳನ್ನು ಪರಿಗಣಿಸತಕ್ಕದ್ದು ಮತ್ತು ಅವಶ್ಯಕವೆಂದು ಅದಕ್ಕೆ ಕಂಡುಬರಬಹುದಾದಂತಹ ವಿಚಾರಣೆಯ ತರುವಾಯ ಪ್ರವೇಶಾವಕಾಶದಲ್ಲಿ ವ್ಯತ್ಯಾಸಗಳು ಸೇರಿದಂತೆ, ಸಂದರ್ಭಾನುಸಾರ ಸಂಯೋಜಿಸಲು ಅಥವಾ ಸಂಯೋಜನೆಯನ್ನು ಅಥವಾ ಅದರ ಯಾವುದೇ ಭಾಗವನ್ನು ನಿರಾಕರಿಸಲು ವಿಶ್ವವಿದ್ಯಾಲಯಕ್ಕೆ ತನ್ನ ಶಿಫಾರಸ್ಸನ್ನು ಮಾಡತಕ್ಕದ್ದು.

(12) ವಿಶ್ವವಿದ್ಯಾಲಯವು ರಾಜ್ಯ ಸರ್ಕಾರದ ನಿರ್ದೇಶನಗಳನ್ನು ಸ್ವೀಕರಿಸಿದ ತರುವಾಯ ಅದರಂತೆ ಔಪಚಾರಿಕ ಆದೇಶಗಳನ್ನು ಹೊರಡಿಸತಕ್ಕದ್ದು.

(13) ಆದಾಗ್ಯೂ ಸಂಯೋಜನೆಯ ಮಂಜೂರಾತಿಯು ಭಾರತೀಯ ಕೃಷಿ ಸಂಶೋಧನಾ ಪರಿಷತ್ತು ಅಥವಾ ಸಂಬಂಧಪಟ್ಟಂತಹ ಇತರ ಪ್ರಾಧಿಕಾರಗಳು ಅಥವಾ ನಿಕಾಯಗಳ ಪೂರ್ವಾನುಮೋದನೆ ಪಡೆಯುವುದಕ್ಕೆ ಒಳಪಟ್ಟಿರತಕ್ಕದ್ದು ಮತ್ತು ನಿರ್ಧರಿಸಲಾದ ಪ್ರವೇಶಾವಕಾಶದ ಸಂಖ್ಯೆಯು, ಅಂತಹ ಪ್ರಾಧಿಕಾರಗಳು ಅಥವಾ ನಿಕಾಯಗಳು ಆ ಸಂಖ್ಯೆಯನ್ನು ನಿರ್ದಿಷ್ಟಪಡಿಸಿದ್ದರೆ ಅದನ್ನು ಮೀರತಕ್ಕದ್ದಲ್ಲ.

(14) ಸಂಯೋಜನೆಗಾಗಿ ಅಥವಾ ಪ್ರವೇಶಾವಕಾಶದ ಸಂಖ್ಯೆಯನ್ನು ನಿಗದಿಪಡಿಸುವುದಕ್ಕಾಗಿ ಅಥವಾ ಅದರ ಯಾವುದೇ ಭಾಗಕ್ಕಾಗಿ, ಅರ್ಜಿಯನ್ನು ರಾಜ್ಯ ಸರ್ಕಾರದ ಶಿಫಾರಸ್ಸಿನ ಮೇಲೆ ವಿಶ್ವವಿದ್ಯಾಲಯವು ಮಂಜೂರು ಮಾಡಿದ್ದರೆ, ವಿಶ್ವವಿದ್ಯಾಲಯವು, ನಿರ್ದಿಷ್ಟ ಷರತ್ತುಗಳೊಡನೆ ಅಥವಾ ಷರತ್ತುಗಳಿಲ್ಲದೆ ನಿರ್ದಿಷ್ಟ ಪ್ರವೇಶಾವಕಾಶದ ಸಂಖ್ಯೆಯೊಡನೆ ಯಾವ ವ್ಯಾಸಂಗಕ್ರಮಗಳ ಸಂಬಂಧದಲ್ಲಿ ಮತ್ತು ಯಾವ ಅವಧಿಗಾಗಿ, ಕಾಲೇಜನ್ನು ಅಥವಾ ವ್ಯಾಸಂಗ ಕ್ರಮವನ್ನು ಸಂಯೋಜಿಸಲಾಗಿದೆಯೋ, ಆ ವ್ಯಾಸಂಗ ಕ್ರಮಗಳನ್ನು ಮತ್ತು ಅವಧಿಯನ್ನು ಆದೇಶದಲ್ಲಿ ನಿರ್ದಿಷ್ಟಪಡಿಸತಕ್ಕದ್ದು.

(15) ಅಂತಹ ಅರ್ಜಿಯನ್ನು ಅಥವಾ ಅದರ ಯಾವುದೇ ಭಾಗವನ್ನು ರಾಜ್ಯ ಸರ್ಕಾರವು ಅಥವಾ ವಿಶ್ವವಿದ್ಯಾಲಯವು ನಿರಾಕರಿಸಿದ್ದರೆ, ಹಾಗೆ ನಿರಾಕರಿಸಲು ಕಾರಣಗಳನ್ನು ತಿಳಿಸತಕ್ಕದ್ದು.

(16) (1)ನೇ ಉಪಪ್ರಕರಣದ ಅಡಿಯಲ್ಲಿ ಸಲ್ಲಿಸಿದ ಯಾವುದೇ ಅರ್ಜಿಯನ್ನು (12)ನೇ ಉಪ ಪ್ರಕರಣದ ಅಡಿಯಲ್ಲಿ ಆದೇಶವನ್ನು ಮಾಡುವುದಕ್ಕೆ ಮೊದಲು ಯಾವುದೇ ಸಮಯದಲ್ಲಿ ಅರ್ಜಿದಾರನು ಹಿಂದಕ್ಕೆ ಪಡೆಯಬಹುದು.

(17) ಪ್ರತಿಯೊಂದು ಶೈಕ್ಷಣಿಕ ವರ್ಷಕ್ಕಾಗಿ, ಪ್ರಸಕ್ತ ಇರುವ ವ್ಯಾಸಂಗ ಕ್ರಮಗಳಿಗಾಗಿ ಮತ್ತು ಹೊಸ ವ್ಯಾಸಂಗ ಕ್ರಮಗಳನ್ನು ಹೊರತುಪಡಿಸಿ ಅನುಸರಣಾ ವ್ಯಾಸಂಗ ಕ್ರಮಗಳಿಗೆ ಸಂಯೋಜನೆಯನ್ನು ನವೀಕರಿಸುವುದಕ್ಕಾಗಿ ಅಥವಾ ಮುಂದುವರೆಸುವುದಕ್ಕಾಗಿ ಮಂಜೂರಾತಿಯನ್ನು ಮಂಡಳಿಯು ಹೊಸ ಸಂಯೋಜನೆಯ ಮಂಜೂರಾತಿಗೆ ಅನ್ವಯವಾಗುವ ರೀತಿಯಲ್ಲಿಯೇ, ವಿದ್ಯಾ ವಿಷಯಕ ಪರಿಷತ್ತಿನೊಡನೆ ಸಮಾಲೋಚಿಸಿ ನೀಡಬಹುದು.

(18) ರಾಜ್ಯ ಸರ್ಕಾರವು ಪ್ರತಿಯೊಂದು ವ್ಯಾಸಂಗ ಕ್ರಮದ ಸಂಬಂಧದಲ್ಲಿ ಪ್ರವೇಶಾವಕಾಶವನ್ನು ವಾರ್ಷಿಕ ಆಧಾರದಲ್ಲಿ ನಿರ್ಧರಿಸತಕ್ಕದ್ದು.

**45. ಹೊಸ ಕಾಲೇಜಿನಲ್ಲಿ ವಿದ್ಯಾರ್ಥಿಗಳನ್ನು ಪ್ರವೇಶ ಮಾಡಿಕೊಳ್ಳುವುದಕ್ಕೆ ನಿರ್ಬಂಧ.–** (1) ಯಾವುದೇ ವಿಶ್ವವಿದ್ಯಾಲಯಕ್ಕೆ ಸಂಯೋಜನೆಯನ್ನು ಕೋರುತ್ತಿರುವ ಒಂದು ಹೊಸ ಕಾಲೇಜು ಹೊಸ ವ್ಯಾಸಂಗ ಕ್ರಮಕ್ಕೆ ಸಂಯೋಜನೆಯನ್ನು ಕೋರುತ್ತಿರುವ ಅಥವಾ ನಿರ್ದಿಷ್ಟಪಡಿಸಲಾದಂಥ ಪ್ರವೇಶಾವಕಾಶಕ್ಕಿಂತಲೂ ಹೆಚ್ಚು ಪ್ರವೇಶಾವಕಾಶವನ್ನು ಕೋರುತ್ತಿರುವ ಈಗಾಗಲೇ ಇರುವ ಒಂದು ಕಾಲೇಜು ಸಂದರ್ಭಾನುಸಾರ ಆ ಹೊಸ ಕಾಲೇಜಿಗೆ ಸಂಯೋಜನೆಯನ್ನು ಅಥವಾ ಈಗಾಗಲೇ ಇರುವ ಸಂಯೋಜಿತ ಕಾಲೇಜಿನಲ್ಲಿ ಒಂದು ಹೊಸ ವ್ಯಾಸಂಗ ಕ್ರಮವನ್ನು ಅಥವಾ ಅಂಥ ಒಂದು ವ್ಯಾಸಂಗ ಕ್ರಮದ ಸಂಬಂಧದಲ್ಲಿ ನಿರ್ದಿಷ್ಟಪಡಿಸಿದ ಪ್ರವೇಶಾವಕಾಶವನ್ನು ಬದಲಾಯಿಸಲು ವಿಶ್ವ ವಿದ್ಯಾಲಯವು ಮಂಜೂರಾತಿ ನೀಡಿದ್ದ ಹೊರತು ಅವುಗಳು ಆ ಸಂಬಂಧದಲ್ಲಿ ವಿದ್ಯಾರ್ಥಿಗಳನ್ನು ಪ್ರವೇಶ ಮಾಡಿಸಿಕೊಳ್ಳತಕ್ಕದ್ದಲ್ಲ.

(2) (1)ನೇ ಉಪ ಪ್ರಕರಣದ ಉಪಬಂಧವನ್ನು ಉಲ್ಲಂಘಿಸುವ ಯಾವುದೇ ಸಂಸ್ಥೆಯು ಕರ್ನಾಟಕ ಮಾನ್ಯತೆ ಪಡೆಯದ ಮತ್ತು ಸಂಯೋಜನೆ ಹೊಂದಿರದ ವಿದ್ಯಾ ಸಂಸ್ಥೆಗಳಿಗೆ ಪ್ರವೇಶ ನಿಷೇಧ ಅಧಿನಿಯಮ, 1992ರ (1993ರ ಕರ್ನಾಟಕ ಅಧಿನಿಯಮ 7) ಅಡಿಯಲ್ಲಿ ಕೈಗೊಳ್ಳುವ ಕ್ರಮಕ್ಕೆ ಗುರಿಯಾಗತಕ್ಕದ್ದು.

**46. ಪರೀಕ್ಷೆಗಳಿಗೆ ಹಾಜರಾಗಲು ನಿರ್ಬಂಧ.–** ತನ್ನ ಪ್ರವೇಶವು ಅಮಾನ್ಯವಾಗಿರುವ ಅಥವಾ ವಿಶ್ವವಿದ್ಯಾಲಯದಿಂದ ತನ್ನ ಪ್ರವೇಶವು ಅನುಮೋದಿತವಾಗಿಲ್ಲದ ಅಥವಾ ನಿರ್ದಿಷ್ಟಪಡಿಸಲಾದ ವಿದ್ಯಾರ್ಥಿಗಳ ಸಂಖ್ಯೆಗಿಂತ ಹೆಚ್ಚಿಗೆಯಾಗಿ ಕಾಲೇಜಿಗೆ ಅಥವಾ ವ್ಯಾಸಂಗ ಕ್ರಮಕ್ಕೆ ಪ್ರವೇಶಪಡೆದಿರುವ ಯಾವೊಬ್ಬ ವಿದ್ಯಾರ್ಥಿಯು, ಕಾಲೇಜು ಅಥವಾ ವಿಶ್ವವಿದ್ಯಾಲಯವು ನಡೆಸುವ ಪರೀಕ್ಷೆಗೆ ಹಾಜರಾಗಲು ಅರ್ಹನಾಗಿರತಕ್ಕದ್ದಲ್ಲ.

**47. ಖಾಯಂ ಸಂಯೋಜನೆ.–** (1) ಐದು ವರ್ಷಗಳಿಗೆ ಕಡಿಮೆ ಇಲ್ಲದ ಅವಧಿಗೆ ನಿರಂತರವಾಗಿ ಸಂಯೋಜನೆಗೊಂಡಿರುವ ಮತ್ತು ಕಾಲಕಾಲಕ್ಕೆ ವಿಶ್ವವಿದ್ಯಾಲಯವು ನಿರ್ದಿಷ್ಟಪಡಿಸಿದ ಸಂಯೋಜನೆಯ ಎಲ್ಲಾ ಷರತ್ತುಗಳನ್ನು ಪೂರೈಸಿರುವ ಮತ್ತು ವಿದ್ಯಾ ವಿಷಯದಲ್ಲಿ ಉತ್ಕೃಷ್ಟತೆಯನ್ನು ಸಾಧಿಸಿದ ಹಾಗೂ ಆಡಳಿತಾತ್ಮಕ ಗುಣಮಟ್ಟಗಳನ್ನು ಹೊಂದಿರುವ ಕಾಲೇಜು ಖಾಯಂ ಸಂಯೋಜನೆಯ ಮಂಜೂರಾತಿಗೆ ಅರ್ಹವಾಗಿರತಕ್ಕದ್ದು.

(2) 45ನೇ ಪ್ರಕರಣದ ಉಪಬಂಧಗಳು, ಯಥೋಚಿತ ವ್ಯತ್ಯಾಸಗಳೊಂದಿಗೆ ಖಾಯಂ ಸಂಯೋಜನೆಯ ಮಂಜೂರಾತಿಗೆ ಅನ್ವಯವಾಗತಕ್ಕದ್ದು.

(3) ಖಾಯಂ ಆಗಿ ವಿಶ್ವವಿದ್ಯಾಲಯಕ್ಕೆ ಸಂಯೋಜನೆಗೊಂಡ ಕಾಲೇಜಿನ, ಆಡಳಿತಾತ್ಮಕ ಮತ್ತು ಶೈಕ್ಷಣಿಕ ಕಾರ್ಯ ವೈಖರಿಯನ್ನು ಐದು ವರ್ಷಗಳ ಅವಧಿಯಲ್ಲಿ ಕೊನೆಪಕ್ಷ ಒಂದು ಸಲದಂತೆ ಆಗಾಗ್ಗೆ, ವಿಶ್ವವಿದ್ಯಾಲಯ ಮತ್ತು ರಾಜ್ಯ ಸರ್ಕಾರಗಳು ಪರಿಶೀಲನೆ ಮಾಡತಕ್ಕದ್ದು.

(4) ಪೂರ್ವೋಕ್ತ ಉಪ ಪ್ರಕರಣಗಳಲ್ಲಿ ಏನೇ ಇದ್ದರೂ, ಖಾಯಂ ಆಗಿ ಸಂಯೋಜನೆಗೊಂಡ ಕಾಲೇಜು, (1)ನೇ ಉಪ ಪ್ರಕರಣದಲ್ಲಿ ನಿರ್ದಿಷ್ಟಪಡಿಸಿದ ಯಾವುದೇ ಷರತ್ತುಗಳನ್ನು ಪೂರೈಸಲು ವಿಫಲವಾಗಿದ್ದಲ್ಲಿ, ಅದರ ಖಾಯಂ ಸಂಯೋಜನೆಯನ್ನು ರದ್ದುಪಡಿಸತಕ್ಕದ್ದು:

ಪರಂತು, ಸಂಬಂಧಪಟ್ಟ ಕಾಲೇಜಿಗೆ ತನ್ನ ಅಹವಾಲನ್ನು ಹೇಳಿಕೊಳ್ಳಲು ವಿಶ್ವವಿದ್ಯಾಲಯವು ಒಂದು ಅವಕಾಶಕೊಟ್ಟ ಹೊರತು ಖಾಯಂ ಸಂಯೋಜನೆಯನ್ನು ರದ್ದುಗೊಳಿಸತಕ್ಕದ್ದಲ್ಲ:

ಮತ್ತು ಪರಂತು, ಖಾಯಂ ಸಂಯೋಜನೆಯನ್ನು ರದ್ದುಗೊಳಿಸಿದ ತರುವಾಯ ಸಂಬಂಧಪಟ್ಟ ಕಾಲೇಜು, ಸಂಯೋಜನೆಯನ್ನು ವಾರ್ಷಿಕ ಆಧಾರದ ಮೇಲೆ ತಾತ್ಕಾಲಿಕವಾಗಿ ಮುಂದುವರೆಸಲು ಕೋರತಕ್ಕದ್ದು.

**48. ಸಂಯೋಜನೆಯನ್ನು ಹಿಂತೆಗೆದುಕೊಳ್ಳುವುದು.–** (1) ಸಂಯೋಜನೆಗೊಂಡ ಕಾಲೇಜು ಈ ಅಧಿನಿಯಮದ ಯಾವುದೇ ಉಪಬಂಧವನ್ನು ಪಾಲಿಸಲು ವಿಫಲವಾದರೆ ಅಥವಾ ಸಂಯೋಜನೆಯ ಯಾವುದೇ ಷರತ್ತುಗಳನ್ನು ಪಾಲಿಸಲು ವಿಫಲವಾದರೆ ಅಥವಾ ಕಾಲೇಜನ್ನು ಶಿಕ್ಷಣದ ಹಿತಾಸಕ್ತಿಗಳಿಗೆ ದಕ್ಕೆ ಉಂಟು ಮಾಡುವ ರೀತಿಯಲ್ಲಿ ನಡೆಸಿಕೊಂಡು ಬರುತ್ತಿದ್ದರೆ, ಸಂಯೋಜನೆಯ ಮೂಲಕ ಕಾಲೇಜಿಗೆ ತಾತ್ಕಾಲಿಕವಾಗಿ ಅಥವಾ ಶಾಶ್ವತವಾಗಿ ಪ್ರದತ್ತವಾದ ಹಕ್ಕುಗಳನ್ನು ಪೂರ್ಣವಾಗಿ ಅಥವಾ ಭಾಗಶ: ಹಿಂತೆಗೆದುಕೊಳ್ಳಬಹುದು ಅಥವಾ ಮಾರ್ಪಾಡು ಮಾಡಬಹುದು.

(2) ಅಂತಹ ಹಕ್ಕುಗಳನ್ನು ಹಿಂತೆಗೆದುಕೊಳ್ಳುವುದಕ್ಕೆ ಅಥವಾ ಮಾರ್ಪಾಟುಮಾಡುವುದಕ್ಕೆ ಸೂಚನೆಯನ್ನು ಮಂಡಳಿಯ ಸಭೆಯಲ್ಲಿ ಮಾತ್ರ ಮಂಡಿಸತಕ್ಕದ್ದು. ಮಂಡಳಿಯ ಪದನಿಮಿತ್ತ ಸದಸ್ಯನೂ ಒಳಗೊಂಡಂತೆ ಅಂತಹ ಸೂಚನೆಯನ್ನು ಮಂಡಿಸಲು ಉದ್ದೇಶಿಸುವ ಯಾವೊಬ್ಬ ಸದಸ್ಯನು ಯಾವ ಕಾರಣದ ಮೇಲೆ ಅಂತಹ ಸೂಚನೆಯನ್ನು ಮಂಡಿಸಲಾಗಿದೆಯೋ ಆ ಕಾರಣಗಳನ್ನು ಲಿಖಿತದಲ್ಲಿ ನಿರೂಪಿಸಿ ಅಂಥ ಒಂದು ನೋಟೀಸನ್ನು ನೀಡತಕ್ಕದ್ದು.

(3) ಸದರಿ ಸೂಚನೆಯನ್ನು ಪರಿಗಣನೆಗೆ ತೆಗೆದುಕೊಳ್ಳುವುದಕ್ಕೆ ಮೊದಲು ಮಂಡಳಿಯು, ನೋಟೀಸಿನ ಒಂದು ಪ್ರತಿಯನ್ನು, ತನ್ನ ತಿಳುವಳಿಕೆ ಪತ್ರದಲ್ಲಿ ನಿರ್ದಿಷ್ಟಪಡಿಸಿದ ಅವಧಿಯೊಳಗೆ ಆ ಕಾಲೇಜು ಸದರಿ ಸೂಚನೆಯ ಬಗ್ಗೆ ತನ್ನ ಯಾವುದೇ ಮನವಿಯನ್ನು ಬರೆದು ಸಲ್ಲಿಸತಕ್ಕದೆಂದು ಮತ್ತು ಅದನ್ನು ಮಂಡಳಿಯು ಪರ್ಯಾಲೋಚಿಸುವುದೆಂದು ನಿರ್ದಿಷ್ಟವಾಗಿ ತಿಳಿಸಿದ ಪತ್ರದೊಂದಿಗೆ ಸಂಬಂಧಪಟ್ಟ ಕಾಲೇಜಿನ ಪ್ರಾಂಶುಪಾಲರಿಗೆ ಕಳುಹಿಸತಕ್ಕದ್ದು.

(4) (3)ನೇ ಉಪ ಪ್ರಕರಣದಲ್ಲಿ ಹಾಗೆ ನಿರ್ದಿಷ್ಟಪಡಿಸಿದ ಅವಧಿಯನ್ನು ಅವಶ್ಯವಿದ್ದಲ್ಲಿ, ಮಂಡಳಿಯು ಸಮಂಜಸ ಸಮಯದವರೆಗೆ ವಿಸ್ತರಿಸಬಹುದು.

(5) ಮನವಿಯನ್ನು ಸ್ವೀಕರಿಸಿದ ಮೇಲೆ ಅಥವಾ ಹಿಂದಿನ ಉಪ ಪ್ರಕರಣದಲ್ಲಿ ಉಲ್ಲೇಖಿಸಲಾದ ಅವಧಿಯು ಮುಗಿದ ಮೇಲೆ, ಮಂಡಳಿಯು ಸೂಚನೆಯ ನೋಟೀಸನ್ನು, ಅದರಲ್ಲಿ ತಿಳಿಸಿದ ಕಾರಣಗಳನ್ನು ಮತ್ತು ಅದರ ಮೇಲೆ ಸಲ್ಲಿಸಿದ ಮನವಿಯನ್ನು ಪರ್ಯಾಲೋಚಿಸಿದ ತರುವಾಯ ಮತ್ತು ಈ ಸಂಬಂಧದಲ್ಲಿ ತಾನು ರಚಿಸಿದ ಮತ್ತು ಪ್ರಾಧಿಕಾರ ನೀಡಿದ ಒಂದು ಸಮಿತಿಯು ತನಗೆ ಅವಶ್ಯವೆಂದು ಕಂಡು ಬರಬಹುದಾದಂತಹ ಪರಿಶೀಲನೆಯನ್ನು ನಡೆಸಿದ ತರುವಾಯ ಮತ್ತು ಅಂತಹ ಹೆಚ್ಚಿನ ವಿಚಾರಣೆಯನ್ನು ನಡೆಸಿದ ತರುವಾಯ, ಒಂದು ನಿರ್ಣಯವನ್ನು ಅದಕ್ಕೆ ಕಾರಣಗಳನ್ನು ದಾಖಲಿಸಿ ಅಂಗೀಕರಿಸತಕ್ಕದ್ದು ಮತ್ತು ಅದನ್ನು ವಿದ್ಯಾವಿಷಯಕ ಪರಿಷತ್ತಿಗೆ ಕಳುಹಿಸಿಕೊಡತಕ್ಕದ್ದು.

(6) (5)ನೇ ಉಪ ಪ್ರಕರಣದ ಅಡಿಯಲ್ಲಿನ ಒಂದು ವರದಿಯನ್ನು ಸ್ವೀಕರಿಸಿದ ಮೇಲೆ, ವಿದ್ಯಾ ವಿಷಯಕ ಪರಿಷತ್ತು ಅದಕ್ಕೆ ಅವಶ್ಯವೆಂದು ಕಂಡುಬರಬಹುದಾದಂತಹ ಹೆಚ್ಚಿನ ವಿಚಾರಣೆ ಯಾವುದಾದರೂ ಇದ್ದರೆ ಅದನ್ನು ಮಾಡಿದ ತರವಾಯ, ಆ ವಿಷಯದಲ್ಲಿ ತನ್ನ ಅಭಿಪ್ರಾಯವನ್ನು ದಾಖಲಿಸತಕ್ಕದ್ದು ಮತ್ತು ಅದನ್ನು ಮಂಡಳಿಗೆ ವಾಪಸ್ಸು ಕಳುಹಿಸಿಕೊಡತಕ್ಕದ್ದು.

(7) ಮಂಡಳಿಯು, ವಿದ್ಯಾ ವಿಷಯಕ ಪರಿಷತ್ತಿನ ನಿರ್ಣಯವನ್ನು ಪರ್ಯಾಲೋಚಿಸಿದ ತರುವಾಯ ಸಂಯೋಜನೆಯನ್ನು ಹಿಂತೆಗೆದುಕೊಳ್ಳಬೇಕೆಂದು ಶಿಫಾರಸ್ಸು ಮಾಡಿದ ಅಂತಿಮ ನಿರ್ಣಯವನ್ನು ಅಂಗೀಕರಿಸತಕ್ಕದ್ದು. ಅಂತಹ

ನಿರ್ಣಯಕ್ಕೆ ಮಂಡಳಿಯ ಸಭೆಯಲ್ಲಿ ಹಾಜರಿದ್ದ ಸದಸ್ಯರ ಮೂರನೇ ಎರಡರಷ್ಟು ಸದಸ್ಯರ ಬೆಂಬಲ ದೊರೆತ ಹೊರತು ನಿರ್ಣಯವು ಮಂಡಳಿಯಿಂದ ಅಂಗೀಕೃತವಾಗಿರುವುದಾಗಿ ಭಾವಿಸತಕ್ಕದ್ದಲ್ಲ.

(8) ಕುಲಸಚಿವರು ಪ್ರಸ್ತಾವವನ್ನು, ಸೂಚನೆಯ ನೋಟೀಸು, ಕಾಲೇಜಿನ ಉತ್ತರ, ಮಂಡಳಿಯ ಮತ್ತು ವಿದ್ಯಾ ವಿಷಯಕ ಪರಿಷತ್ತಿನ ನಿರ್ಣಯವೂ ಒಳಗೊಂಡಂತೆ ಎಲ್ಲಾ ದಸ್ತಾವೇಜುಗಳ ಸಮೇತ ತೀರ್ಮಾನ ಕೈಗೊಳ್ಳುವುದಕ್ಕಾಗಿ ರಾಜ್ಯ ಸರ್ಕಾರಕ್ಕೆ ಒಪ್ಪಿಸತಕ್ಕದ್ದು.

(9) ರಾಜ್ಯ ಸರ್ಕಾರವು ತನಗೆ ಅವಶ್ಯವೆಂದು ಕಂಡುಬರಬಹುದಾದಂತಹ ಹೆಚ್ಚಿನ ವಿಚಾರಣೆಯನ್ನು ನಡೆಸಿದ ತರವಾಯ, ಒಂದು ನಿರ್ದಿಷ್ಟ ಶೈಕ್ಷಣಿಕ ವರ್ಷದಿಂದ ಅನ್ವಯವಾಗುವಂತೆ, ಸಂಯೋಜನೆಯನ್ನು ಪೂರ್ತಿಯಾಗಿ ಅಥವಾ ಭಾಗಶ: ಹಿಂತೆಗೆದುಕೊಳ್ಳುವಂತೆ ಅಥವಾ ಮಾರ್ಪಾಟು ಮಾಡುವಂತೆ ಅಥವಾ ಪ್ರಸ್ತಾವವನ್ನು ತಿರಸ್ಕರಿಸುವಂತೆ ವಿಶ್ವವಿದ್ಯಾಲಯಕ್ಕೆ ನಿರ್ದೇಶಿಸಬಹುದು.

(10) ವಿಶ್ವವಿದ್ಯಾಲಯವು ಅಂತಹ ನಿರ್ದೇಶನವನ್ನು ಸ್ವೀಕರಿಸಿದ ಮೇಲೆ, ಅಂತಹ ನಿರ್ದೇಶನಕ್ಕೆ ಅನುಸಾರವಾಗಿ ಔಪಚಾರಿಕ ಆದೇಶವನ್ನು ಹೊರಡಿಸತಕ್ಕದ್ದು.

(11) ಸಂಯೋಜನೆಯನ್ನು ಪೂರ್ಣವಾಗಿ ಅಥವಾ ಭಾಗಶ: ಹಿಂತೆಗೆದುಕೊಂಡ ಕಾಲೇಜಿನ ವಿದ್ಯಾರ್ಥಿಗಳಿಗೆ, ನಿರ್ದಿಷ್ಟ ವ್ಯಾಸಂಗ ಕ್ರಮದ ಸಂಬಂಧದಲ್ಲಿ ಹಾಗೆ ಸ್ಥಳಾವಕಾಶ ಕಲ್ಪಿಸಬೇಕಾದಂತಹ ವಿದ್ಯಾರ್ಥಿಗಳ ಸಂಖ್ಯೆಯಷ್ಟರ ಮಟ್ಟಿಗೆ ಪ್ರವೇಶ ಸಂಖ್ಯೆಯನ್ನು ಹೆಚ್ಚಿಸುವ ಮೂಲಕ, ವಿಶ್ವವಿದ್ಯಾಲಯವು, ಹತ್ತಿರದಲ್ಲಿರುವ ಕಾಲೇಜಿನಲ್ಲಿ ಅಂತಹ ವಿದ್ಯಾರ್ಥಿಗಳಿಗೆ ಸ್ಥಳಾವಕಾಶವನ್ನು ಕಲ್ಪಿಸುವ ವ್ಯವಸ್ಥೆ ಮಾಡತಕ್ಕದ್ದು. ಅಂತಹ ವಿದ್ಯಾರ್ಥಿಗಳಿಗೆ ಸಂಬಂಧಪಟ್ಟ ಎಲ್ಲ ದಾಖಲೆಗಳನ್ನು ಸಂಯೋಜನೆಯನ್ನು ಹಿಂತೆಗೆದುಕೊಂಡ ಕಾಲೇಜಿನಿಂದ ವಿಶ್ವವಿದ್ಯಾಲಯವು ಅವರನ್ನು ವರ್ಗಾಯಿಸಿದ ಕಾಲೇಜಿಗೆ ವರ್ಗಾಯಿಸತಕ್ಕದ್ದು.

**49. ಕಾಲೇಜು ಅಥವಾ ವ್ಯಾಸಂಗ ಕ್ರಮವನ್ನು ಸ್ವಯಂ ಮುಚ್ಚುವಿಕೆ.–** (1) ತನ್ನ ಅಸಾಮರ್ಥ್ಯದ ಅಥವಾ ಹಣಕಾಸು ದೃಷ್ಟಿಯಿಂದ ಉರ್ಜಿತವಾಗದ ಕಾರಣದಿಂದ ಅಥವಾ ಆಡಳಿತ ವ್ಯವಸ್ಥೆಯ ಕುಸಿತದ ಕಾರಣದಿಂದ ಕಾಲೇಜನ್ನು ಅಥವಾ ವ್ಯಾಸಂಗ ಕ್ರಮವನ್ನು ಮುಚ್ಚಲು ಉದ್ದೇಶಿಸಿರುವಂತಹ ಯಾವುದೇ ಕಾಲೇಜಿನ ಆಡಳಿತ ಮಂಡಳಿಯು ವಿಶ್ವವಿದ್ಯಾಲಯಕ್ಕೆ ಮತ್ತು ರಾಜ್ಯ ಸರ್ಕಾರಕ್ಕೆ, ಕಾಲೇಜನ್ನು ಮುಚ್ಚುವುದಕ್ಕೆ ಮೊದಲು ಮೂರು ತಿಂಗಳುಗಳಿಗಿಂತ ಕಡಿಮೆ ಇಲ್ಲದಂತೆ, ಆ ಬಗ್ಗೆ ಕಾರಣಗಳನ್ನು ತಿಳಿಸಿ, ನೋಟೀಸನ್ನು ನೀಡತಕ್ಕದ್ದು.

(2) ಕಾಲೇಜಿನ ಅಥವಾ ವ್ಯಾಸಂಗ ಕ್ರಮದ ಮುಚ್ಚುವಿಕೆಯ ಅರ್ಜಿಯನ್ನು ವಿದ್ಯಾವಿಷಯಕ ಪರಿಷತ್ತು ಮತ್ತು ಮಂಡಳಿಗಳು ಪರಿಗಣಿಸತಕ್ಕದ್ದು ಮತ್ತು ಅವು ಅದರ ಮೇಲೆ ಸೂಕ್ತ ಗೊತ್ತುವಳಿಗಳನ್ನು ಅಂಗೀಕರಿಸತಕ್ಕದ್ದು.

(3) ಕುಲಸಚಿವರು, ಅರ್ಜಿಯನ್ನು ಮತ್ತು ವಿದ್ಯಾವಿಷಯಕ ಪರಿಷತ್ತಿನ ಮತ್ತು ಮಂಡಳಿಯ ಗೊತ್ತುವಳಿಗಳನ್ನು ರಾಜ್ಯ ಸರ್ಕಾರಕ್ಕೆ ಕಳುಹಿಸತಕ್ಕದ್ದು, ಅದು ಅವುಗಳನ್ನು ಪರಿಗಣಿಸಿದ ತರುವಾಯ ಮುಚ್ಚುವ ಬಗ್ಗೆ ಅನುಮತಿ ನೀಡಬೇಕೆಂದು ಅಥವಾ ಮುಚ್ಚುವಿಕೆಗೆ ಅನುಮತಿ ನಿರಾಕರಿಸಬೇಕೆಂದು ವಿಶ್ವವಿದ್ಯಾಲಯಕ್ಕೆ ನಿರ್ದೇಶನ ನೀಡತಕ್ಕದ್ದು ಮತ್ತು ವಿಶ್ವವಿದ್ಯಾಲಯವು ಅಂಥ ನಿರ್ದೇಶನಗಳನ್ನು ಸ್ವೀಕರಿಸಿದ ತರುವಾಯ ಅದಕ್ಕನುಸಾರ ಆದೇಶಗಳನ್ನು ಹೊರಡಿಸತಕ್ಕದ್ದು.

(4) ಆಡಳಿತ ಮಂಡಳಿಯು, ಶೈಕ್ಷಣಿಕ ವರ್ಷದ ಚಾಲ್ತಿ ಅವಧಿಯಲ್ಲಿ ಮತ್ತು ವಿಶ್ವವಿದ್ಯಾಲಯವು ಸಂಬಂಧಪಟ್ಟ ವ್ಯಾಸಂಗಕ್ರಮದ ವಾರ್ಷಿಕ ಪರೀಕ್ಷೆಗಳನ್ನು ನಡೆಸುವವರೆಗೆ ಮತ್ತು ವಿಶ್ವವಿದ್ಯಾಲಯವು ಮುಚ್ಚಬಹುದೆಂದು ಒಂದು ಔಪಚಾರಿಕ ಆದೇಶವನ್ನು ಹೊರಡಿಸುವವರೆಗೆ ಕಾಲೇಜನ್ನು ಅಥವಾ ವ್ಯಾಸಂಗ ಕ್ರಮವನ್ನು ಮುಚ್ಚತಕ್ಕದ್ದಲ್ಲ.

(5) ಹಾಗೆ ಮುಚ್ಚಲಾದ ಕಾಲೇಜುಗಳ ವಿದ್ಯಾರ್ಥಿಗಳಿಗೆ ಅವರ ವರ್ಗಾವಣೆಯ ನಂತರ, ವಿಶ್ವವಿದ್ಯಾಲಯವು, ಹತ್ತಿರವಿರುವ ಕಾಲೇಜಿನಲ್ಲಿ ಸಂಬಂಧಪಟ್ಟ ವ್ಯಾಸಂಗಕ್ರಮದಲ್ಲಿ ಪ್ರವೇಶ ಸಂಖ್ಯೆಯನ್ನು ಅಂಥ ವಿದ್ಯಾರ್ಥಿಗಳಿಗೆ ಪ್ರವೇಶಾವಕಾಶ ನೀಡುವಷ್ಟರಮಟ್ಟಿಗೆ ಹೆಚ್ಚಿಸಿ ಪ್ರವೇಶವನ್ನು ನೀಡತಕ್ಕದ್ದು ಮತ್ತು ಅಂಥ ವಿದ್ಯಾರ್ಥಿಗಳಿಗೆ ಸಂಬಂಧಪಟ್ಟ ಎಲ್ಲ ದಾಖಲೆಗಳನ್ನು ಹಾಗೆ ಮುಚ್ಚಲ್ಪಟ್ಟ ಕಾಲೇಜಿನಿಂದ, ಯಾವ ಕಾಲೇಜಿನಲ್ಲಿ ಅಂಥ ವಿದ್ಯಾರ್ಥಿಗಳು ಪ್ರವೇಶವನ್ನು ಪಡೆದಿರುವರೋ ಅಲ್ಲಿಗೆ ವರ್ಗಾಯಿಸತಕ್ಕದ್ದು.

(6) (1)ನೇ ಉಪಪ್ರಕರಣದ ಅಡಿಯಲ್ಲಿ ನೋಟೀಸಿನ ಅವಧಿಯು ಮುಕ್ತಾಯವಾದ ತರುವಾಯ ತೊಂಬತ್ತು ದಿನಗಳೊಳಗೆ, ಹಾಗೆ ಮುಚ್ಚುವ ಬಗ್ಗೆ ಅನುಮತಿ ನೀಡುವ ಅಥವಾ ನಿರಾಕರಿಸುವ ಯಾವುದೇ ನಿರ್ದೇಶನವನ್ನು ರಾಜ್ಯ ಸರ್ಕಾರವು ನೀಡದಿದ್ದರೆ, (4)ನೇ ಉಪಪ್ರಕರಣದ ಉಪಬಂಧಗಳಿಗೊಳಪಟ್ಟು, ಕಾಲೇಜನ್ನು ಅಥವಾ ಸಂದರ್ಭಾನುಸಾರ ವ್ಯಾಸಂಗಕ್ರಮವನ್ನು ಮುಚ್ಚಲು ಆಡಳಿತ ಮಂಡಳಿಗೆ ಅನುಮತಿ ನೀಡಲಾಗಿದೆ ಎಂದು ಭಾವಿಸತಕ್ಕದ್ದು.

**50. ಕೆಲವು ಸಂಸ್ಥೆಗಳಿಗೆ ಮಾನ್ಯತೆ.–** (1) ಸಂಶೋಧನೆ ಅಥವಾ ನಿರ್ದಿಷ್ಟಪಡಿಸಿದ ಅಧ್ಯಯನಗಳನ್ನು ಅಥವಾ ವಿಶೇಷ ಅಧ್ಯಯನಗಳನ್ನು ನಡೆಸುವ ಕಾಲೇಜುಗಳನ್ನು ಹೊರತುಪಡಿಸಿ, ವಿಶ್ವವಿದ್ಯಾಲಯ ಪ್ರದೇಶದ ಒಳಗೆ ಅಥವಾ ಹೊರಗೆ ಇರುವ ಯಾವುದೇ ಸಂಸ್ಥೆಯನ್ನು, ಶಾಸನಗಳ ಮೂಲಕ ನಿಯಮಿಸಬಹುದಾದಂಥ ಉದ್ದೇಶಕ್ಕಾಗಿ ಮತ್ತು ಅಂಥ ವಿಧಾನದಲ್ಲಿ ಮತ್ತು ಅಂಥ ಷರತ್ತುಗಳಿಗೆ ಒಳಪಟ್ಟು, ಮಾನ್ಯತೆ ಪಡೆದ ಸಂಸ್ಥೆಯೆಂದು ಮಂಡಳಿಯು ಮಾನ್ಯತೆ ನೀಡಬಹುದು.

(2) ಯಾವುದೇ ಅಂಥ ಮಾನ್ಯತೆಯನ್ನು ಶಾಸನಗಳ ಮೂಲಕ ನಿಯಮಿಸಬಹುದಾದಂಥ ವಿಧಾನದಲ್ಲಿ ಮತ್ತು ಅಂಥ ಕಾರಣಗಳಿಗಾಗಿ ಪೂರ್ಣವಾಗಿಯಾಗಲಿ ಅಥವಾ ಭಾಗಶಃವಾಗಿಯಾಗಲಿ ಹಿಂತೆಗೆದುಕೊಳ್ಳಬಹುದು ಅಥವಾ ಮಾರ್ಪಾಟು ಮಾಡಬಹುದು.

**51. ಕಾಲೇಜುಗಳ ಪರಿವೀಕ್ಷಣೆ ಮತ್ತು ವರದಿಗಳು.**-(1) ಖಾಯಂ ಆಗಿ ಸಂಯೋಜನೆಗೊಂಡ ಕಾಲೇಜುಗಳೂ ಒಳಗೊಂಡಂತೆ ಸಂಯೋಜನೆಗೊಂಡ ಪ್ರತಿಯೊಂದು ಕಾಲೇಜು, ಮಂಡಳಿಯು ವಿದ್ಯಾವಿಷಯಕ ಪರಿಷತ್ತಿನೊಡನೆ ಸಮಾಲೋಚನೆ ನಡೆಸಿದ ತರುವಾಯ, ಆ ಕಾಲೇಜಿನ ಅಥವಾ ಸಂಸ್ಥೆಯ ದಕ್ಷತೆಯನ್ನು ಮತ್ತು ಅದು ಸಾಧಿಸಿದ ಶೈಕ್ಷಣಿಕ ಗುಣಮಟ್ಟವನ್ನು ನಿರ್ಣಯಿಸುವುದಕ್ಕೆ ಸಾಧ್ಯವಾಗುವಂತೆ ಅಗತ್ಯಪಡಿಸಬಹುದಾದಂಥ ವರದಿಗಳನ್ನು, ವಿವರಣ ಪಟ್ಟಿಕೆಗಳನ್ನು ಮತ್ತು ಇತರ ಮಾಹಿತಿಯನ್ನು ಕುಲಸಚಿವರಿಗೆ ಒದಗಿಸತಕ್ಕದ್ದು.

(2) ಮಂಡಳಿಯು, ಅಂಥ ಪ್ರತಿಯೊಂದು ಕಾಲೇಜನ್ನು ಈ ಉದ್ದೇಶಕ್ಕಾಗಿ ರಚಿಸಿದ ಒಂದು ಸಮಿತಿಯು ಕಾಲಕಾಲಕ್ಕೆ ಪರಿವೀಕ್ಷಣೆ ನಡೆಸುವಂತೆ ಮಾಡತಕ್ಕದ್ದು.

(3) ಮಂಡಳಿಯು, ಹಾಗೆ ಪರಿವೀಕ್ಷಣೆ ನಡೆಸಿದ ಮೇಲೆ ಯಾವುದೇ ಕಾಲೇಜನ್ನು, ನಿರ್ದಿಷ್ಟಪಡಿಸಿದ ಅವಧಿಯೊಳಗೆ, ಯಾವುವೇ ವಿಷಯಗಳ ಸಂಬಂಧದಲ್ಲಿ ತನಗೆ ಅವಶ್ಯವೆಂದು ಕಂಡುಬರಬಹುದಾದಂಥ ಕ್ರಮವನ್ನು ಕೈಗೊಳ್ಳಲು ಕೋರಬಹುದು.

(4) ಪ್ರತಿಯೊಂದು ಕಾಲೇಜು, ವಿಶ್ವವಿದ್ಯಾಲಯವು ವಿದ್ಯಾವಿಷಯಕ್ಕೆ ಮತ್ತು ಆಡಳಿತಕ್ಕೆ ಸಂಬಂಧಿಸಿದ ಎಲ್ಲಾ ವಿಷಯಗಳ ಬಗ್ಗೆ ಮತ್ತು ಅದಕ್ಕೆ ಪೂರಕವಾದ ವಿಷಯಗಳ ಬಗ್ಗೆ ಕಾಲಕಾಲಕ್ಕೆ ಹೊರಡಿಸುವ ನಿರ್ದೇಶನಗಳನ್ನು ಪಾಲಿಸತಕ್ಕದ್ದು.

## ಅಧ್ಯಾಯ – VIII

## ಶಾಸನಗಳು ಮತ್ತು ವಿನಿಯಮಗಳು

**52. ಶಾಸನಗಳು.**– ಈ ಅಧಿನಿಯಮದ ಉಪಬಂಧಗಳಿಗೊಳಪಟ್ಟು, ವಿಶ್ವವಿದ್ಯಾಲಯದ ಶಾಸನಗಳು, ವಿಶ್ವವಿದ್ಯಾಲಯದ ವ್ಯವಹಾರಗಳಿಗೆ ಸಂಬಂಧಪಟ್ಟ ಯಾವುದೇ ವಿಷಯಕ್ಕೆ ಉಪಬಂಧ ಕಲ್ಪಿಸಬಹುದು ಮತ್ತು ವಿಶೇಷವಾಗಿ, ಈ ಮುಂದಿನವುಗಳಿಗೆ ಉಪಬಂಧ ಕಲ್ಪಿಸತಕ್ಕದ್ದು, ಎಂದರೆ:–

(1) ಪ್ರಾಧಿಕಾರಗಳ ರಚನೆ, ಅಧಿಕಾರಗಳು ಮತ್ತು ಕರ್ತವ್ಯಗಳು;

(2) ವಿಶ್ವವಿದ್ಯಾಲಯದ ವಿದ್ಯಾವಿಷಯಕ ಜೀವನವನ್ನು ಉತ್ತಮಗೊಳಿಸಲು ಅವಶ್ಯವಾದ ಅಥವಾ ಅಪೇಕ್ಷಣೀಯವಾದ ಇತರ ನಿಕಾಯಗಳ ಅಥವಾ ಸಮಿತಿಗಳ ರಚನೆ, ಸಂಯೋಜನೆ ಮತ್ತು ಪ್ರಕಾರ್ಯಗಳು;

(3) ಕುಲಪತಿಯವರನ್ನು ಹೊರತುಪಡಿಸಿ ವಿಶ್ವವಿದ್ಯಾಲಯದ ಅಧಿಕಾರಿಗಳ ಪದನಾಮಗಳು, ಅಧಿಕಾರಗಳು, ಪ್ರಕಾರ್ಯಗಳು, ಕರ್ತವ್ಯಗಳು ಮತ್ತು ನೇಮಕಾತಿಯ ರೀತಿ ಮತ್ತು ಆಯ್ಕೆಗಳು ಮತ್ತು ಸೇವೆಯ ನಿಬಂಧನೆಗಳು ಮತ್ತು ಷರತ್ತುಗಳು;

(4) ವಿಶ್ವವಿದ್ಯಾಲಯದ ಬೋಧಕರ ಮತ್ತು ಇತರ ಸಿಬ್ಬಂದಿಗಳ ವರ್ಗೀಕರಣ, ವಿದ್ಯಾರ್ಹತೆ ಮತ್ತು ನೇಮಕಾತಿಯ ರೀತಿ, ಸೇವಾ ನಿಬಂಧನೆಗಳು ಮತ್ತು ಷರತ್ತುಗಳು ಹಾಗೂ ಕರ್ತವ್ಯಗಳು;

(5) ವಿಶ್ವವಿದ್ಯಾಲಯಗಳ ಫ್ಯಾಕಲ್ಟಿಗಳು, ಇಲಾಖೆಗಳು, ಸಂಶೋಧನಾ ಸಂಸ್ಥೆಗಳು, ಕೇಂದ್ರಗಳು ಮತ್ತು ಇತರ ಘಟಕಗಳ ಸ್ಥಾಪನೆ, ಸಮ್ಮಿಲನ, ಉಪವಿಭಜನೆ ಅಥವಾ ರದ್ಧತಿ;

(6) ವಿಶ್ವವಿದ್ಯಾಲಯದ ಅಧಿಕಾರಿಗಳು, ಬೋಧಕರು ಮತ್ತು ಇತರ ಸಿಬ್ಬಂದಿಗಳ ಪ್ರಯೋಜನಕ್ಕಾಗಿ ವಿಶ್ರಾಂತಿ ವೇತನ ಮತ್ತು ವಿಮಾ ಯೋಜನೆಗಳ ರಚನೆ ಮತ್ತು ಅಂಥ ಯೋಜನೆಗಳ ನಿಯಮಗಳು, ನಿಬಂಧನೆಗಳು ಮತ್ತು ಷರತ್ತುಗಳು;

(7) ಪದವಿ ಮತ್ತು ಡಿಪ್ಲೋಮಾಗಳನ್ನು ಪ್ರದಾನ ಮಾಡಲು ಘಟಕೋತ್ಸವಗಳನ್ನು ನಡೆಸುವುದು;

(8) ಗೌರವ ಪದವಿಗಳು ಮತ್ತು ವಿದ್ಯಾವಿಷಯಕ ಪ್ರಶಸ್ತಿಗಳನ್ನು ಪ್ರದಾನ ಮಾಡುವುದು ಮತ್ತು ಹಿಂಪಡೆಯುವುದು;

(9) ವಿಶ್ವವಿದ್ಯಾಲಯದಡಿಯಲ್ಲಿ, ನೇಮಕವಾದ ಅಧಿಕಾರಿಗಳು, ಬೋಧಕರು ಮತ್ತು ಇತರ ವ್ಯಕ್ತಿಗಳ ಸೇವಾಷರತ್ತುಗಳು ಸಂದಾಯಮಾಡಬೇಕಾದ ಪರಿಶ್ರಮಧನ ಮತ್ತು ಪ್ರಯಾಣ ಮತ್ತು ದಿನ ಭತ್ಯೆಗಳೂ ಸೇರಿದಂತೆ ಭತ್ಯೆಗಳು;

(10) ಪರೀಕ್ಷಾ ನಿಕಾಯಗಳು ಮತ್ತು ಪರೀಕ್ಷಕರ ನೇಮಕಾತಿಯ ಷರತ್ತುಗಳು ಮತ್ತು ವಿಧಾನ;

(11) ವಿಶ್ವವಿದ್ಯಾಲಯವು ಸ್ಥಾಪಿಸಿದ ಅಥವಾ ನಿರ್ವಹಿಸುವ ಕಾಲೇಜುಗಳು, ಕೇಂದ್ರಗಳು, ವಿಭಾಗಗಳು, ಇಲಾಖೆಗಳು, ವಲಯ ಮತ್ತು ಪ್ರಾದೇಶಿಕ ಸಂಸ್ಥೆಗಳು, ಕೃಷಿ ವಿಜ್ಞಾನ ಕೇಂದ್ರಗಳು ಮತ್ತು ಇತರ ಸಂಸ್ಥೆಗಳ ನಿರ್ವಹಣೆ;

(12) ವಿಶ್ವವಿದ್ಯಾಲಯದ ಅಧಿಕಾರಿಗಳು, ಬೋಧಕರು ಮತ್ತು ಇತರ ಸಿಬ್ಬಂದಿಗಳ ನೇಮಕಾತಿಗಾಗಿ ಆಯ್ಕೆ ಸಮಿತಿಗಳ ರಚನೆ;

(13) ಈ ಅಧಿನಿಯಮದ ಮೂಲಕ ಶಾಸನಗಳ ಉಪಬಂಧ ಕಲ್ಪಿಸಬೇಕಾದ ಇತರ ಎಲ್ಲಾ ವಿಷಯಗಳು.

**53. ಶಾಸನಗಳ ರಚನೆ.–** (1) ಇನ್ನು ಮುಂದೆ ಉಪಬಂಧಿಸಿದ ರೀತಿಯಲ್ಲಿ ಮಂಡಳಿಯು ಯಾವುದೇ ಶಾಸನವನ್ನು ರಚಿಸಬಹುದು, ತಿದ್ದುಪಡಿ ಮಾಡಬಹುದು ಅಥವಾ ನಿರಸನಗೊಳಿಸಬಹುದು.

(2) ಈ ಅಧಿನಿಯಮದಡಿಯಲ್ಲಿ ರಚಿಸಿದ ಶಾಸನಗಳನ್ನು ಮಂಡಳಿಯು ಪ್ರಸ್ತಾಪಿಸತಕ್ಕದ್ದು ಮತ್ತು ಸರ್ಕಾರದ ಮೂಲಕ ಕುಲಾಧಿಪತಿಯವರಿಗೆ ಅವರ ಅನುಮತಿ ಕೋರಿ ಸಲ್ಲಿಸತಕ್ಕದ್ದು ಮತ್ತು ಕುಲಾಧಿಪತಿಯವರ ಅನುಮತಿ ಪಡೆದ ಮತ್ತು ಸರ್ಕಾರಿ ರಾಜ್ಯಪತ್ರದಲ್ಲಿ ಅದು ಪ್ರಕಟಣೆಯಾದ ತರುವಾಯ ಮಾತ್ರವೇ ಇದು ಜಾರಿಗೆ ಬರತಕ್ಕದ್ದು.

(3) ಈ ಅಧಿನಿಯಮದಡಿಯಲ್ಲಿ ರಚಿಸಲಾದ ಎಲ್ಲಾ ಶಾಸನಗಳು ಸರ್ಕಾರಿ ರಾಜ್ಯಪತ್ರದಲ್ಲಿ ಪ್ರಕಟಣೆಗೊಳ್ಳತಕ್ಕದ್ದು.

**54. ವಿನಿಯಮಗಳು.–** (1) ವಿಶ್ವವಿದ್ಯಾಲಯದ ಪ್ರಾಧಿಕಾರಗಳು ಈ ಅಧಿನಿಯಮಕ್ಕೆ ಮತ್ತು ಶಾಸನಗಳಿಗೆ ಸುಸಂಗತವಾದ ವಿನಿಯಮಗಳನ್ನು,–

(ಎ) ತಮ್ಮ ಸಭೆಗಳ ಕಾರ್ಯ ವಿಧಾನ ಮತ್ತು ಕೋರಂಗಾಗಿ ಅಗತ್ಯವಿರುವ ಸದಸ್ಯರ ಸಂಖ್ಯೆ ನಿಗದಿಪಡಿಸುವುದಕ್ಕಾಗಿ:

(ಬಿ) ಈ ಅಧಿನಿಯಮ ಅಥವಾ ಶಾಸನಗಳ ಪ್ರಕಾರ ವಿನಿಯಮಗಳ ಮೂಲಕ ನಿಯಂತ್ರಿಸಬೇಕಾದ ವಿಷಯಗಳನ್ನು ಉಪಬಂಧಿಸುವುದಕ್ಕಾಗಿ:

(ಸಿ) ಈ ಅಧಿನಿಯಮ ಮತ್ತು ಶಾಸನಗಳಿಂದ ಉಪಬಂಧಿಸಿರದ ಮತ್ತು ಪ್ರಾಧಿಕಾರಗಳಿಗೇ ಪೂರ್ಣವಾಗಿ ಸಂಬಂಧಪಟ್ಟ ಯಾವುದೇ ಇತರ ವಿಷಯಗಳಿಗೆ ಉಪಬಂಧ ಕಲ್ಪಿಸುವುದಕ್ಕಾಗಿ:

- ರಚಿಸಬಹುದು.

(2) ವಿಶ್ವವಿದ್ಯಾಲಯದ ಯಾವುದೇ ಪ್ರಾಧಿಕಾರವು ರಚಿಸಿದ ವಿನಿಯಮಗಳು, ಈ ಬಗ್ಗೆ ಮಂಡಳಿಯು ಕಾಲದಿಂದ ಕಾಲಕ್ಕೆ ನೀಡುವ ನಿರ್ದೇಶನಗಳಿಗೆ ಒಳಪಟ್ಟಿರತಕ್ಕದ್ದು.

(3) ವಿದ್ಯಾವಿಷಯಕ ಪರಿಷತ್ತು, ಈ ಅಧಿನಿಯಮದ ಮತ್ತು ಶಾಸನಗಳ ಉಪಬಂಧಗಳಿಗೊಳಪಟ್ಟು, ವ್ಯಾಸಂಗ ಕ್ರಮಗಳು, ಪರೀಕ್ಷಾ ಪದ್ಧತಿ, ಶೈಕ್ಷಣಿಕ ಕರ್ತವ್ಯಗಳ ಕಾಲಾನುಕ್ರಮ, ವಿಶ್ವವಿದ್ಯಾಲಯದ ಪದವಿಗಳು ಮತ್ತು ಡಿಪ್ಲೊಮಾಗಳನ್ನು ನೀಡುವುದು ಮತ್ತು ಶಿಕ್ಷಣ ನಿರ್ದೇಶಕರಿಗೆ ಸಂಬಂಧಿಸಿದ ಇತರ ವಿಷಯಗಳ ಬಗ್ಗೆ ಉಪಬಂಧ ಕಲ್ಪಿಸುವುದಕ್ಕಾಗಿ ವಿನಿಯಮಗಳನ್ನು ರಚಿಸತಕ್ಕದ್ದು.

(4) ವಿದ್ಯಾವಿಷಯಕ ಪರಿಷತ್ತು, ಹಿಂದಿನ ಉಪಪ್ರಕರಣಗಳ ಉಪಬಂಧಗಳ ಸಾಮಾನ್ಯಾನ್ವಯಕ್ಕೆ ಧಕ್ಕೆಯಾಗದಂತೆ, ವಿನಿಯಮಗಳನ್ನು,–

(ಎ) ಪದವಿಗಳು ಮತ್ತು ಡಿಪ್ಲೊಮಾಗಳನ್ನು ಪ್ರದಾನಮಾಡಲು ಘಟಕೋತ್ಸವಗಳನ್ನು ನಡೆಸುವುದಕ್ಕಾಗಿ;

(ಬಿ) ಗೌರವ ಪದವಿಗಳು, ವಿದ್ಯಾ ಪ್ರಶಸ್ತಿಗಳನ್ನು ಪ್ರದಾನ ಮಾಡುವುದು, ಪದವಿ ಹಿಂಪಡೆಯುವುದಕ್ಕಾಗಿ;

(ಸಿ) ವಿಶ್ವವಿದ್ಯಾಲಯವು ನಿರ್ವಹಿಸುತ್ತಿರುವ ವಿದ್ಯಾರ್ಥಿನಿಲಯಗಳ ಸ್ಥಾಪನೆ ಮತ್ತು ರದ್ಧತಿಗಾಗಿ;

(ಡಿ) ಫೆಲೋಶಿಪ್‌ಗಳು, ಸ್ಕಾಲರ್‌ಶಿಪ್‌ಗಳು, ಸ್ಟೈಪೆಂಡುಗಳು, ಶಿಷ್ಯವೇತನಗಳು, ಪದಕಗಳು ಮತ್ತು ಪ್ರಶಸ್ತಿಗಳನ್ನು ಸ್ಥಾಪಿಸುವುದು ಮತ್ತು ಅವುಗಳನ್ನು ನೀಡುವ ಬಗ್ಗೆ ಷರತ್ತುಗಳಿಗಾಗಿ;

(ಇ) ವಿಶ್ವವಿದ್ಯಾಲಯದ ವಿದ್ಯಾರ್ಥಿಗಳ ಪ್ರವೇಶ ಮತ್ತು ಅದರ ಪಟ್ಟಿಯಲ್ಲಿ ಹೆಸರು ಸೇರಿಸುವ ಮತ್ತು ವಿದ್ಯಾರ್ಥಿಗಳಾಗಿ ಮುಂದುವರಿಸುವ ಮತ್ತು ಪಟ್ಟಿಯಿಂದ ವಿದ್ಯಾರ್ಥಿಗಳನ್ನು ಬಿಟ್ಟುಬಿಡುವ ಬಗ್ಗೆ ಷರತ್ತುಗಳು ಮತ್ತು ಪ್ರಕ್ರಿಯೆಗಾಗಿ;

(ಎಫ್) ವಿಶ್ವವಿದ್ಯಾಲಯವು ಚಾರ್ಜು ಮಾಡಬಹುದಾದ ಶುಲ್ಕಕ್ಕಾಗಿ;

(ಜಿ) ವಿಶ್ವವಿದ್ಯಾಲಯದ ಎಲ್ಲಾ ಪದವಿಗಳು, ಡಿಪ್ಲೊಮಾಗಳು ಮತ್ತು ಪ್ರಮಾಣ ಪತ್ರಗಳಿಗಾಗಿ ರಚಿಸಲಾಗುವ ವ್ಯಾಸಂಗಕ್ರಮಗಳಿಗೆ ;

(ಎಚ್) ವಿಶ್ವವಿದ್ಯಾಲಯದ ಪದವಿಗಳು, ಡಿಪ್ಲೊಮಾಗಳು ಅಥವಾ ಇತರ ವ್ಯಾಸಂಗ ಕ್ರಮಗಳು ಮತ್ತು ಪರೀಕ್ಷೆಗಳಿಗೆ ವಿದ್ಯಾರ್ಥಿಗಳು ಪ್ರವೇಶಿಸಲು ಷರತ್ತುಗಳು ಹಾಗೂ ಪದವಿಗಳು ಮತ್ತು ಡಿಪ್ಲೊಮಾಗಳನ್ನು ಪಡೆಯುವುದಕ್ಕಾಗಿ ಅಗತ್ಯವಾದ ಅರ್ಹತೆಗಾಗಿ;

(ಐ) ಪದವಿಗಳು ಮತ್ತು ಇತರ ವಿದ್ಯಾ ಪ್ರಶಸ್ತಿಗಳನ್ನು ಪ್ರದಾನ ಮಾಡುವ ಷರತ್ತುಗಳಿಗಾಗಿ;

(ಜೆ) ವಿಶ್ವವಿದ್ಯಾಲಯದ ವಿದ್ಯಾರ್ಥಿಗಳಲ್ಲಿ ಶಿಸ್ತನ್ನು ಕಾಪಾಡುವುದಕ್ಕಾಗಿ;

(ಕೆ) ವಿದ್ಯಾರ್ಥಿನಿಯರ ವಸತಿ, ಶಿಸ್ತು ಮತ್ತು ಅವರಿಗೆ ಬೋಧನೆಗೆ ಯಾವುದಾದರೂ ವಿಶೇಷ ಏರ್ಪಾಡುಗಳನ್ನು ಮಾಡುವುದಕ್ಕಾಗಿ ಮತ್ತು ವಿದ್ಯಾರ್ಥಿನಿಯರಿಗಾಗಿಯೇ ವಿಶೇಷ ವ್ಯಾಸಂಗ ಕ್ರಮಗಳಿಗೆ ಉಪಬಂಧಕಲ್ಪಿಸುವುದಕ್ಕಾಗಿ;

(ಎಲ್) ವಿಶ್ವವಿದ್ಯಾಲಯದ ವಿದ್ಯಾರ್ಥಿಗಳ ನಿವಾಸದ ಷರತ್ತುಗಳು ಮತ್ತು ವಿದ್ಯಾರ್ಥಿನಿಲಯಗಳ ನಿವಾಸಿಸುವುದಕ್ಕಾಗಿ ಶುಲ್ಕವನ್ನು ವಿಧಿಸುವುದಕ್ಕಾಗಿ;

(ಎಂ) ವಿಶ್ವವಿದ್ಯಾಲಯವು ನಿರ್ವಹಿಸುತ್ತಿರುವ ವಿದ್ಯಾರ್ಥಿನಿಲಯಗಳ ಮಾನ್ಯತೆ ಮತ್ತು ನಿರ್ವಹಣೆಗಾಗಿ;

– ರಚಿಸತಕ್ಕದ್ದು.

## ಅಧ್ಯಾಯ – IX

## ಸಂಕೀರ್ಣ

**55. ಕಾರ್ಯಗಳ ಹಾಗೂ ವ್ಯವಹರಣೆಗಳ ಸಿಂಧುತ್ವದ ಉಳಿಸುವಿಕೆಗಳು.–** (1) ಈ ಅಧಿನಿಯಮದ ಅಡಿಯಲ್ಲಿ ಮಾಡಿದ ಯಾವುದೇ ಕಾರ್ಯ ಅಥವಾ ಕೈಗೊಂಡ ವ್ಯವಹರಣೆಗಳನ್ನು ಕೇವಲ ಈ ಮುಂದಿನ ಕಾರಣಗಳಿಗಾಗಿ ಪ್ರಶ್ನಿಸತಕ್ಕದ್ದಲ್ಲ, ಎಂದರೆ:–

(i) ಯಾವುದೇ ಪ್ರಾಧಿಕಾರದ ರಚನೆಯಲ್ಲಿ ಯಾವುದೇ ಖಾಲಿಸ್ಥಾನ ಅಥವಾ ದೋಷ ಇರುವುದು, ಅಥವಾ

(ii) ಪ್ರಕರಣದ ಗುಣಾಂಶಗಳಿಗೆ ಬಾಧೆ ಉಂಟುಮಾಡದ ಆ ಕಾರ್ಯ ಅಥವಾ ವ್ಯವಹರಣೆಗಳಲ್ಲಿರುವ ಯಾವುದೇ ದೋಷ ಅಥವಾ ಕ್ರಮಬಾಹಿರತೆ.

**56. ವಿದ್ಯಾರ್ಥಿಗಳ ವಾಸಸ್ಥಳ.–** ವಿಶ್ವವಿದ್ಯಾಲಯವು ನಿರ್ವಹಿಸುವ ಅಥವಾ ಕುಲಪತಿಯವರು ಅನುಮೋದಿಸಿದ ವಾಸಸ್ಥಳದಲ್ಲಿ ವಿದ್ಯಾರ್ಥಿಗಳು ನಿಯಮಿಸಲಾದಂಥ ಷರತ್ತುಗಳಗೊಳಪಟ್ಟು ವಾಸಿಸತಕ್ಕದ್ದು. ಆದಾಗ್ಯೂ, ವಿಶ್ವವಿದ್ಯಾಲಯದಲ್ಲಿ ಅಂಥ ವಾಸಸ್ಥಳವು ದೊರಕದಿದ್ದಲ್ಲಿ ವಿಶ್ವವಿದ್ಯಾಲಯದ ಕುಲಪತಿಯವರು ಅಥವಾ ಅಧಿಕೃತರಾದ ಒಬ್ಬ ಅಧಿಕಾರಿಯು ವಿದ್ಯಾರ್ಥಿಗಳು ತಮ್ಮ ತಂದೆ ತಾಯಿಯವರೊಂದಿಗೆ ಅಥವಾ ಖಾಸಗಿ ವಾಸಸ್ಥಳಗಳಲ್ಲಿ ವಾಸಿಸಲು ಅನುಮತಿಸಬಹುದು.

**57. ವಾರ್ಷಿಕ ವರದಿ.–** ವಿಶ್ವವಿದ್ಯಾಲಯದ ವಾರ್ಷಿಕ ವರದಿಯನ್ನು ಕುಲಸಚಿವರು ಅಥವಾ ಕುಲಪತಿಯವರ ನಿರ್ದೇಶನಗಳಡಿಯಲ್ಲಿ ಇತರ ಯಾವೊಬ್ಬ ಅಧಿಕಾರಿಯು ಹಣಕಾಸು ವರ್ಷದ ಮುಕ್ತಾಯದಿಂದ ಆರು ತಿಂಗಳೊಳಗೆ ತಯಾರಿಸತಕ್ಕದ್ದು ಮತ್ತು ಇದನ್ನು ಪರಿಗಣನೆಗೆ ತೆಗೆದುಕೊಳ್ಳುವ ಸಭೆಯು ನಡೆಯುವುದಕ್ಕಿಂತ ಒಂದು ತಿಂಗಳ ಮೊದಲು ಮಂಡಳಿಯ ಸದಸ್ಯರುಗಳಿಗೆ ಪರಿಚಲನೆ ಮಾಡತಕ್ಕದ್ದು. ಮಂಡಳಿಯು ವಾರ್ಷಿಕ ವರದಿಯ ಪರಿಗಣನೆಯ ತರುವಾಯ ಅದರ ಪ್ರತಿಯನ್ನು ಸರ್ಕಾರದ ಮುಂದಿಡತಕ್ಕದ್ದು, ಅದನ್ನು ವಿಧಾನಮಂಡಲದ ಎರಡೂ ಸದನಗಳ ಮುಂದೆ ಮಂಡಿಸತಕ್ಕದ್ದು.

**58. ಅಧಿಕಾರಗಳ ಪ್ರತ್ಯಾಯೋಜನೆ.–** ಕುಲಪತಿಯವರು, ಆದೇಶದ ಮೂಲಕ, ಈ ಅಧಿನಿಯಮ ಅಥವಾ ಅದರಡಿಯಲ್ಲಿ ರಚಿಸಲಾಗಿರುವ ಶಾಸನಗಳಡಿಯಲ್ಲಿ ತಾನು ಚಲಾಯಿಸಬಹುದಾದ ಅಧಿಕಾರಗಳನ್ನು ಕುಲಪತಿಯವರು ಸರಿಯಾಗಿದೆಯೆಂದು ಭಾವಿಸಬಹುದಾದಂಥ ಷರತ್ತುಗಳು ಮತ್ತು ಮಿತಿಗಳಿಗೊಳಪಟ್ಟು ಯಾವುದೇ ಪ್ರಾಧಿಕಾರ, ಅಧಿಕಾರಿ, ಕಾಲೇಜುಗಳ ಮುಖ್ಯಸ್ಥರು, ಇಲಾಖೆಗಳು, ಸಂಸ್ಥೆಗಳು ಅಥವಾ ಘಟಕಗಳು ಅಥವಾ ಕಚೇರಿಗೆ ಪ್ರತ್ಯಾಯೋಜಿಸಬಹುದು.

**59. ಅಡ್–ಹಾಕ್ ಸಮಿತಿಗಳ ರಚನೆ.–** ಈ ಅಧಿನಿಯಮದಲ್ಲಿ ಏನೇ ಇದ್ದರೂ ಮತ್ತು ಈ ಅಧಿನಿಯಮ ಅಥವಾ ಶಾಸನಗಳು ಅಥವಾ ವಿನಿಯಮಗಳ ಉಪಬಂಧಗಳನ್ವಯ ವಿಶ್ವವಿದ್ಯಾಲಯಗಳ ಪ್ರಾಧಿಕಾರಗಳು ಅಥವಾ ನಿಕಾಯಗಳು ರಚನೆಯಾಗುವವರೆಗೆ ಕುಲಾಧಿಪತಿಯವರ ಪೂರ್ವಾನುಮೋದನೆಗೊಳಪಟ್ಟು ಕುಲಪತಿಯವರು, ಈ ಅಧಿನಿಯಮ ಅಥವಾ ಶಾಸನಗಳು ಅಥವಾ ವಿನಿಯಮಗಳಡಿಯಲ್ಲಿನ ಅಂಥ ಪ್ರಾಧಿಕಾರಗಳ ಅಥವಾ ನಿಕಾಯಗಳ ಯಾವುದೇ ಅಧಿಕಾರಗಳನ್ನು ಚಲಾಯಿಸಲು, ಪ್ರಕಾರ್ಯಗಳನ್ನು ನಿರ್ವಹಿಸಲು ಮತ್ತು ಕರ್ತವ್ಯಗಳನ್ನು ಮಾಡಲು ತಾತ್ಕಾಲಿಕವಾಗಿ ಅಡ್–ಹಾಕ್ ಸಮಿತಿಗಳನ್ನು ನೇಮಿಸಬಹುದು.

**60. ಪ್ರಾಧಿಕಾರಗಳು ಅಥವಾ ನಿಕಾಯಗಳ ಸ್ಥಾಪನೆಯಲ್ಲಿ ವಿವಾದಗಳು.–** ವಿಶ್ವವಿದ್ಯಾಲಯದ ಯಾವುದೇ ಪ್ರಾಧಿಕಾರ ಅಥವಾ ಇತರ ನಿಕಾಯದ ಸದಸ್ಯನಾಗಿ ನೇಮಕಾತಿ ಹೊಂದಲು ಅಥವಾ ಸದಸ್ಯನಾಗಲು ಯಾವುದೇ ವ್ಯಕ್ತಿಯ ಅರ್ಹತೆಯ ಬಗ್ಗೆ ಯಾವುದೇ ಪ್ರಶ್ನೆಯು ಉದ್ಭವಿಸಿದಲ್ಲಿ, ಆ ವಿಷಯವನ್ನು ಕುಲಾಧಿಪತಿಯವರಿಗೆ ತೀರ್ಮಾನಕ್ಕಾಗಿ ಕಳುಹಿಸತಕ್ಕದ್ದು ಮತ್ತು ಅದರ ಬಗ್ಗೆ ಅವರ ತೀರ್ಮಾನವೇ ಅಂತಿಮವಾಗಿರತಕ್ಕದ್ದು:

ಪರಂತು, ಯಾವುದೇ ಅಂಥ ತೀರ್ಮಾನವನ್ನು ತೆಗೆದುಕೊಳ್ಳುವ ಮುಂಚೆ, ಕುಲಾಧಿಪತಿಯವರು ಅದರಿಂದ ಬಾಧಿತನಾಗುವ ವ್ಯಕ್ತಿಗೆ ತನ್ನ ಅಹವಾಲು ಹೇಳಿಕೊಳ್ಳಲು ಯುಕ್ತ ಅವಕಾಶವನ್ನು ನೀಡತಕ್ಕದ್ದು.

**61. ವಿಶ್ವವಿದ್ಯಾಲಯದ ಪುನರವಲೋಕನ ಆಯೋಗದ ನೇಮಕ.–** (1) ಕುಲಾಧಿಪತಿಯು, ಪ್ರತಿ ಐದು ವರ್ಷಗಳಿಗೊಮ್ಮೆ ವಿಶ್ವವಿದ್ಯಾಲಯದ ಕಾರ್ಯ ನಿರ್ವಹಣೆಯನ್ನು ಪುನರವಲೋಕಿಸುವುದಕ್ಕಾಗಿ ಮತ್ತು ಶಿಫಾರಸುಗಳನ್ನು ಮಾಡುವುದಕ್ಕಾಗಿ ಒಂದು ಆಯೋಗವನ್ನು ರಚಿಸತಕ್ಕದ್ದು.

(2) ಆಯೋಗವು, ಮೂವರಿಗೆ ಕಡಿಮೆಯಿಲ್ಲದಂತೆ, ಕುಲಾಧಿಪತಿಯವರು ರಾಜ್ಯ ಸರ್ಕಾರದೊಂದಿಗೆ ಸಮಾಲೋಚಿಸಿ ನೇಮಿಸಿದ ತೋಟಗಾರಿಕೆ ಕ್ಷೇತ್ರದಲ್ಲಿ ಪ್ರಸಿದ್ಧ ಶಿಕ್ಷಣ ತಜ್ಞರನ್ನು ಒಳಗೊಂಡಿರತಕ್ಕದ್ದು. ಅವರಲ್ಲಿ ಒಬ್ಬರು ಅಧ್ಯಕ್ಷರಾಗತಕ್ಕದ್ದು.

(3) ಸದಸ್ಯರ ನೇಮಕಾತಿಯ ನಿಬಂಧನೆಗಳು ಮತ್ತು ಷರತ್ತುಗಳು, ಕುಲಾಧಿಪತಿಯವರು ನಿರ್ಧರಿಸಬಹುದಾದಂಥವುಗಳು ಆಗಿರತಕ್ಕದ್ದು.

(4) ಆಯೋಗವು ತಾನು ಸೂಕ್ತವೆಂದು ಭಾವಿಸುವಂಥ ವಿಚಾರಣೆಯನ್ನು ನಡೆಸಿದ ತರುವಾಯ ಕುಲಾಧಿಪತಿಯವರಿಗೆ ಮತ್ತು ರಾಜ್ಯ ಸರ್ಕಾರಕ್ಕೆ ಶಿಫಾರಸುಗಳನ್ನು ಮಾಡತಕ್ಕದ್ದು.

(5) ಕುಲಾಧಿಪತಿಯವರು, ರಾಜ್ಯ ಸರ್ಕಾರದೊಂದಿಗೆ ಸಮಾಲೋಚಿಸಿ, ಶಿಫಾರಸ್ಸಿನ ಮೇಲೆ ತಾನು ಸೂಕ್ತವೆಂದು ಭಾವಿಸುವಂಥ ಕ್ರಮವನ್ನು ಕೈಗೊಳ್ಳಬಹುದು.

(6) ರಾಜ್ಯ ಸರ್ಕಾರವು, ಕೈಗೊಂಡ ಕ್ರಮವನ್ನು ವಿವರಿಸುವ ಜ್ಞಾಪನ ಪತ್ರದೊಡನೆ ಶಿಫಾರಸುಗಳ ಒಂದು ಪ್ರತಿಯನ್ನು ರಾಜ್ಯ ವಿಧಾನ ಮಂಡಲದ ಉಭಯ ಸದನಗಳ ಮುಂದೆ ಮಂಡಿಸತಕ್ಕದ್ದು.

**62. ವಿಶ್ವವಿದ್ಯಾಲಯದ ವ್ಯವಹರಣೆಗಳ ಸಂಬಂಧದಲ್ಲಿ ಹುದ್ದೆಗಳಿಗೆ ನೇಮಕಾತಿ.–** (1) ಈ ಅಧಿನಿಯಮದ ಮತ್ತು ಶಾಸನಗಳ ಉಪಬಂಧಗಳಿಗೊಳಪಟ್ಟು ವಿಶ್ವವಿದ್ಯಾಲಯದ ವ್ಯವಹರಣೆಗಳಿಗೆ ಸಂಬಂಧಿಸಿದ ಹುದ್ದೆಗಳಿಗೆ ನೇಮಕಾತಿ ಮತ್ತು ಸೇವೆಗಳನ್ನು ನಿಯಮಿಸಲಾದಂತೆ ಮಂಡಳಿಯ ಪೂರ್ವಾನುಮತಿಯೊಡನೆ ಕುಲಪತಿಯವರು ಮಾಡಬಹುದು:

ಪರಂತು, ಬೋಧಕ ಸಿಬ್ಬಂದಿಯ ಸಹಾಯಕ ಪ್ರಾಧ್ಯಾಪಕರ ಮತ್ತು ಬೋಧಕೇತರ ಸಿಬ್ಬಂದಿಯ 'ಎ' ವೃಂದದ ಸಿಬ್ಬಂದಿಗಳ ವೇತನ ಶ್ರೇಣಿಯದ್ದಕ್ಕಿಂತ ಕಡಿಮೆ ವೇತನಶ್ರೇಣಿಯನ್ನು ಹೊಂದಿರುವ ಹುದ್ದೆಗಳ ನೇಮಕಾತಿಯ ಸಂಬಂಧದಲ್ಲಿ ಮಂಡಳಿಯ ಅಂಥ ಅನುಮೋದನೆಯ ಅವಶ್ಯಕತೆ ಇರತಕ್ಕದ್ದಲ್ಲ.

(2) ಈ ಅಧಿನಿಯಮದಲ್ಲಿ ಏನೇ ಇದ್ದರೂ ಮತ್ತು ಶಾಸನಗಳು ರಚನೆಯಾಗುವ ಅಥವಾ ವಿಶ್ವವಿದ್ಯಾಲಯದ ಪ್ರಾಧಿಕಾರಗಳು ಸ್ಥಾಪನೆಯಾಗುವವರೆಗಿನ ಅವಧಿಗೆ, ವಿಶ್ವವಿದ್ಯಾಲಯದ ವ್ಯವಹರಣೆಗಳ ಸಂಬಂಧದಲ್ಲಿ ಹುದ್ದೆಗಳು ಮತ್ತು ಸೇವೆಗಳಿಗೆ ನೇಮಕಾತಿಗಳನ್ನು, ಕುಲಾಧಿಪತಿಯವರು ಅನುಮೋದಿಸಬಹುದಾದಂಥ ನಿಬಂಧನೆಗಳು ಮತ್ತು ಷರತ್ತುಗಳ ಮೇಲೆ ಕುಲಪತಿಯವರು ಮಾಡಬಹುದು.

**63. ತಾತ್ಕಾಲಿಕ ಉಪಬಂಧಗಳು.–** ಈ ಅಧಿನಿಯಮದಲ್ಲಿ ಏನೇ ಇದ್ದರೂ, ಕುಲಪತಿಯು ಕುಲಾಧಿಪತಿಯವರ ಪೂರ್ವಾನುಮೋದನೆಯೊಂದಿಗೆ ಈ ಅಧಿನಿಯಮದ ಪ್ರಾರಂಭದಿಂದ ಒಂದು ವರ್ಷದ ಅವಧಿಗಾಗಿ ಈ ಅಧಿನಿಯಮದ ಉಪಬಂಧಗಳನ್ನು ಕಾರ್ಯಗತಗೊಳಿಸುವ ಉದ್ದೇಶಕ್ಕಾಗಿ ವಿಶ್ವವಿದ್ಯಾಲಯದ ಎಲ್ಲಾ ಅಥವಾ ಯಾವುದೇ ಪ್ರಕಾರ್ಯಗಳನ್ನು ನಿರ್ವಹಿಸಬಹುದು ಮತ್ತು ಆ ಉದ್ದೇಶಕ್ಕಾಗಿ ಈ ಅಧಿನಿಯಮದ ಮೂಲಕ ವಿಶ್ವವಿದ್ಯಾಲಯದ ಯಾವುದೇ ಪ್ರಾಧಿಕಾರವು ಅಥವಾ ನಿಕಾಯವು ಚಲಾಯಿಸಬೇಕಾದ ಯಾವುವೇ ಅಧಿಕಾರಗಳನ್ನು ಅಥವಾ ನಿರ್ವಹಿಸಬೇಕಾದ ಯಾವುವೇ ಕರ್ತವ್ಯಗಳನ್ನು ಈ ಅಧಿನಿಯಮದಲ್ಲಿ ಅಥವಾ ಶಾಸನಗಳಲ್ಲಿ ಅಥವಾ ವಿನಿಯಮಗಳಲ್ಲಿ ಉಪಬಂಧಿಸಿದಂತೆ ಅಂಥ ಪ್ರಾಧಿಕಾರವು ಅಥವಾ ನಿಕಾಯವು ಅಸ್ತಿತ್ವಕ್ಕೆ ಬರುವವರೆಗೆ ಚಲಾಯಿಸಬಹುದು ಅಥವಾ ನೆರವೇರಿಸಬಹುದು.

**64. ಸದ್ಭಾವನೆಯಿಂದ ಕೈಗೊಂಡ ಕ್ರಮದ ರಕ್ಷಣೆ.–** ಈ ಅಧಿನಿಯಮದ ಅಥವಾ ಅದರಡಿಯಲ್ಲಿ ರಚಿಸಿದ ಶಾಸನಗಳು ಅಥವಾ ವಿನಿಯಮಗಳಿಗೆ ಅನುಸಾರವಾಗಿ ಸದ್ಭಾವನೆಯಿಂದ ಮಾಡಿದ ಅಥವಾ ಮಾಡಲು ಉದ್ದೇಶಿಸಿದ ಯಾವುದೇ ಕಾರ್ಯಕ್ಕಾಗಿ ವಿಶ್ವವಿದ್ಯಾಲಯದ ಅಥವಾ ಅದರ ಪ್ರಾಧಿಕಾರಗಳ, ನಿಕಾಯಗಳ ಅಥವಾ ಅಧಿಕಾರಿಗಳ ವಿರುದ್ಧ ಯಾವುದೇ ದಾವೆ ಅಥವಾ ಇತರ ಕಾನೂನು ವ್ಯವಹರಣೆ ನಡೆಸಲು ಅವಕಾಶ ಇರತಕ್ಕದ್ದಲ್ಲ ಮತ್ತು ಅವರಿಂದ ಯಾವುದೇ ನಷ್ಟ ಪರಿಹಾರಗಳನ್ನು ಕ್ಲೈಮ್ ಮಾಡತಕ್ಕದ್ದಲ್ಲ.

**65. ತೊಂದರೆಗಳ ನಿವಾರಣೆಗೆ ಅಧಿಕಾರ.– (1)** ವಿಶ್ವವಿದ್ಯಾಲಯದ ಯಾವುದೇ ಪ್ರಾಧಿಕಾರದ ಅಥವಾ ನಿಕಾಯದ ಮೊದಲ ರಚನೆಯ ಅಥವಾ ಪುನಾರಚನೆಯ ಸಂಬಂಧದಲ್ಲಿ ಅಥವಾ ಈ ಅಧಿನಿಯಮದ ಉಪಬಂಧಗಳನ್ನು ಜಾರಿಗೊಳಿಸುವ ಸಂಬಂಧದಲ್ಲಿ ಯಾವುದೇ ತೊಂದರೆ ಉದ್ಭವಿಸಿದರೆ, ರಾಜ್ಯ ಸರ್ಕಾರವು ಅಧಿಸೂಚನೆಯ ಮೂಲಕ ತೊಂದರೆಯ ನಿವಾರಣೆಗಾಗಿ ಅವಶ್ಯಕ ಹಾಗೂ ಸಮಂಜಸವೆಂದು ತನಗೆ ಕಂಡುಬರುವಂಥ ಹಾಗೂ ಈ ಅಧಿನಿಯಮದ ಉಪಬಂಧಗಳಿಗೆ ಅಸಂಗತವಲ್ಲದ ಉಪಬಂಧಗಳನ್ನು ರಚಿಸಬಹುದು:

ಪರಂತು, ಈ ಅಧಿನಿಯಮದ ಪ್ರಾರಂಭದ ದಿನಾಂಕದಿಂದ ಐದು ವರ್ಷಗಳು ಮುಕ್ತಾಯವಾದ ತರುವಾಯ ಅಂಥ ಯಾವುದೇ ಅಧಿಸೂಚನೆಯನ್ನು ಹೊರಡಿಸತಕ್ಕದ್ದಲ್ಲ.

(2) (1)ನೇ ಉಪಪ್ರಕರಣದ ಅಡಿಯಲ್ಲಿ ಹೊರಡಿಸಲಾದ ಪ್ರತಿಯೊಂದು ಅಧಿಸೂಚನೆಯನ್ನು ಮತ್ತು 8ನೇ ಉಪ–ಪ್ರಕರಣದಡಿಯಲ್ಲಿ ಹೊರಡಿಸಲಾದ ಪ್ರತಿಯೊಂದು ಆದೇಶವನ್ನು ಅದನ್ನು ಹೊರಡಿಸಿದ ತರುವಾಯ ಆದಷ್ಟು ಬೇಗನೆ ರಾಜ್ಯ ವಿಧಾನಮಂಡಲದ ಪ್ರತಿಯೊಂದು ಸದನದ ಮುಂದೆ ಅದು ಅಧಿವೇಶನದಲ್ಲಿರುವಾಗ ಒಂದು ಅಧಿವೇಶನದಲ್ಲಿ ಅಥವಾ ಎರಡು ಅಥವಾ ಹೆಚ್ಚು ನಿರಂತರ ಅಧಿವೇಶನಗಳಲ್ಲಿ ಅಡಕವಾಗಿರಬಹುದಾದ ಒಟ್ಟು ಮೂವತ್ತು ದಿನಗಳ ಅವಧಿಯವರೆಗೆ

ಮಂಡಿಸತಕ್ಕದ್ದು ಮತ್ತು ಸದರಿ ಅವಧಿಯು ಮುಕ್ತಾಯವಾಗುವುದಕ್ಕೆ ಮುಂಚೆ ರಾಜ್ಯ ವಿಧಾನಮಂಡಲದ ಯಾವೊಂದು ಸದನವು ಅಧಿಸೂಚನೆಯಲ್ಲಿ ಯಾವುದೇ ಮಾರ್ಪಾಡು ಮಾಡಿದರೆ, ಅಥವಾ ಆ ಅಧಿಸೂಚನೆಯು ಪರಿಣಾಮಕ್ಕೆ ಬರತಕ್ಕದ್ದಲ್ಲವೆಂದು ನಿರ್ದೇಶಿಸಿದರೆ ಹಾಗೂ ಆ ಮಾರ್ಪಾಡು ಅಥವಾ ನಿರ್ದೇಶನವನ್ನು ಇನ್ನೊಂದು ಸದನವು ಒಪ್ಪಿದರೆ ತದನಂತರ ಅಂಥ ಅಧಿಸೂಚನೆಯು ಸಂದರ್ಭಾನುಸಾರ ಹಾಗೆ ಮಾರ್ಪಾಟಾದ ರೀತಿಯಲ್ಲಿ ಪರಿಣಾಮಕಾರಿಯಾಗತಕ್ಕದ್ದು ಅಥವಾ ಪರಿಣಾಮಕಾರಿಯಾಗತಕ್ಕದ್ದಲ್ಲ. ಆದಾಗ್ಯೂ, ಯಾವುದೇ ಅಂಥ ಮಾರ್ಪಾಡು ಅಥವಾ ರದ್ದತಿಯು ಈ ಅಧಿಸೂಚನೆಯ ಅಡಿಯಲ್ಲಿ ಈ ಮುಂಚೆ ಮಾಡಲಾದ ಯಾವುದೇ ಕಾರ್ಯದ ಮಾನ್ಯತೆಗೆ ಬಾಧೆ ಉಂಟುಮಾಡತಕ್ಕದ್ದಲ್ಲ.

**66. ಕಾನೂನು ವ್ಯವಹರಣೆ.–** ವಿಶ್ವವಿದ್ಯಾಲಯವು ಹೂಡಿದ ಅಥವಾ ಅದರ ವಿರುದ್ಧವಾದ ಎಲ್ಲಾ ದಾವೆಗಳು ಮತ್ತು ಇತರ ಕಾನೂನು ವ್ಯವಹರಣೆಗಳನ್ನು ವಿಶ್ವವಿದ್ಯಾಲಯದ ಪರವಾಗಿ ಕುಲಸಚಿವರು ಅಥವಾ ಕುಲಪತಿಯವರು ಇದರ ಬಗ್ಗೆ ಅಧಿಕಾರ ನೀಡಿದ ಯಾವೊಬ್ಬ ಇತರ ಅಧಿಕಾರಿಯು ಪ್ರಾರಂಭಿಸತಕ್ಕದ್ದು, ಪ್ರಾಸಿಕ್ಯೂಟ್ ಮಾಡತಕ್ಕದ್ದು ಅಥವಾ ಪ್ರತಿರಕ್ಷಿಸತಕ್ಕದ್ದು.

**67. ನಿರಸನ ಮತ್ತು ಉಳಿಸುವಿಕೆಗಳು.–** (1) ತೋಟಗಾರಿಕೆ ವಿಜ್ಞಾನಗಳ ವಿಶ್ವವಿದ್ಯಾಲಯ ಅಧ್ಯಾದೇಶ, 2009ನ್ನು (2009ರ ಕರ್ನಾಟಕ ಅಧ್ಯಾದೇಶ 3) ಈ ಮೂಲಕ ನಿರಸನಗೊಳಿಸಲಾಗಿದೆ.

(2) ಹಾಗೆ ನಿರಸನಗೊಳಿಸಿದ್ದಾಗ್ಯೂ, ಸದರಿ ಅಧ್ಯಾದೇಶದ ಅಡಿಯಲ್ಲಿ ಮಾಡಲಾದ ಯಾವುದೇ ಕಾರ್ಯ ಅಥವಾ ಕೈಗೊಳ್ಳಲಾದ ಯಾವುದೇ ಕ್ರಮವನ್ನು ಈ ಅಧಿನಿಯಮದ ಅಡಿಯಲ್ಲಿ ಮಾಡಲಾಗಿದೆ ಅಥವಾ ಕೈಗೊಳ್ಳಲಾಗಿದೆ ಎಂದು ಭಾವಿಸತಕ್ಕದ್ದು.

**ಅನುಸೂಚಿ**

**(2(31)ನೇ ಪ್ರಕರಣವನ್ನು ನೋಡಿ)**

I. **ಕೃಷಿ ವಿಜ್ಞಾನಗಳ ವಿಶ್ವವಿದ್ಯಾಲಯ, ಬೆಂಗಳೂರು.**

1. ತೋಟಗಾರಿಕೆ ಕಾಲೇಜು, ಮೂಡಿಗೆರೆ
2. ಭತ್ತ ಸಂಶೋಧನೆಯ ಮತ್ತು ಕೃಷಿ ವಿಜ್ಞಾನ ಕೇಂದ್ರದ ಪ್ರದೇಶಗಳನ್ನು ಹೊರತುಪಡಿಸಿ ವಲಯ ಕೃಷಿ ಸಂಶೋಧನಾ ಕೇಂದ್ರ, ಮೂಡಿಗೆರೆ
3. ತೆಂಗು ಸಂಶೋಧನಾ ಕೇಂದ್ರ,, ಅರಸೀಕೆರೆ
4. ಕೃಷಿ ವಿಜ್ಞಾನ ಕೇಂದ್ರ ಪ್ರದೇಶವನ್ನು ಹೊರತುಪಡಿಸಿ ವಲಯ ಕೃಷಿ ಸಂಶೋಧನಾ ಕೇಂದ್ರ, ಹಿರಿಯೂರು
5. ಗೋಡಂಬಿ ಸಂಶೋಧನಾ ಕೇಂದ್ರ, ಉಲ್ಲಾಳ
6. ಅಡಿಕೆ ಸಂಶೋಧನಾ ಕೇಂದ್ರ, ಸೀಬಿನಕೆರೆ ತೋಟಗಾರಿಕೆ ಇಲಾಖೆಯ ಫಾರಂ, ತೀರ್ಥಹಳ್ಳಿ

II. **ಕೃಷಿ ವಿಜ್ಞಾನಗಳ ವಿಶ್ವವಿದ್ಯಾಲಯ, ಧಾರವಾಡ.**

1. ಕಿತ್ತೂರು ರಾಣಿ ಚೆನ್ನಮ್ಮ ತೋಟಗಾರಿಕೆ ಕಾಲೇಜು, ಅರಭಾವಿ
2. ತೋಟಗಾರಿಕೆ ಸಂಶೋಧನಾ ಕೇಂದ್ರ, ಕಣಬರಗಿ
3. ತೋಟಗಾರಿಕೆ ಸಂಶೋಧನಾ ಕೇಂದ್ರ, ಕುಂಬಾಪುರ
4. ತೋಟಗಾರಿಕೆ ಸಂಶೋಧನಾ ಕೇಂದ್ರ, ತಿಡಗುಂಡಿ
5. ಮೆಣಸು ಸಂಶೋಧನಾ ಕೇಂದ್ರ, ಶಿರಸಿ
6. ಮುಸುಕಿನ ಜೋಳ ಬೆಳೆದ ಪ್ರದೇಶವನ್ನು ಹೊರತುಪಡಿಸಿ ಮೆಣಸಿನಕಾಯಿ ಸಂಶೋಧನಾ ಕೇಂದ್ರ, ದೇವಿ ಹೊಸೂರು
7. ಬೀದರ್ ತೋಟಗಾರಿಕೆ ಕಾಲೇಜು, ಹೊಸ ಪ್ರದೇಶವನ್ನು ಸ್ವಾಧೀನ ಪಡಿಸಿಕೊಳ್ಳುವವರೆಗೆ ಮತ್ತು ಮೂಲಭೂತ ಸೌಲಭ್ಯಗಳನ್ನು ಒದಗಿಸಿ ಸ್ಥಾಪಿಸುವವರೆಗೆ ಜನವಾಡ ಸಂಶೋಧನಾ ಕೇಂದ್ರದಲ್ಲಿ ಕಾರ್ಯನಿರ್ವಹಿಸತಕ್ಕದ್ದು.
8. ಬಾಗಲಕೋಟೆ ತೋಟಗಾರಿಕೆ ಕಾಲೇಜು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಜಿ.ಕೆ.ಬೋರೇಗೌಡ**

ಸರ್ಕಾರದ ಕಾರ್ಯದರ್ಶಿ

ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನಾ ಇಲಾಖೆ

**ವಿಶೇಷ ಪತ್ರಿಕೆ**

| ಭಾಗ – IV-A | ಬೆಂಗಳೂರು, ಶನಿವಾರ, ಏಪ್ರಿಲ್ ೩, ೨೦೧೦ (ಚೈತ್ರ ೧೩, ಶಕ ವರ್ಷ ೧೯೩೨) | ನಂ. ೩೩೨ |
|---|---|---|


**ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನಾ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ: ಸಂವ್ಯಶಾಇ 27 ಶಾಸನ 2009, ಬೆಂಗಳೂರು, ದಿನಾಂಕ: 3ನೇ ಏಪ್ರಿಲ್, 2010**

ಕೃಷಿ ವಿಜ್ಞಾನಗಳ ವಿಶ್ವವಿದ್ಯಾಲಯಗಳ ಅಧಿನಿಯಮ, 2009ಕ್ಕೆ 2010ರ ಏಪ್ರಿಲ್ ಒಂದನೇ ದಿನಾಂಕದಂದು ರಾಜ್ಯಪಾಲರ ಒಪ್ಪಿಗೆ ದೊರೆತಿದ್ದು, ಸಾಮಾನ್ಯ ತಿಳುವಳಿಕೆಗಾಗಿ ಇದನ್ನು 2010ರ ಕರ್ನಾಟಕ ಅಧಿನಿಯಮ ಸಂಖ್ಯೆ: 10 ಎಂಬುದಾಗಿ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಿಸಬೇಕೆಂದು ಆದೇಶಿಸಲಾಗಿದೆ.

**2010ರ ಕರ್ನಾಟಕ ಅಧಿನಿಯಮ ಸಂಖ್ಯೆ: 10**

(2010ರ ಏಪ್ರಿಲ್ ಮೂರನೇ ದಿನಾಂಕದಂದು ಕರ್ನಾಟಕ ರಾಜ್ಯ ಪತ್ರದ ವಿಶೇಷ ಸಂಚಿಕೆಯಲ್ಲಿ ಮೊದಲು ಪ್ರಕಟವಾಗಿದೆ.)

**ಕೃಷಿ ವಿಜ್ಞಾನಗಳ ವಿಶ್ವವಿದ್ಯಾಲಯಗಳ ಅಧಿನಿಯಮ, 2009**

(2010ರ ಏಪ್ರಿಲ್ ಒಂದನೇ ದಿನಾಂಕದಂದು ರಾಜ್ಯಪಾಲರ ಅನುಮತಿಯನ್ನು ಪಡೆಯಲಾಗಿದೆ.)

ಕೃಷಿ ವಿಜ್ಞಾನಗಳ ವಿಶ್ವವಿದ್ಯಾಲಯಗಳಿಗೆ ಸಂಬಂಧಿಸಿದಂತೆ ಈಗ ಜಾರಿಯಲ್ಲಿರುವ ಅಧಿನಿಯಮಕ್ಕೆ ಬದಲಾಗಿ ಒಂದು ವ್ಯಾಪಕ ಅಧಿನಿಯಮವನ್ನು ಜಾರಿಗೆ ತರುವುದಕ್ಕಾಗಿ ಒಂದು ಅಧಿನಿಯಮ.

ಕರ್ನಾಟಕ ರಾಜ್ಯದಲ್ಲಿ ಕೃಷಿ ಮತ್ತು ಅದಕ್ಕೆ ಸಂಬಂಧಿಸಿದ ವಿಜ್ಞಾನಗಳ ಅಭಿವೃದ್ಧಿಗೆ ಉಪಬಂಧಕಲ್ಪಿಸುವುದಕ್ಕಾಗಿ ಕೃಷಿ ವಿಜ್ಞಾನಗಳ ವಿಶ್ವವಿದ್ಯಾಲಯಗಳಿಗೆ ಸಂಬಂಧಿಸಿದ ಕಾನೂನುಗಳನ್ನು ಕ್ರೋಢೀಕರಿಸಲು ಮತ್ತು ತಿದ್ದುಪಡಿ ಮಾಡಲು ಈಗ ಜಾರಿಯಲ್ಲಿರುವ ಅಧಿನಿಯಮಕ್ಕೆ ಬದಲಾಗಿ ಒಂದು ವ್ಯಾಪಕ ಅಧಿನಿಯಮವನ್ನು ಜಾರಿಗೆ ತರುವುದು ಯುಕ್ತವಾಗಿರುವುದರಿಂದ ;

ಇದು ಭಾರತ ಗಣರಾಜ್ಯದ ಐವತ್ತೊಂಭತ್ತನೇ ವರ್ಷದಲ್ಲಿ ಕರ್ನಾಟಕ ರಾಜ್ಯ ವಿಧಾನಮಂಡಲದಿಂದ ಈ ಮುಂದಿನಂತೆ ಅಧಿನಿಯಮಿತವಾಗಲಿ:–

**ಅಧ್ಯಾಯ – I**

**ಆರಂಭಿಕ**

**1. ಸಂಕ್ಷಿಪ್ತ ಹೆಸರು ಮತ್ತು ಪ್ರಾರಂಭ.–** (1) ಈ ಅಧಿನಿಯಮವನ್ನು ಕೃಷಿ ವಿಜ್ಞಾನಗಳ ವಿಶ್ವವಿದ್ಯಾಲಯಗಳ ಅಧಿನಿಯಮ, 2009 ಎಂದು ಕರೆಯತಕ್ಕದ್ದು.

(2) ಇದು 2008ರ ನವೆಂಬರ್ 22ನೇ ದಿನಾಂಕದಿಂದ ಜಾರಿಗೆ ಬಂದಿರುವುದಾಗಿ ಭಾವಿಸತಕ್ಕದ್ದು.

**2. ಪರಿಭಾಷೆಗಳು.–** ಈ ಅಧಿನಿಯಮದಲ್ಲಿ ಸಂದರ್ಭವು ಅನ್ಯಥಾ ಅಗತ್ಯಪಡಿಸಿದ ಹೊರತು,–

(1) "ವಿದ್ಯಾವಿಷಯಕ ಪರಿಷತ್ತು (ಅಕಾಡೆಮಿಕ್ ಕೌನ್ಸಿಲ್)" ಎಂದರೆ, ವಿಶ್ವವಿದ್ಯಾಲಯದ ವಿದ್ಯಾವಿಷಯಕ ಪರಿಷತ್ತು.

(2) "ಸಂಯೋಜಿತ ಕಾಲೇಜು" ಎಂದರೆ, ವಿಶ್ವವಿದ್ಯಾಲಯದ ಅಧಿಕಾರ ಕ್ಷೇತ್ರದಲ್ಲಿ ಬರುವ ಮತ್ತು ನಿಯಮಿಸಲಾದ ಶಾಸನಗಳಿಗೆ ಅನುಸಾರವಾಗಿ ವಿಶ್ವವಿದ್ಯಾಲಯಕ್ಕೆ ಸಂಯೋಜನೆಗೊಂಡ ಹಾಗೂ ವಿಶ್ವವಿದ್ಯಾಲಯದ ಪದವಿಗಳು, ಡಿಪ್ಲೋಮಾಗಳು ಅಥವಾ ಇತರ ಶೈಕ್ಷಣಿಕ ಪ್ರಶಸ್ತಿಗಳಿಗಾಗಿ ನಡೆಸುವ ಪರೀಕ್ಷೆಗಳಿಗೆ ಪ್ರವೇಶ ಪಡೆಯಲು ಅವಶ್ಯವಾದ ವ್ಯಾಸಂಗ ಕ್ರಮವನ್ನು ಒದಗಿಸುವ ಒಂದು ಕಾಲೇಜು ಅಥವಾ ಒಂದು ಸಂಸ್ಥೆ.

(3) "ಕೃಷಿ" ಎಂಬುದು,

(ಎ) ಪ್ರಾಕೃತಿಕ ಸಂಪನ್ಮೂಲ ನಿರ್ವಹಣೆ.

(ಬಿ) ಭೂಸಾರ ಮತ್ತು ಜಲನಿಧಿ ನಿರ್ವಹಣೆ.

(ಸಿ) ಬೆಳೆ ಉತ್ಪಾದನೆ ಮತ್ತು ಸಂರಕ್ಷಣೆಯು ಸೇರಿದಂತೆ ಬೆಳೆ ಸುಧಾರಣೆ.

(ಡಿ) ತೋಟಗಾರಿಕೆ ಹಣ್ಣುಗಳು, ತರಕಾರಿಗಳು, ಪುಷ್ಪಕೃಷಿ, ಸಾಂಬಾರ ಪದಾರ್ಥಗಳು, ಔಷಧೀಯ ಸಸ್ಯಗಳು, ಸುಗಂಧ ಸಸ್ಯಗಳು ಮತ್ತು ನೆಡುತೋಪು ಬೆಳೆಗಳನ್ನು ಬೆಳೆಯುವುದು.

(ಇ) ಕೋಳಿ ಸಾಕಾಣಿಕೆ ಸೇರಿದಂತೆ ಪಶುವೈದ್ಯ ಮತ್ತು ಪ್ರಾಣಿ ವಿಜ್ಞಾನಗಳು.

(ಎಫ್) ಹೈನುಗಾರಿಕೆ ವಿಜ್ಞಾನ ಮತ್ತು ತಂತ್ರಜ್ಞಾನ.

(ಜಿ) ಮೀನು ಕೃಷಿ ಮತ್ತು ಮೀನುಗಾರಿಕೆ ನಿರ್ವಹಣೆ.

(ಎಚ್) ವನ ವಿಜ್ಞಾನ, ಫಾರಂ ವನ ವಿಜ್ಞಾನ, ಅರಣ್ಯ ಮತ್ತು ವನ್ಯಜೀವಿ ನಿರ್ವಹಣೆ ಹಾಗೂ ವೃಕ್ಷ ಕೃಷಿ.

(ಐ) ಕೃಷಿ ಇಂಜಿನಿಯರಿಂಗ್ ಮತ್ತು ತಂತ್ರಜ್ಞಾನ.

(ಜೆ) ಆಹಾರ ವಿಜ್ಞಾನ ಮತ್ತು ತಂತ್ರಜ್ಞಾನ.

(ಕೆ) ವ್ಯವಸಾಯೋತ್ಪನ್ನ ಮಾರಾಟ ಹಾಗೂ ಸಹಕಾರ ಮತ್ತು ಕೃಷಿ ವ್ಯವಹಾರ ನಿರ್ವಹಣೆ.

(ಎಲ್) ಕೃಷಿಗೆ ಸಂಬಂಧಿಸಿದ ಮೂಲಭೂತ ವಿಜ್ಞಾನಗಳು ಮತ್ತು ಮಾನವಿಕ ಶಾಸ್ತ್ರಗಳು.

(ಎಂ) ಕೃಷಿ ಜೈವಿಕ ತಂತ್ರಜ್ಞಾನ.

(ಎನ್) ವ್ಯವಸಾಯೋತ್ಪನ್ನದ ಸಂಸ್ಕರಣೆಯು ಸೇರಿದಂತೆ ಸುಗ್ಗಿ ತರುವಾಯದ ತಂತ್ರಜ್ಞಾನಗಳು.

(ಒ) ಭೂಬಳಕೆ ಯೋಜನೆ ಮತ್ತು ನಿರ್ವಹಣೆ.

(ಪಿ) ಉಪ್ಪುನೀರಳೆ ಕೃಷಿಯೂ ಸೇರಿದಂತೆ ರೇಷ್ಮೆ ವ್ಯವಸಾಯ.

(ಕ್ಯೂ) ಜೇನು ಸಾಕಾಣಿಕೆ.

(ಆರ್) ಗೃಹ ವಿಜ್ಞಾನ.

(ಎಸ್) ಕೃಷಿ ತಂತ್ರಜ್ಞಾನ ಮತ್ತು ಗ್ರಾಮೀಣಾಭಿವೃದ್ಧಿ.

(ಟಿ) ಕೃಷಿ ಅರ್ಥಶಾಸ್ತ್ರ; ಹಾಗೂ

(ಯು) ಬೇಸಾಯ ಜಮೀನುಗಳ ಬಳಕೆ ಯೋಜನೆ ಮತ್ತು ನಿರ್ವಹಣೆಗೆ ಸಂಬಂಧಿಸಿದ ಯಾವುದೇ ಇತರ ವಿಷಯ.

– ಇವುಗಳ ಮೂಲಭೂತ ಹಾಗೂ ಆನ್ವಯಿಕ ವಿಜ್ಞಾನಗಳನ್ನು ಒಳಗೊಳ್ಳುತ್ತದೆ.

(4) "ಕೃಷಿ ಸಂಶೋಧನಾ ಕೇಂದ್ರ" ಎಂದರೆ, ವಲಯ ಕೃಷಿ ಸಂಶೋಧನಾ ಕೇಂದ್ರ. ಪ್ರಮುಖ ಕೃಷಿ ಸಂಶೋಧನಾ ಕೇಂದ್ರ, ಪ್ರಾದೇಶಿಕ ಕೃಷಿ ಸಂಶೋಧನಾ ಕೇಂದ್ರ, ವಿಶ್ವವಿದ್ಯಾಲಯದ ಕೃಷಿ ಸಂಶೋಧನಾ ಕೇಂದ್ರ ಅಥವಾ ಇನ್ಯಾವುದೇ ಸಂಶೋಧನಾ ಕೇಂದ್ರ.

(6) "ಪ್ರಾಧಿಕಾರ" ಎಂದರೆ, 11ನೇ ಪ್ರಕರಣದಲ್ಲಿ ನಿರ್ದಿಷ್ಟಪಡಿಸಿದಂಥ ವಿಶ್ವವಿದ್ಯಾಲಯದ ಯಾವುದೇ ಪ್ರಾಧಿಕಾರ.

(7) "ಮಂಡಳಿ" ಎಂದರೆ, ವಿಶ್ವವಿದ್ಯಾಲಯದ ವ್ಯವಸ್ಥಾಪನಾ ಮಂಡಳಿ.

(8) "ಅಧ್ಯಯನ ಮಂಡಳಿ" ಎಂದರೆ, ಫ್ಯಾಕಲ್ಟಿ ಹಂತದಲ್ಲಿ ವಿದ್ಯಾ ವ್ಯವಹಾರಗಳ ಸಮಿತಿ.

(9) "ಕಾಲೇಜು" ಎಂದರೆ, ವಿಶ್ವವಿದ್ಯಾಲಯದ ನೇರ ನಿಯಂತ್ರಣದಲ್ಲಿರುವ ಮತ್ತು ವ್ಯವಸ್ಥಾಪನೆಯ ಅಡಿಯಲ್ಲಿ ಬರುವ ಕೇಂದ್ರ ಕಾರ್ಯಸ್ಥಾನದಲ್ಲಿರುವ, ಕ್ಯಾಂಪಸ್‌ನಲ್ಲಿರುವ ಅಥವಾ ಇತರೆಡೆ ಇರುವ ಘಟಕ ಕಾಲೇಜು;

(10) "ಕುಲಾಧಿಪತಿ" ಎಂದರೆ, ವಿಶ್ವವಿದ್ಯಾಲಯದ ಕುಲಾಧಿಪತಿ;

(11) "ಲೆಕ್ಕ ನಿಯಂತ್ರಕ" ಎಂದರೆ, ವಿಶ್ವವಿದ್ಯಾಲಯದ ಲೆಕ್ಕ ನಿಯಂತ್ರಕರು;

(12) "ಡೀನ್" ಎಂದರೆ, ವಿಶ್ವವಿದ್ಯಾಲಯದ ಘಟಕ ಕಾಲೇಜಿನ ಅಥವಾ ಸ್ನಾತಕೋತ್ತರ ಅಧ್ಯಯನ ಕೇಂದ್ರದ ಮುಖ್ಯಸ್ಥರು;

(13) "ವಿದ್ಯಾರ್ಥಿ ಕ್ಷೇಮಾಭಿವೃದ್ಧಿ ಡೀನ್" ಎಂದರೆ, ವಿದ್ಯಾರ್ಥಿ ಕ್ಷೇಮಾಭಿವೃದ್ಧಿ, ಸಲಹೆ ನೀಡಿಕೆ ಮತ್ತು ವಿದ್ಯಾರ್ಥಿಗಳ ಉದ್ಯೋಗ ನಿಯೋಜನೆಯ ಡೀನ್;

(14) "ನಿರ್ದೇಶಕ" ಎಂದರೆ, ವಿದ್ಯಾ ನಿರ್ದೇಶಕರು, ಸಂಶೋಧನಾ ನಿರ್ದೇಶಕರು ಮತ್ತು ವಿಸ್ತರಣಾ ನಿರ್ದೇಶಕರು;

(15) "ವಿಸ್ತರಣಾ ಪರಿಷತ್ತು" ಎಂದರೆ, ವಿಶ್ವವಿದ್ಯಾಲಯದ ವಿಸ್ತರಣಾ ಶಿಕ್ಷಣ ಪರಿಷತ್ತು;

(16) "ಫ್ಯಾಕಲ್ಟಿ" ಎಂದರೆ, ಈ ಅಧಿನಿಯಮದಲ್ಲಿ ಮತ್ತು ಶಾಸನಗಳಲ್ಲಿ ನಿರ್ದಿಷ್ಟಪಡಿಸಿದ ವಿಶ್ವವಿದ್ಯಾಲಯದ ಫ್ಯಾಕಲ್ಟಿ.

(17) "ವಿಭಾಗದ ಮುಖ್ಯಸ್ಥರು" ಎಂದರೆ, ವಿಶ್ವವಿದ್ಯಾಲಯದ ಮತ್ತು ಘಟಕ ಕಾಲೇಜುಗಳ ವಿಭಾಗ ಮುಖ್ಯಸ್ಥರು'

(18) "ವಿದ್ಯಾರ್ಥಿನಿಲಯ" ಎಂದರೆ, ವಿಶ್ವವಿದ್ಯಾಲಯವು ನಿರ್ವಹಿಸುತ್ತಿರುವ ಅಥವಾ ವಿಶ್ವವಿದ್ಯಾಲಯದ ಒಂದು ಭಾಗವಾಗಿ ಅಥವಾ ಪ್ರತ್ಯೇಕವಾಗಿ ನಿರ್ವಹಿಸಿಕೊಂಡು ಬಂದ ಮತ್ತು ವಿಶ್ವವಿದ್ಯಾಲಯವು ಮನ್ನಣೆ ನೀಡಿದ ವಿಶ್ವವಿದ್ಯಾಲಯದ ವಿದ್ಯಾರ್ಥಿಗಳಿಗಾಗಿ ಇರುವ ವಾಸಸ್ಥಳ;

(19) "ಅಧಿಕಾರಿ" ಎಂದರೆ, ಪರಿನಿಯಮಗಳಲ್ಲಿ ಅಥವಾ ಶಾಸನಗಳಲ್ಲಿ ನಿರ್ದಿಷ್ಟವಾಗಿ ಹೇಳಿರುವ ವಿಶ್ವವಿದ್ಯಾಲಯದ ಅಧಿಕಾರಿ;

(20) "ನಿಯಮಿಸಲಾದುದು" ಎಂದರೆ, ವಿಶ್ವವಿದ್ಯಾಲಯದ ಶಾಸನಗಳಿಂದ ನಿಯಮಿಸಲಾದುದು;

(21) "ಕುಲಸಚಿವ" ಎಂದರೆ, ವಿಶ್ವವಿದ್ಯಾಲಯದ ಕುಲಸಚಿವ;

(22) "ವಿನಿಯಮಗಳು" ಎಂದರೆ, 54ನೇ ಪ್ರಕರಣದ ಅಡಿಯಲ್ಲಿ ರಚಿಸಲಾದ ವಿನಿಯಮಗಳು;

(23) "ಸಂಶೋಧನಾ ಪರಿಷತ್ತು" ಎಂದರೆ, ವಿಶ್ವವಿದ್ಯಾನಿಲಯದ ಸಂಶೋಧನಾ ಪರಿಷತ್ತು;

(24) "ಶಾಸನಗಳು" ಎಂದರೆ, ಈ ಅಧಿನಿಯಮದ ಅಡಿಯಲ್ಲಿ ರಚಿಸಲಾದ ನೀತಿಗಳು, ಕಾರ್ಯವಿಧಾನಗಳು ಮುಂತಾದ ಅಂಶಗಳನ್ನು ಕುರಿತು ರಚಿಸಲಾದ ವಿಶ್ವವಿದ್ಯಾಲಯದ ಶಾಸನಗಳು;

(24) "ವಿದ್ಯಾರ್ಥಿ" ಎಂದರೆ, ವಿಶ್ವವಿದ್ಯಾಲಯದಲ್ಲಿ ಕ್ರಮಬದ್ಧವಾಗಿ ಸ್ಥಾಪಿಸಲಾದ ಪದವಿ, ಡಿಪ್ಲೋಮಾ ಅಥವಾ ಇತರ ಶೈಕ್ಷಣಿಕ ಪ್ರಶಸ್ತಿಗಳನ್ನು ಪಡೆಯಲು ವ್ಯಾಸಂಗ ಕ್ರಮದಲ್ಲಿ ಅಧ್ಯಯನ ಮಾಡುವುದಕ್ಕಾಗಿ ವಿಶ್ವವಿದ್ಯಾಲಯದ ಘಟಕ ಕಾಲೇಜು ಮತ್ತು ಒಂದು ಸಂಯೋಜಿತ ಕಾಲೇಜಿನಲ್ಲಿ ಪ್ರವೇಶ ನೀಡಲಾಗಿರುವ ವಿದ್ಯಾರ್ಥಿಪಟ್ಟಿಯಲ್ಲಿ ಹೆಸರು ಸೇರಿಸಲಾಗಿರುವಂಥ ಒಬ್ಬ ವ್ಯಕ್ತಿ.

(25) "ಅಧ್ಯಾಪಕರು" ಎಂದರೆ, ಸಹಾಯಕ ಪ್ರಾಧ್ಯಾಪಕರ ದರ್ಜೆಗೆ ಕಡಿಮೆಯಿಲ್ಲದ ಬೋಧನೆ ನೀಡುವ ಅಥವಾ ಸಂಶೋಧನೆ ಮತ್ತು /ಅಥವಾ ವಿಸ್ತರಣಾ ಶಿಕ್ಷಣ ಕಾರ್ಯಕ್ರಮಗಳನ್ನು ನಡೆಸುವ ಮತ್ತು ಅದಕ್ಕೆ ಮಾರ್ಗದರ್ಶನ ನೀಡುವ ಉದ್ದೇಶಕ್ಕಾಗಿ ವಿಶ್ವವಿದ್ಯಾಲಯದಿಂದ ನೇಮಕಗೊಂಡ ಅಥವಾ ಮಾನ್ಯತೆ ಪಡೆದ ಒಬ್ಬ ವ್ಯಕ್ತಿ ಮತ್ತು ಇದು ಅಧ್ಯಾಪಕನೆಂದು ಶಾಸನಗಳ ಮೂಲಕ ಘೋಷಿಸಲ್ಪಡಬಹುದಾದ ಇತರೆ ಯಾವುದೇ ವ್ಯಕ್ತಿಯನ್ನು ಒಳಗೊಳ್ಳಬಹುದು.

(26) "ತಂತ್ರಜ್ಞಾನ ವರ್ಗಾವಣೆ ಘಟಕಗಳು'" (ಟಿಓಟಿ) ಎಂದರೆ, ಕೃಷಿ ವಿಜ್ಞಾನ ಕೇಂದ್ರ (ಕೆವಿಕೆ), ವಿಸ್ತರಣಾ ಶಿಕ್ಷಣ ಘಟಕಗಳು (ಇಇಯು), ಸಿಬ್ಬಂದಿ ತರಬೇತಿ ಘಟಕಗಳು (ಎಸ್‌ಟಿಯು), ಕೃಷಿ ತಂತ್ರಜ್ಞಾನ ಮಾಹಿತಿ ಕೇಂದ್ರ (ಎಟ್‌ಟಿಐಸಿ). ಬೇಕರಿ ತರಬೇತಿ ಘಟಕ (ಬಿಟಿಯು) ಮತ್ತು ವಿಶ್ವವಿದ್ಯಾಲಯವು ಸ್ಥಾಪಿಸಿದಂಥ ಇತರ ಕೇಂದ್ರಗಳು.

(27) "ವಿಶ್ವವಿದ್ಯಾಲಯ" ಎಂದರೆ, 3ನೇ ಪ್ರಕರಣದ ಅಡಿಯಲ್ಲಿ ಸ್ಥಾಪಿತವಾದ ಕೃಷಿ ವಿಜ್ಞಾನಗಳ ವಿಶ್ವವಿದ್ಯಾಲಯ;

(28) "ಕುಲಪತಿ" ಎಂದರೆ, ವಿಶ್ವವಿದ್ಯಾಲಯದ ಕುಲಪತಿ.

## ಅಧ್ಯಾಯ - II

## ವಿಶ್ವವಿದ್ಯಾಲಯಗಳು

**3. ವಿಶ್ವವಿದ್ಯಾಲಯಗಳ ಸ್ಥಾಪನೆ ಮತ್ತು ನಿಗಮನ.–** (1) ಕರ್ನಾಟಕ ಕೃಷಿ ವಿಜ್ಞಾನಗಳ ವಿಶ್ವವಿದ್ಯಾಲಯ ಅಧಿನಿಯಮ, 1963ರ (1963ರ ಕರ್ನಾಟಕ ಅಧಿನಿಯಮ 22) 3ನೇ ಪ್ರಕರಣದಡಿಯಲ್ಲಿ ಸ್ಥಾಪಿತವಾದ ವಿಶ್ವವಿದ್ಯಾಲಯಗಳು ಈ ಮುಂದಿನಂತೆ ಉಪಬಂಧ ಕಲ್ಪಿಸಿರುವಂತೆ ತಮ್ಮ ಪ್ರಾದೇಶಿಕ ಅಧಿಕಾರ ಕ್ಷೇತ್ರ ವ್ಯಾಪ್ತಿಯೊಡನೆ ಈ ಅಧಿನಿಯಮದಡಿಯಲ್ಲಿ ಸ್ಥಾಪನೆಯಾಗಿವೆ ಎಂದು ಭಾವಿಸತಕ್ಕದ್ದು ಎಂದರೆ:–

(ಎ) ಕೋಲಾರ, ಚಿಕ್ಕಬಳ್ಳಾಪುರ, ಬೆಂಗಳೂರು (ಗ್ರಾಮಾಂತರ), ಬೆಂಗಳೂರು (ನಗರ), ರಾಮನಗರಂ, ಮಂಡ್ಯ, ತುಮಕೂರು, ಮೈಸೂರು, ಚಾಮರಾಜನಗರ, ಹಾಸನ, ಚಿಕ್ಕಮಗಳೂರು, ಶಿವಮೊಗ್ಗ, ಉಡುಪಿ, ದಕ್ಷಿಣ ಕನ್ನಡ, ಕೊಡಗು, ಚಿತ್ರದುರ್ಗ ಮತ್ತು ದಾವಣಗೆರೆ ಜಿಲ್ಲೆಗಳಿಗೆ ವಿಸ್ತರಿಸಿದ ಅಧಿಕಾರ ಕ್ಷೇತ್ರ ವ್ಯಾಪ್ತಿಯೊಂದಿಗೆ ಬೆಂಗಳೂರಿನಲ್ಲಿ ಕೇಂದ್ರ ಕಾರ್ಯಸ್ಥಾನವನ್ನು ಹೊಂದಿರುವ ಬೆಂಗಳೂರು ಕೃಷಿ ವಿಜ್ಞಾನಗಳ ವಿಶ್ವವಿದ್ಯಾಲಯ;

(ಬಿ) ಬಾಗಲಕೋಟೆ, ಬೆಳಗಾಂ, ಬಳ್ಳಾರಿ, ಬೀದರ್, ಬಿಜಾಪುರ, ಧಾರವಾಡ, ಗದಗ, ಗುಲ್ಬರ್ಗಾ, ಹಾವೇರಿ, ಕೊಪ್ಪಳ, ರಾಯಚೂರು ಮತ್ತು ಉತ್ತರಕನ್ನಡ ಜಿಲ್ಲೆಗಳಿಗೆ ವಿಸ್ತರಿಸಿದ ಅಧಿಕಾರ ಕ್ಷೇತ್ರ ವ್ಯಾಪ್ತಿಯೊಂದಿಗೆ ಧಾರವಾಡದಲ್ಲಿ ಕೇಂದ್ರ ಕಾರ್ಯಸ್ಥಾನವನ್ನು ಹೊಂದಿರುವ ಧಾರವಾಡದ ಕೃಷಿ ವಿಜ್ಞಾನಗಳ ವಿಶ್ವವಿದ್ಯಾಲಯ;

(2) ಈ ಅಧಿನಿಯಮವು ಪ್ರಾರಂಭವಾದ ದಿನದಂದು, (1)ನೇ ಉಪಪ್ರಕರಣದಲ್ಲಿ ಏನೇ ಇದ್ದರೂ, ಗುಲ್ಬರ್ಗಾ, ಬೀದರ್, ರಾಯಚೂರು, ಬಳ್ಳಾರಿ, ಕೊಪ್ಪಳ ಜಿಲ್ಲೆಗಳಿಗೆ ವಿಸ್ತರಿಸಲಾದ ಅಧಿಕಾರ ಕ್ಷೇತ್ರ ವ್ಯಾಪ್ತಿಯೊಂದಿಗೆ ರಾಯಚೂರಿನಲ್ಲಿ ಕೇಂದ್ರ ಕಾರ್ಯಸ್ಥಾನದೊಂದಿಗೆ ರಾಯಚೂರಿನ ಕೃಷಿ ವಿಜ್ಞಾನಗಳ ವಿಶ್ವವಿದ್ಯಾಲಯವು ಸ್ಥಾಪನೆಯಾಗತಕ್ಕದ್ದು ಮತ್ತು (1)ನೇ ಉಪಪ್ರಕರಣದ (ಬಿ) ಖಂಡದಡಿಯಲ್ಲಿ ಸ್ಥಾಪನೆಯಾದ ವಿಶ್ವವಿದ್ಯಾಲಯವು ಹೊಂದಿದ್ದ ಆ ಪ್ರದೇಶದ ಮೇಲಿನ ಅಧಿಕಾರ ಕ್ಷೇತ್ರ ವ್ಯಾಪ್ತಿಯು ರದ್ದಾಗತಕ್ಕದ್ದು.

(3) ಕುಲಾಧಿಪತಿ, ಸಹ ಕುಲಾಧಿಪತಿ, ಪ್ರತಿಯೊಂದು ವಿಶ್ವವಿದ್ಯಾಲಯದ ಕುಲಪತಿ, ವ್ಯವಸ್ಥಾಪನಾ ಮಂಡಳಿ, ವಿದ್ಯಾವಿಷಯಕ ಪರಿಷತ್ತು ಮತ್ತು ಇತರ ಪ್ರಾಧಿಕಾರಗಳು ಹಾಗೂ ಅಧಿಕಾರಿಗಳು ಸೇರಿ (1)ನೇ ಉಪ–ಪ್ರಕರಣದಲ್ಲಿ ನಿರ್ದಿಷ್ಟಪಡಿಸಲಾದ, ವಿಶ್ವವಿದ್ಯಾಲಯದ ಹೆಸರಿನ ಒಂದು ನಿಗಮಿತ ನಿಕಾಯವು ರಚನೆಯಾಗತಕ್ಕದ್ದು.

(4) ಅಂಥ ಪ್ರತಿಯೊಂದು ವಿಶ್ವವಿದ್ಯಾಲಯವು ಶಾಶ್ವತ ಉತ್ತರಾಧಿಕಾರವನ್ನು ಮತ್ತು ಸಾಮಾನ್ಯ ಮುದ್ರೆಯನ್ನು ಹೊಂದಿರತಕ್ಕದ್ದು ಹಾಗೂ ತನ್ನ ಹೆಸರಿನಿಂದ ದಾವೆ ಹೂಡಬಹುದು ಅಥವಾ ದಾವೆಗೆ ಗುರಿಯಾಗಬಹುದು.

(5) ವಿಶ್ವವಿದ್ಯಾಲಯವು ಚರ ಮತ್ತು ಸ್ಥಿರ ಸ್ವತ್ತುಗಳೆರಡೂ ಆರ್ಜಿಸಲು ಮತ್ತು ಧಾರಣ ಮಾಡಲು ಮತ್ತು ಕೇಂದ್ರ ಸರ್ಕಾರದಿಂದ, ರಾಜ್ಯ ಸರ್ಕಾರದಿಂದ ಅಥವಾ ಯಾವುದೇ ಇತರ ಅಂಗೀಕೃತ ಮೂಲಗಳಿಂದ ಸಾಲ ಪಡೆಯಲು ಮತ್ತು ಯಾವುದೇ ಕರಾರನ್ನು ಮಾಡಿಕೊಳ್ಳಲು ಮತ್ತು ಈ ಅಧಿನಿಯಮದ ಉದ್ದೇಶಕ್ಕಾಗಿ ಅವಶ್ಯವಾದ ಎಲ್ಲಾ ಇತರ ಕಾರ್ಯಗಳನ್ನು ಮಾಡಲು ಸಕ್ಷಮವಾಗಿರತಕ್ಕದ್ದು.

(6) ವಿಶ್ವವಿದ್ಯಾಲಯವು, ತನ್ನಲ್ಲಿ ನಿಹಿತವಾಗಿದ್ದಿರಬಹುದಾದ ಅಥವಾ ತಾವು ಆರ್ಜಿಸಿರಬಹುದಾದ ಯಾವುದೇ ಸ್ಥಿರ ಸ್ವತ್ತನ್ನು ಸರ್ಕಾರದ ಪೂರ್ವಾನುಮೋದನೆಯನ್ನು ಪಡೆದುಕೊಳ್ಳದೇ ಗುತ್ತಿಗೆ ನೀಡತಕ್ಕದ್ದಲ್ಲ, ಮಾರಾಟ ಮಾಡತಕ್ಕದ್ದಲ್ಲ ಅಥವಾ ಅನ್ಯಥಾ ವರ್ಗಾವಣೆ ಮಾಡತಕ್ಕದ್ದಲ್ಲ.

(7) ವಿಶ್ವವಿದ್ಯಾಲಯವು ಹೂಡಿದ ಅಥವಾ ಅದರ ವಿರುದ್ಧ ಹೂಡಲಾದ ಎಲ್ಲಾ ದಾವೆಗಳಲ್ಲಿ ಮತ್ತು ಇತರ ಕಾನೂನು ವ್ಯವಹರಣೆಗಳಲ್ಲಿ, ವಾದ ಪ್ರತಿವಾದ ಪತ್ರಗಳಿಗೆ ಕುಲಸಚಿವರು ಸಹಿ ಮಾಡತಕ್ಕದ್ದು ಮತ್ತು ಸತ್ಯಾಪನೆ ಮಾಡತಕ್ಕದ್ದು ಮತ್ತು ಅಂಥ ದಾವೆಗಳು ಮತ್ತು ವ್ಯವಹರಣೆಗಳಲ್ಲಿನ ಎಲ್ಲಾ ಆದೇಶಿಕೆಗಳನ್ನು ವಿಶ್ವವಿದ್ಯಾಲಯದ ಕುಲಸಚಿವರು ಹೊರಡಿಸತಕ್ಕದ್ದು ಮತ್ತು ಅವರ ಮೇಲೆ ಜಾರಿ ಮಾಡತಕ್ಕದ್ದು.

**4. ಅಧಿಕಾರ ವ್ಯಾಪ್ತಿ.–** (1) ಕೃಷಿ, ಪಶುಸಂಗೋಪನೆ, ಮೀನುಗಾರಿಕೆ, ರೇಷ್ಮೆ ವ್ಯವಸಾಯ ಮತ್ತು ಅರಣ್ಯ ವಿಜ್ಞಾನ ತರಬೇತಿ ಅಥವಾ ಶಿಕ್ಷಣ ಕೇಂದ್ರಗಳು ಮತ್ತು ಸಂಶೋಧನಾ ಹಾಗೂ ಪ್ರಯೋಗ ಕೇಂದ್ರಗಳ ನಿರ್ವಹಣೆಗೆ ಮತ್ತು ಕ್ಷೇತ್ರ ವಿಸ್ತರಣಾ ಕೆಲಸಗಾರರ ತರಬೇತಿ ಕಾರ್ಯಕ್ರಮಗಳಿಗೆ ಮತ್ತು ತನ್ನ ಅಧಿಕಾರ ಕ್ಷೇತ್ರ ವ್ಯಾಪ್ತಿಯೊಳಗೆ ವಿವಿಧ ಭಾಗಗಳಲ್ಲಿ ಅಗತ್ಯವಾಗಬಹುದಾದಂಥ ಇತರ ಕೇಂದ್ರಗಳ ಸ್ಥಾಪನೆ, ಅಭಿವೃದ್ಧಿ ಮತ್ತು ಕಾರ್ಯಾಚರಣೆ ನಡೆಸುವ ಜವಾಬ್ದಾರಿ ಪ್ರತಿಯೊಂದು ವಿಶ್ವವಿದ್ಯಾಲಯದ ಮೇಲಿರತಕ್ಕದ್ದು.

(2) ವಿಶ್ವವಿದ್ಯಾಲಯದ ಆಡಳಿತದ ಅಡಿಯಲ್ಲಿ ಬರುವ ಎಲ್ಲಾ ಕಾಲೇಜುಗಳು, ಸಂಶೋಧನೆ ಮತ್ತು ಪ್ರಯೋಗ ಕೇಂದ್ರಗಳು, ಕೃಷಿ ವಿಜ್ಞಾನ ಕೇಂದ್ರಗಳು ಹಾಗೂ ವಿಸ್ತರಣಾ ಶಿಕ್ಷಣ ಮತ್ತು ಇತರ ತರಬೇತಿ ಕೇಂದ್ರಗಳು ಅಥವಾ ಪ್ರತಿಯೊಂದು ವಿಶ್ವವಿದ್ಯಾಲಯದ ಅಧಿಕಾರ ಕ್ಷೇತ್ರ ವ್ಯಾಪ್ತಿಯ ಮತ್ತು ಪ್ರಾಧಿಕಾರದ ಅಡಿಯಲ್ಲಿ ಬರುವ ಇತರ ಸಂಸ್ಥೆಗಳು ಆ ವಿಶ್ವವಿದ್ಯಾಲಯದ ಘಟಕ ಭಾಗವಾಗಿರತಕ್ಕದ್ದು ಮತ್ತು ಆ ವಿಶ್ವವಿದ್ಯಾಲಯದ ಆಡಳಿತ ಮತ್ತು ನಿಯಂತ್ರಣದಡಿಯಲ್ಲಿ ಕೆಲಸ ಮಾಡತಕ್ಕದ್ದು. ವಿಶ್ವವಿದ್ಯಾಲಯದಿಂದ ಸಂಯೋಜಿತ ಕಾಲೇಜು ಎಂದು ಅನ್ಯಥಾ ಮನ್ನಣೆ ಪಡೆದ ಹೊರತು ಯಾವ ಘಟಕವನ್ನು ಒಂದು ಸಂಯೋಜಿತ ಘಟಕ ಎಂದು ಮಾನ್ಯಮಾಡತಕ್ಕದ್ದಲ್ಲ.

(3) ಪ್ರತಿಯೊಂದು ವಿಶ್ವವಿದ್ಯಾಲಯವು ಅನೇಕ ವಿಭಿನ್ನ ಶಾಸ್ತ್ರಗಳ ದೃಷ್ಟಿಯಿಂದ ಅಧ್ಯಯನ ಮಾಡುವ ವಿದ್ಯಾವಿಷಯಕ ಕಾರ್ಯಕ್ರಮಗಳ ಮತ್ತು ಸಂಶೋಧನಾ ಯೋಜನೆಗಳ ಸಂಬಂಧದಲ್ಲಿ ಇತರ ವಿಶ್ವವಿದ್ಯಾಲಯಗಳು ಅಥವಾ ಭಾರತದ ಮತ್ತು ವಿದೇಶದ ಖ್ಯಾತ ಸಂಸ್ಥೆಗಳೊಂದಿಗೆ ವಿದ್ಯಾವಿಷಯಕ ಕಾರ್ಯಕ್ರಮಗಳ ಸಹಯೋಗ ಮಾಡಿಕೊಳ್ಳಬಹುದು.

(4) ವಿಶ್ವವಿದ್ಯಾಲಯವು ಅಗತ್ಯಕ್ಕೆ ತಕ್ಕಂತೆ ತನ್ನ ಅಧಿಕಾರ ಕ್ಷೇತ್ರವ್ಯಾಪ್ತಿಯೊಳಗೆ ಮತ್ತು ವಿದೇಶದಲ್ಲಿ ತನ್ನ ಘಟಕ ಸಂಸ್ಥೆಗಳನ್ನು ಸ್ಥಾಪಿಸುವ, ಅಭಿವೃದ್ಧಿ ಪಡಿಸುವ ಮತ್ತು ಕಾರ್ಯಾಚರಣೆ ಮಾಡುವ ಹೊಣೆಗಾರಿಕೆಯನ್ನು ವಹಿಸಿಕೊಳ್ಳಬಹುದು.

**5. ವಿಶ್ವವಿದ್ಯಾಲಯದ ಧ್ಯೇಯೋದ್ದೇಶಗಳು.–** ಪ್ರತಿಯೊಂದು ವಿಶ್ವವಿದ್ಯಾಲಯವನ್ನು ಈ ಮುಂದಿನ ಧ್ಯೇಯೋದ್ದೇಶಗಳಿಗಾಗಿ ಸ್ಥಾಪಿಸಲಾಗಿದೆ ಮತ್ತು ನಿಗಮಿತಗೊಳಿಸಲಾಗಿದೆ ಎಂದು ಭಾವಿಸತಕ್ಕದ್ದು, ಎಂದರೆ:–

(ಎ) 2ನೇ ಪ್ರಕರಣದ (3)ನೇ ಉಪ-ಪ್ರಕರಣದಲ್ಲಿ ನಿರ್ದಿಷ್ಟಪಡಿಸಿದ ಅಧ್ಯಯನದ ವಿವಿಧ ಶಾಖೆಗಳಲ್ಲಿ ಉತ್ತಮ ಗುಣಮಟ್ಟದ ಮಾನವ ಸಂಪನ್ಮೂಲವನ್ನು ಅಭಿವೃದ್ಧಿ ಪಡಿಸುವುದಕ್ಕಾಗಿ ಶಿಕ್ಷಣ ನೀಡುವುದಕ್ಕೆ ಏರ್ಪಾಡು ಮಾಡುವುದು;

(ಬಿ) ಕಲಿಕೆ ಮತ್ತು ಸಂಶೋಧನೆಗೆ ಅದರಲ್ಲೂ ಕೃಷಿ ಮತ್ತು ಇತರೆ ಸಂಬಂಧಿತ ವಿಜ್ಞಾನದಲ್ಲಿ ಕಲಿಕೆ ಮತ್ತು ಸಂಶೋಧನೆಯ ಮುನ್ನಡೆಗೆ ಉತ್ತೇಜನ ನೀಡುವುದು;

(ಸಿ) ಜನತೆಗೆ ವಿಶೇಷವಾಗಿ ರಾಜ್ಯದ ಗ್ರಾಮಾಂತರ ಜನರಿಗೆ, ವಿಜ್ಞಾನ ಮತ್ತು ತಂತ್ರಜ್ಞಾನಗಳ ವಿಸ್ತರಣಾ ಶಿಕ್ಷಣವನ್ನು ಕೈಕೊಳ್ಳುವುದು;

(ಡಿ) ರಾಜ್ಯ ಸರ್ಕಾರವು ಸರ್ಕಾರಿ ರಾಜ್ಯಪತ್ರದಲ್ಲಿ ಅಧಿಸೂಚನೆಯ ಮೂಲಕ ಕಾಲದಿಂದ ಕಾಲಕ್ಕೆ ನಿರ್ದಿಷ್ಟಪಡಿಸಬಹುದಾದಂಥ ಇತರ ಉದ್ದೇಶಗಳು; ಮತ್ತು

(ಇ) ರಾಷ್ಟ್ರೀಯ ಮತ್ತು ಅಂತಾರಾಷ್ಟ್ರೀಯ ಶೈಕ್ಷಣಿಕ, ಕೈಗಾರಿಕಾ, ಸಂಶೋಧನೆ ಮತ್ತು ಇತರ ಸಂಸ್ಥೆಗಳೊಂದಿಗೆ ಪಾಲುಗಾರಿಕೆ ಮತ್ತು ಜೋಡಣೆಗಳನ್ನು ಉತ್ತೇಜಿಸುವುದು.

**6. ವಿಶ್ವವಿದ್ಯಾಲಯಕ್ಕೆ ಪ್ರವೇಶ.–** (1) ವಿಶ್ವವಿದ್ಯಾಲಯವು ಈ ಅಧಿನಿಯಮದ ಮತ್ತು ಶಾಸನಗಳ ಉಪಬಂಧಗಳಿಗೊಳಪಟ್ಟು ಎಲ್ಲ ವ್ಯಕ್ತಿಗಳಿಗೂ ಮುಕ್ತವಾಗಿರತಕ್ಕದ್ದು:

ಪರಂತು, ಈ ಪ್ರಕರಣದಲ್ಲಿರುವುದಾವುದೂ, ಪ್ರವೇಶಕ್ಕಾಗಿ ಅಥವಾ ವಿಶ್ವವಿದ್ಯಾಲಯದ ಪಟ್ಟಿಗಳಲ್ಲಿ ಉಳಿದುಕೊಳ್ಳುವುದಕ್ಕಾಗಿ ನಿಯಮಿಸಲಾದ ಶೈಕ್ಷಣಿಕ ಗುಣಮಟ್ಟಗಳನ್ನು ಪೂರೈಸದಿರುವ ಯಾವೊಬ್ಬ ವ್ಯಕ್ತಿಗೆ ಅಥವಾ ಯಾವ ವ್ಯಕ್ತಿಗಳ ಶೈಕ್ಷಣಿಕ ದಾಖಲೆಗಳು, ಪದವಿಯನ್ನು ನೀಡುವುದಕ್ಕಾಗಿ ಅಗತ್ಯಪಡಿಸಲಾದ ಕನಿಷ್ಠ ಗುಣಮಟ್ಟಕ್ಕಿಂತ ಕಡಿಮೆ ಇವೆಯೋ ಆ ವ್ಯಕ್ತಿಗಳಿಗೆ ಅಥವಾ ಯಾರ ವೈಯಕ್ತಿಕ ನಡತೆಯು ವಿಶ್ವವಿದ್ಯಾನಿಲಯದ ಹಿತದೃಷ್ಟಿಗೆ ಅಥವಾ ಇತರ ವಿದ್ಯಾರ್ಥಿಗಳ ಮತ್ತು ಸಿಬ್ಬಂದಿಯ ಸೂಕ್ತ ಹಕ್ಕುಗಳಿಗೆ ಮತ್ತು ವಿಶೇಷಾಧಿಕಾರಗಳಿಗೆ ಹಾನಿಕಾರಕವಾಗಿರುವಂಥದ್ದಾಗಿದೆಯೋ ಆ ವ್ಯಕ್ತಿಗಳಿಗೆ ಅಧ್ಯಯನದ ಯಾವುದೇ ವ್ಯಾಸಂಗ ಕ್ರಮಕ್ಕೆ ಪ್ರವೇಶ ನೀಡಲು ವಿಶ್ವವಿದ್ಯಾಲಯವನ್ನು ಅಗತ್ಯಪಡಿಸತಕ್ಕದ್ದಲ್ಲ:

ಮತ್ತು ಪರಂತು, ಈ ಪ್ರಕರಣದಲ್ಲಿರುವುದಾವುದೂ, ವಿದ್ಯಾವಿಷಯಕ ಪರಿಷತ್ತು ನಿರ್ಧರಿಸಿದಂತೆ ವಿಶ್ವವಿದ್ಯಾಲಯದ ಅಥವಾ ಯಾವುದೇ ನಿರ್ದಿಷ್ಟ ಕಾಲೇಜಿನ ಅಥವಾ ವಿಭಾಗದ ಲಭ್ಯವಿರುವ ಫ್ಯಾಕಲ್ಟಿಗಳಲ್ಲಿ ಸ್ಥಳಾವಕಾಶ ನೀಡಬಹುದಾದಕ್ಕಿಂತಲೂ ಹೆಚ್ಚಿನ ಸಂಖ್ಯೆಯಲ್ಲಿ ವಿದ್ಯಾರ್ಥಿಗಳಿಗೆ ಯಾವುದೇ ವ್ಯಾಸಂಗ ಕ್ರಮಗಳಿಗೆ ಪ್ರವೇಶ ನೀಡಲು ವಿಶ್ವವಿದ್ಯಾಲಯವನ್ನು ಅಗತ್ಯಪಡಿಸುತ್ತದೆಂದು ಭಾವಿಸತಕ್ಕದ್ದಲ್ಲ.

(2) (1)ನೇ ಉಪಪ್ರಕರಣದ ಉಪಬಂಧಗಳಿಗೆ ಒಳಪಟ್ಟು, ಸರ್ಕಾರವು ಈ ಸಂಬಂಧದಲ್ಲಿ ನಿರ್ದಿಷ್ಟಪಡಿಸಿದ ಕನಿಷ್ಠ ವಿದ್ಯಾರ್ಹತೆಗಳನ್ನು ಹೊಂದಿದ ಮಹಿಳೆಯರಿಗೆ, ಅನುಸೂಚಿತ ಜಾತಿ ಮತ್ತು ಅನುಸೂಚಿತ ಪಂಗಡಗಳಿಗೆ ಸೇರಿದ ವ್ಯಕ್ತಿಗಳಿಗೆ, ಕೃಷಿಕರ ಮಕ್ಕಳಿಗೆ ಮತ್ತು ಇತರ ರಾಜ್ಯಗಳ ವಿದ್ಯಾರ್ಥಿಗಳಿಗೆ ಮತ್ತು ವಿದೇಶಿ ವಿದ್ಯಾರ್ಥಿಗಳಿಗೆ ಮತ್ತು ಸರ್ಕಾರವು ಆದೇಶದ ಮೂಲಕ ನಿರ್ದಿಷ್ಟಪಡಿಸಬಹುದಾದಂಥ ಕೃಷಿ ಕುರಿತ ಪ್ರಾಯೋಗಿಕ ಪರೀಕ್ಷೆಯಲ್ಲಿ ಉತ್ತೀರ್ಣರಾದ ಸ್ವಾತಂತ್ರ ಹೋರಾಟಗಾರರ, ಸೈನಿಕರ ಮತ್ತು ಮಾಜಿ ಸೈನಿಕರ ಮಕ್ಕಳಿಗೆ ಹಾಗೂ ಪ್ರತಿಪಾಲಿತರಿಗೆ ಮತ್ತು ಸರ್ಕಾರವು ಈ ಸಂಬಂಧದಲ್ಲಿ ಘೋಷಿಸಬಹುದಾದಂಥ ಸಾಮಾಜಿಕವಾಗಿ ಮತ್ತು ಶೈಕ್ಷಣಿಕವಾಗಿ ಹಿಂದುಳಿದ ವರ್ಗಗಳ ನಾಗರಿಕರಿಗೆ ವಿಶ್ವವಿದ್ಯಾಲಯದ ಕಾಲೇಜುಗಳಲ್ಲಿ ಸ್ಥಾನಗಳನ್ನು ಮೀಸಲಿರಿಸತಕ್ಕದ್ದು ಎಂದು ನಿರ್ದೇಶಿಸತಕ್ಕದ್ದು ಮತ್ತು ಅಂಥ ನಿರ್ದೇಶನಗಳನ್ನು ನೀಡಿದಲ್ಲಿ ವಿಶ್ವವಿದ್ಯಾಲಯವು ಅದರಂತೆ ಮೀಸಲಾತಿಗಳನ್ನು ಮಾಡತಕ್ಕದ್ದು.

**ವಿವರಣೆ:–** ಈ ಉಪಪ್ರಕರಣದ ಉದ್ದೇಶಕ್ಕಾಗಿ.–

(1) "ಕೃಷಿಕ" ಎಂದರೆ, ಮಾಲೀಕನಾಗಿ ಭೂಮಿಯನ್ನು ಹೊಂದಿರುವ ಹಾಗೂ ಯಾರ ಮುಖ್ಯ ಆದಾಯವು ಸ್ವಂತ ಸಾಗುವಳಿ ಮಾಡುವುದರಿಂದ ಬರುತ್ತದೋ ಆ ವ್ಯಕ್ತಿ ಮತ್ತು ಇದು ಮುಖ್ಯವಾಗಿ ಕೃಷಿ ಭೂಮಿಗಳಲ್ಲಿ ದೈಹಿಕ ದುಡಿಮೆಯಿಂದ ತನ್ನ ಜೀವನ ನಿರ್ವಹಣೆ ಮಾಡುತ್ತಿರುವ ವ್ಯಕ್ತಿಗಳನ್ನು ಒಳಗೊಳ್ಳುತ್ತದೆ.

(2) "ಸ್ವಾತಂತ್ರ ಹೋರಾಟಗಾರ" ಎಂದರೆ, ಸರ್ಕಾರವು ಕಾಲ ಕಾಲಕ್ಕೆ ಹಾಗೆಂದು ಘೋಷಿಸುವ ಪ್ರವರ್ಗದ ವ್ಯಕ್ತಿ.

**7. ವಿಶ್ವವಿದ್ಯಾಲಯದ ಅಧಿಕಾರ ಮತ್ತು ಪ್ರಕಾರ್ಯಗಳು.–** ವಿಶ್ವವಿದ್ಯಾಲಯವು ಈ ಮುಂದಿನ ಅಧಿಕಾರಗಳು ಮತ್ತು ಪ್ರಕಾರ್ಯಗಳನ್ನು ಹೊಂದಿರತಕ್ಕದ್ದು, ಎಂದರೆ:–

(1) ಕೃಷಿ ಮತ್ತು ಸಂಬಂಧಿತ ಇತರ ಕಲಿಕೆಯ ವಿಭಾಗಗಳಲ್ಲಿ ಪದವಿ ಮತ್ತು ಸ್ನಾತಕೋತ್ತರ ವಿದ್ಯಾರ್ಥಿಗಳಿಗೆ ವಿಶ್ವವಿದ್ಯಾಲಯವು ಸೂಕ್ತ ಎಂದು ಭಾವಿಸಬಹುದಾದ ಶಿಕ್ಷಣವನ್ನು ಒದಗಿಸುವುದು;

(2) ಕೃಷಿ ಮತ್ತು ಸಂಬಂಧಿತ ಕಲಿಕೆಯ ವಿಭಾಗಗಳಲ್ಲಿ ಸಂಶೋಧನೆಯನ್ನು ನಡೆಸುವುದಕ್ಕೆ ಅವಕಾಶವನ್ನು ನೀಡುವುದು.

(3) ಸಂಶೋಧನೆಯಿಂದ ತಿಳಿದುಬಂದ ವಿಷಯಗಳನ್ನು ಮತ್ತು ತಾಂತ್ರಿಕ ಮಾಹಿತಿಗಳನ್ನು ವಿಸ್ತರಣಾ ಶೈಕ್ಷಣಿಕ ಕಾರ್ಯಕ್ರಮಗಳ ಮೂಲಕ ಪ್ರಸಾರ ಮಾಡಲು ಅವಕಾಶ ಕಲ್ಪಿಸುವುದು;

(4) ಯಾವುದೇ ಇತರ ವಿಶ್ವವಿದ್ಯಾಲಯದಲ್ಲಿ ಅಥವಾ ಈ ಉದ್ದೇಶಕ್ಕಾಗಿ ಮಾನ್ಯತೆ ಪಡೆದ ಸಂಸ್ಥೆಗಳಲ್ಲಿ ಅರೆಕಾಲಿಕ ವ್ಯಾಸಂಗ ಕ್ರಮ ಮತ್ತು / ಅಥವಾ ಸಂಶೋಧನೆಯು ಸೇರಿದಂತೆ ವಿಶ್ವವಿದ್ಯಾಲಯದಲ್ಲಿ ನಿಯಮಿಸಿದ ವ್ಯಾಸಂಗ ಕ್ರಮ ಅಥವಾ ಸಂಶೋಧನೆ ಅಥವಾ ಅವೆರಡನ್ನೂ ಮಾಡಿರುವ ವ್ಯಕ್ತಿಗಳಿಗೆ ಪದವಿಗಳು, ಡಿಪ್ಲೋಮಗಳು ಮತ್ತು ಇತರ ಶೈಕ್ಷಣಿಕ ಪ್ರಶಸ್ತಿಗಳಿಗಾಗಿ ವ್ಯಾಸಂಗ ಕ್ರಮಗಳನ್ನು ಪ್ರಾರಂಭಿಸುವುದು ಮತ್ತು ಪರೀಕ್ಷೆಗಳನ್ನು ನಡೆಸುವುದು ಮತ್ತು ಪದವಿ, ಡಿಪ್ಲೋಮಾ ಮತ್ತಿತರ ಶೈಕ್ಷಣಿಕ ಪ್ರಶಸ್ತಿ ನೀಡುವುದು;

(5) ನಿಯಮಿಸಬಹುದಾದಂಥ ಗೌರವ ಪದವಿಗಳು ಮತ್ತು ಇತರ ಪ್ರಶಸ್ತಿಗಳನ್ನು ಪ್ರದಾನ ಮಾಡುವುದು;

(6) ರೈತರಿಗೆ, ಕ್ಷೇತ್ರ ಕೆಲಸಗಾರರಿಗೆ, ಗ್ರಾಮೀಣ ಯುವಕರಿಗೆ ಮತ್ತು ವಿಶ್ವವಿದ್ಯಾಲಯದಲ್ಲಿ ಕ್ರಮಬದ್ಧ ವಿದ್ಯಾರ್ಥಿಗಳಾಗಿ ಭರ್ತಿಯಾಗಿರದ ಇತರ ವ್ಯಕ್ತಿಗಳಿಗೆ ತರಬೇತಿಯನ್ನು ನೀಡುವುದು;

(7) 4ನೇ ಪ್ರಕರಣದಲ್ಲಿ ನಮೂದಿಸಿರುವ ಮಿತಿಗಳಿಗೊಳಪಟ್ಟು, ವಿಶ್ವವಿದ್ಯಾಲಯವು ನಿರ್ಧರಿಸಬಹುದಾದಂಥ ರೀತಿಯಲ್ಲಿ ಮತ್ತು ಅಂಥ ಉದ್ದೇಶಗಳಿಗಾಗಿ ಇತರ ವಿಶ್ವವಿದ್ಯಾಲಯಗಳು ಮತ್ತು ಸಂಸ್ಥೆಗಳೊಡನೆ ಜೊತೆಗೂಡಿ ಕೆಲಸಮಾಡುವುದು;

(8) ಕೃಷಿ, ಗೃಹವಿಜ್ಞಾನ, ಕೃಷಿ ಇಂಜಿನಿಯರಿಂಗ್, ಅರಣ್ಯ ವಿಜ್ಞಾನ ಮತ್ತು ಸಂಬಂಧಿತ ವಿಜ್ಞಾನಗಳಿಗೆ ಸಂಬಂಧಿಸಿದ ಕಾಲೇಜುಗಳು ಮತ್ತು ಇತರ ಸಂಸ್ಥೆಗಳನ್ನು ಸ್ಥಾಪಿಸುವುದು ಮತ್ತು ನಿರ್ವಹಿಸುವುದು;

(9) ಬೋಧನೆ, ಸಂಶೋಧನೆ ನಡೆಸಲು ಮತ್ತು ವಿಸ್ತರಣಾ ಶಿಕ್ಷಣಕ್ಕಾಗಿ ಪ್ರಯೋಗಾಲಯಗಳು, ಗ್ರಂಥಾಲಯಗಳು, ಸಂಶೋಧನಾ ಕೇಂದ್ರಗಳು ಮತ್ತು ಸಂಸ್ಥೆಗಳು ಮತ್ತು ವಸ್ತುಸಂಗ್ರಹಾಲಯಗಳನ್ನು ಸ್ಥಾಪಿಸುವುದು ಮತ್ತು ನಿರ್ವಹಿಸುವುದು;

(10) ಬೋಧನೆ, ಸಂಶೋಧನೆ ಮತ್ತು ವಿಸ್ತರಣಾ ಶಿಕ್ಷಣಕ್ಕಾಗಿ ಹುದ್ದೆಗಳನ್ನು ಸೃಜಿಸುವುದು ಮತ್ತು ಅಂಥ ಹುದ್ದೆಗಳಿಗೆ ವ್ಯಕ್ತಿಗಳನ್ನು ನೇಮಿಸುವುದು;

(11) ಆಡಳಿತಾತ್ಮಕವಾದ ಮತ್ತು ಇತರ ಹುದ್ದೆಗಳನ್ನು ಸೃಜಿಸುವುದು ಮತ್ತು ಅಂಥ ಹುದ್ದೆಗಳಿಗೆ ವ್ಯಕ್ತಿಗಳನ್ನು ನೇಮಕ ಮಾಡುವುದು;

(12) ಶಾಸನಗಳನ್ವಯ ಫೆಲೋಶಿಪ್, ವಿದ್ಯಾರ್ಥಿವೇತನಗಳು, ಸ್ಟೈಪೆಂಡುಗಳು ಮತ್ತು ಬಹುಮಾನಗಳನ್ನು ಸ್ಥಾಪಿಸುವುದು ಮತ್ತು ನೀಡುವುದು;

(13) ವಿಶ್ವವಿದ್ಯಾಲಯದ ವಿದ್ಯಾರ್ಥಿಗಳು ಮತ್ತು ಸಿಬ್ಬಂದಿಗಳಿಗೆ ನಿವಾಸ ಗೃಹಗಳನ್ನು ನಿರ್ಮಿಸುವುದು ಮತ್ತು ನಿರ್ವಹಿಸಿಕೊಂಡು ಬರುವುದು;

(14) ನಿಯಮಿಸಲಾದಂಥ ಫೀಜು ಮತ್ತು ಇತರೆ ಚಾರ್ಜುಗಳನ್ನು ನಿಗದಿಪಡಿಸುವುದು, ಕೋರುವುದು ಮತ್ತು ಸ್ವೀಕರಿಸುವುದು;

(15) ವಿಶ್ವವಿದ್ಯಾಲಯದ ವಿದ್ಯಾರ್ಥಿಗಳ ನಿವಾಸ ನಡತೆ ಮತ್ತು ಶಿಸ್ತನ್ನು ಮೇಲ್ವಿಚಾರಣೆ ಮಾಡುವುದು ಮತ್ತು ನಿಯಂತ್ರಿಸುವುದು ಹಾಗೂ ಅವರ ಆರೋಗ್ಯ ಮತ್ತು ಕ್ಷೇಮಾಭಿವೃದ್ಧಿಯನ್ನು ವರ್ಧಿಸುವುದಕ್ಕಾಗಿ ಏರ್ಪಾಡುಗಳನ್ನು ಮಾಡುವುದು;

(16) ವಿದೇಶಗಳಿಂದ ಮತ್ತು ದೇಶದ ಒಳಗಿನಿಂದ ವಂತಿಗೆಗಳನ್ನು ಸ್ವೀಕರಿಸುವುದು:

ಪರಂತು, ಸರ್ಕಾರದ ಪೂರ್ವಾನುಮೋದನೆಯನ್ನು ಪಡೆದ ಹೊರತು ವಿಶ್ವವಿದ್ಯಾಲಯವು ವಿದೇಶದಿಂದ, ವಿದೇಶಿ ಪ್ರತಿಷ್ಠಾನಗಳು ಮತ್ತು ಅಂಥ ದೇಶದ ಯಾವುದೇ ವ್ಯಕ್ತಿಯಿಂದ ವಂತಿಗೆಗಳನ್ನು ಸ್ವೀಕರಿಸತಕ್ಕದ್ದಲ್ಲ.

(17) ಭಾರತದ ಹೊರಗೆ ಕಾರ್ಯ ನಿರ್ವಹಿಸುತ್ತಿರುವ ಸಂಸ್ಥೆಗಳಿಗೆ ತನ್ನ ವಿಶೇಷಾಧಿಕಾರಕ್ಕೆ ಪ್ರವೇಶಾವಕಾಶವನ್ನು ನೀಡಲು ವಿಶ್ವವಿದ್ಯಾಲಯಕ್ಕೆ ಅನುಮತಿಸುವುದು;

(18) ವಿವಿಧ ಶಾಸನಗಳಡಿಯಲ್ಲಿ ನಿರ್ಧರಿಸಿದಂತೆ ಕೃಷಿ ಮತ್ತು ಸಂಬಂಧಿತ ವಿಜ್ಞಾನಗಳಲ್ಲಿ ಕಲಿಕೆಯನ್ನು ನಡೆಸಲು ಖಾಸಗಿ ಕೃಷಿ ಸಂಸ್ಥೆಗಳಿಗೆ ಸಂಯೋಜನೆ ನೀಡುವುದು.

(19) ವಿಶ್ವವಿದ್ಯಾಲಯದ ಧ್ಯೇಯೋದ್ದೇಶಗಳ ಪುರೋಭಿವೃದ್ಧಿಗೆ ಅಗತ್ಯವಾಗಬಹುದಾದ ಎಲ್ಲಾ ಚಟುವಟಿಕೆಗಳ ಮತ್ತು ಕಾರ್ಯಗಳನ್ನು ಅವು ಮೇಲೆ ಹೇಳಿದ ಅಧಿಕಾರಗಳಿಗೆ ಪ್ರಾಸಂಗಿಕವಾಗಿರಲಿ ಇಲ್ಲದಿರಲಿ ಮಾಡುವುದು:

**8. ತಪಾಸಣೆ ಮತ್ತು ನಿಯಂತ್ರಣ.–** (1) ಕುಲಾಧಿಪತಿಯವರು, ಸರ್ಕಾರವು ತಪಾಸಣೆ ಕೋರಿದ್ದರೆ ಅಥವಾ ಸ್ವಪ್ರೇರಣೆಯಿಂದ ತಾನು ನಿರ್ದೇಶಿಸಬಹುದಾದಂಥ ವ್ಯಕ್ತಿ ಅಥವಾ ವ್ಯಕ್ತಿಗಳು ವಿಶ್ವವಿದ್ಯಾಲಯದ ಕಟ್ಟಡಗಳ, ಪ್ರಯೋಗ ಶಾಲೆಗಳ, ಗ್ರಂಥಾಲಯಗಳ, ವಸ್ತು ಸಂಗ್ರಹಾಲಯಗಳ, ವಿದ್ಯಾರ್ಥಿನಿಲಯಗಳ, ಕಾರ್ಯಾಗಾರಗಳ ಮತ್ತು ವಿಶ್ವವಿದ್ಯಾಲಯವು ನಿರ್ವಹಿಸುತ್ತಿರುವ, ಆಡಳಿತ ನಡೆಸುತ್ತಿರುವ ಮಾನ್ಯತೆ ನೀಡಿದ ಅಥವಾ ಅನುಮೋದಿಸಿದ ಸಂಸ್ಥೆಯ ಸಲಕರಣೆಗಳ ಮತ್ತು ವಿಶ್ವವಿದ್ಯಾಲಯವು ನಡೆಸಿದ ಮತ್ತು ಕೈಗೊಂಡ ಪರೀಕ್ಷೆಗಳ, ಅಧ್ಯಾಪನದ ಮತ್ತು ಇತರ ಕಾರ್ಯದ ಬಗ್ಗೆ ತಪಾಸಣೆ ಮಾಡುವಂತೆ ಮಾಡತಕ್ಕದ್ದು ಮತ್ತು ವಿಶ್ವವಿದ್ಯಾಲಯಕ್ಕೆ ಸಂಬಂಧಿಸಿದ ಇತರ ಯಾವುದೇ ವಿಷಯದ ಬಗ್ಗೆ ಅದೇ ರೀತಿಯಲ್ಲಿ ತಪಾಸಣೆ ಮಾಡುವಂತೆ ಅಥವಾ ವಿಚಾರಣೆ ನಡೆಸುವಂತೆ ಮಾಡತಕ್ಕದ್ದು.

(2) (1)ನೇ ಉಪಪ್ರಕರಣದ ಅಡಿಯಲ್ಲಿ ತಪಾಸಣೆ ಅಥವಾ ವಿಚಾರಣೆ ನಡೆಸುವುದಕ್ಕಾಗಿ, ನಿರ್ದೇಶಿತರಾದ ವ್ಯಕ್ತಿ ಅಥವಾ ವ್ಯಕ್ತಿಗಳು, ಆ ಉದ್ದೇಶಕ್ಕಾಗಿ, ಸಂಬಂಧಪಟ್ಟ ಸಂಸ್ಥೆಗಳನ್ನು ಮತ್ತು ಆವರಣಗಳನ್ನು ಪ್ರವೇಶಿಸಲು ಮತ್ತು ಅವಶ್ಯಕವಾಗಬಹುದಾದಂಥ ಲೆಕ್ಕಪತ್ರಗಳನ್ನು ಅಥವಾ ಇತರ ದಾಖಲೆಗಳನ್ನು ಪಡೆದುಕೊಳ್ಳಲು ಅವಕಾಶವಿರತಕ್ಕದ್ದು.

(3) ಅಂಥ ವ್ಯಕ್ತಿ ಅಥವಾ ವ್ಯಕ್ತಿಗಳು, ತಪಾಸಣೆ ಅಥವಾ ವಿಚಾರಣೆಯ ಒಂದು ವರದಿಯನ್ನು ಕುಲಾಧಿಪತಿಯವರಿಗೆ ಸಲ್ಲಿಸತಕ್ಕದ್ದು ಮತ್ತು ಅದರ ಒಂದು ಪ್ರತಿಯನ್ನು ಸರ್ಕಾರಕ್ಕೆ ಕಳುಹಿಸತಕ್ಕದ್ದು.

(4) ವರದಿಯನ್ನು ಸ್ವೀಕರಿಸಿದ ಮೇಲೆ ಕುಲಾಧಿಪತಿಯವರು ಅದರ ಮೇಲೆ ತನ್ನ ತೀರ್ಮಾನಗಳನ್ನು ದಾಖಲಿಸತಕ್ಕದ್ದು ಮತ್ತು ಅದನ್ನು ಅವಶ್ಯಕವಾಗಬಹುದಾದ ಅಥವಾ ತಾನು ನೀಡುವ ನಿರ್ದೇಶನಗಳಿಗೆ ಅನುಸಾರವಾಗಿ ಮುಂದಿನ ಕ್ರಮ ಕೈಗೊಳ್ಳುವುದಕ್ಕಾಗಿ ರಾಜ್ಯ ಸರ್ಕಾರಕ್ಕೆ ಕಳುಹಿಸತಕ್ಕದ್ದು.

(5) ರಾಜ್ಯ ಸರ್ಕಾರವು, ವಿಚಾರಣೆಯ ವರದಿಯಲ್ಲಿಯ ತೀರ್ಮಾನಗಳಿಗೆ ಸಂಬಂಧಿಸಿದಂತೆ ಕುಲಾಧಿಪತಿಯವರು ಮತ್ತು ಸರ್ಕಾರವು ನೀಡಿದ ನಿರ್ದೇಶನಗಳಿಗೆ ಅನುಸಾರವಾಗಿ ಕ್ರಮಕೈಗೊಳ್ಳಲು ಕುಲಪತಿಯವರಿಗೆ ನಿರ್ದೇಶನವನ್ನು ನೀಡತಕ್ಕದ್ದು ಮತ್ತು ಅಂಥ ಕ್ರಮ ತೆಗೆದುಕೊಳ್ಳುವುದಕ್ಕೆ ಒಂದು ಕಾಲಮಿತಿಯನ್ನು ನಿಗದಿಗೊಳಿಸತಕ್ಕದ್ದು.

(6) ಕುಲಪತಿಯು, ಹಾಗೆ ನಿಗದಿಗೊಳಿಸಿದ ಕಾಲಮಿತಿಯಯೊಳಗೆ, ಸರ್ಕಾರದ ನಿರ್ದೇಶನಗಳಿಗೆ ಅನುಸಾರವಾಗಿ ಕೈಗೊಂಡ ಕ್ರಮದ ಬಗ್ಗೆ ಅಥವಾ ಕೈಗೊಳ್ಳಲು ಉದ್ದೇಶಿಸಿದ ಕ್ರಮದ ಬಗ್ಗೆ ರಾಜ್ಯ ಸರ್ಕಾರಕ್ಕೆ ಒಂದು ವರದಿಯನ್ನು ಕಳುಹಿಸತಕ್ಕದ್ದು.

(7) ಸರ್ಕಾರವು, ನಿಗದಿಪಡಿಸಲಾದ ಕಾಲಮಿತಿಯೊಳಗೆ ತನಗೆ ತೃಪ್ತಿಕರವಾಗುವಂತೆ ವಿಶ್ವವಿದ್ಯಾಲಯವು ಕ್ರಮಕೈಗೊಳ್ಳದಿದ್ದಲ್ಲಿ ಮತ್ತು ವಿಶ್ವವಿದ್ಯಾಲಯವು ನೀಡಿದ ಯಾವುದೇ ವಿವರಣೆ ಅಥವಾ ಸಲ್ಲಿಸಿದ ಮನವಿಯನ್ನು ಪರಿಶೀಲಿಸಿದ ತರುವಾಯ, ತಾನು ಸೂಕ್ತವೆಂದು ಭಾವಿಸಬಹುದಾದಂಥ ನಿರ್ದೇಶನಗಳನ್ನು ನೀಡಬಹುದು ಮತ್ತು ವಿಶ್ವವಿದ್ಯಾಲಯವು ಅಂಥ ನಿರ್ದೇಶನಗಳನ್ನು ಪಾಲಿಸತಕ್ಕದ್ದು.

(8) ಹಿಂದೆ ಹೇಳಿದ ಉಪಪ್ರಕರಣಗಳಲ್ಲಿ ಏನೇ ಇದ್ದರೂ, ವಿಶ್ವವಿದ್ಯಾಲಯದ ವ್ಯವಹಾರಗಳನ್ನು ವಿಶ್ವವಿದ್ಯಾಲಯದ ಧ್ಯೇಯೋದ್ದೇಶಗಳ ಈಡೇರಿಕೆಗೆ ಅಥವಾ ಈ ಅಧಿನಿಯಮದ ಅಥವಾ ಶಾಸನಗಳ ಅಥವಾ ವಿನಿಯಮಗಳ ಉಪಬಂಧಗಳಿಗೆ ಅಥವಾ ಬೋಧನೆ, ಪರೀಕ್ಷೆಗಳು, ಸಂಶೋಧನೆ ಅಥವಾ ವಿಸ್ತರಣಾ ಶಿಕ್ಷಣದ ಗುಣಮಟ್ಟಗಳನ್ನು ಕಾಯ್ದುಕೊಂಡು ಬರುವಲ್ಲಿ ಅಪೇಕ್ಷಣೀಯವಾದ ವಿಶೇಷ ಕ್ರಮಗಳಿಗೆ ಅನುಸಾರವಾಗಿ ನಿರ್ವಹಿಸುತ್ತಿಲ್ಲವೆಂದು ಯಾವುದೇ ಸಮಯದಲ್ಲಿ ಕುಲಾಧಿಪತಿಯವರು ಅಭಿಪ್ರಾಯಪಟ್ಟರೆ, ತಾವು ಯಾವ ವಿಷಯದ ಬಗ್ಗೆ ವಿವರಣೆಯನ್ನು ಅಪೇಕ್ಷಿಸುವರೋ, ಆ ವಿಷಯವನ್ನು ವಿಶ್ವವಿದ್ಯಾಲಯದ ಗಮನಕ್ಕೆ ತರತಕ್ಕದ್ದು ಮತ್ತು ಕುಲಾಧಿಪತಿಯವರು ನಿರ್ದಿಷ್ಟಪಡಿಸಬಹುದಾದ ಕಾಲಮಿತಿಯ ಒಳಗೆ ಅಂಥ ವಿವರಣೆಯನ್ನು ಕೊಡುವಂತೆ ವಿಶ್ವವಿದ್ಯಾಲಯವನ್ನು ಕೇಳಬಹುದು. ಕುಲಾಧಿಪತಿಯವರು ನಿರ್ದಿಷ್ಟಪಡಿಸಬಹುದಾದ ಅವಧಿಯೊಳಗೆ ಯಾವುದೇ ವಿವರಣೆಯನ್ನು ನೀಡಲು ತಪ್ಪಿದರೆ ಅಥವಾ ನೀಡಿದ ವಿವರಣೆಯು ತೃಪ್ತಿಕರವಾಗಿಲ್ಲವೆಂದು ಕುಲಾಧಿಪತಿಯವರು ಅಭಿಪ್ರಾಯಪಟ್ಟರೆ, ಕುಲಾಧಿಪತಿಯವರು ತಾವು ಅವಶ್ಯಕವೆಂದು ಮತ್ತು ಆ ಪ್ರಕರಣದ ಸನ್ನಿವೇಶಗಳಲ್ಲಿ ಅಪೇಕ್ಷಣೀಯವೆಂದು ಅಭಿಪ್ರಾಯ ಪಡುವಂಥ ಸೂಚನೆಗಳನ್ನು ನೀಡಬಹುದು ಮತ್ತು ಆ ಸೂಚನೆಗಳನ್ನು ಜಾರಿಗೊಳಿಸುವುದಕ್ಕಾಗಿ ಅವಶ್ಯಕವಾದಂಥ ಅಧಿಕಾರಗಳನ್ನು ಚಲಾಯಿಸಬಹುದು.

(9) ಕುಲಾಧಿಪತಿಯವರು ಅಗತ್ಯವೆಂದು ನಿರ್ದೇಶಿಸಬಹುದಾದಂಥ ವಿಶ್ವವಿದ್ಯಾಲಯದ ಆಡಳಿತಕ್ಕೆ ಸಂಬಂಧಪಡುವ ಮಾಹಿತಿಯನ್ನು ವಿಶ್ವವಿದ್ಯಾಲಯವು ಒದಗಿಸತಕ್ಕದ್ದು.

(10) ರಾಜ್ಯ ಸರ್ಕಾರವು, ರಾಜ್ಯ ಪತ್ರದಲ್ಲಿ ಆದೇಶವನ್ನು ಪ್ರಕಟಿಸುವ ಮೂಲಕ ವಿಶ್ವವಿದ್ಯಾಲಯದ ಯಾವುದೇ ಆದೇಶ, ಅಧಿಸೂಚನೆ, ನಿರ್ಣಯ ಅಥವಾ ಯಾವುದೇ ನಡವಳಿಗಳು ಈ ಅಧಿನಿಯಮದ ಅಥವಾ ಶಾಸನಗಳು, ವಿನಿಯಮಗಳು ಅಥವಾ ಪರಿನಿಯಮಗಳ ಉಪಬಂಧಗಳಿಗೆ ಅನುಸಾರವಾಗಿ ಇಲ್ಲವೆಂದು ಅಥವಾ ಅನ್ಯಥಾ ರಾಜ್ಯ ಸರ್ಕಾರದ ನೀತಿಗಳಿಗೆ ಅಸಂಗತವಾಗಿವೆ ಎಂದು ಅಭಿಪ್ರಾಯಪಟ್ಟಲ್ಲಿ ಅವುಗಳನ್ನು ರದ್ದುಗೊಳಿಸಬಹುದು:

ಪರಂತು, ಅಂಥ ಆದೇಶವನ್ನು ಮಾಡುವ ಮೊದಲು ರಾಜ್ಯ ಸರ್ಕಾರವು, ಅಂಥ ಆದೇಶವನ್ನು ಏಕೆ ಮಾಡಕೂಡದೆಂಬ ಬಗ್ಗೆ ಕಾರಣ ತೋರಿಸುವಂತೆ ವಿಶ್ವವಿದ್ಯಾಲಯವನ್ನು ಕೇಳತಕ್ಕದ್ದು ಮತ್ತು ಸಮಂಜಸ ಕಾಲವಧಿಯೊಳಗೆ ಕಾರಣವನ್ನು ತೋರಿಸಿದರೆ ಅದನ್ನು ಪರಿಶೀಲಿಸತಕ್ಕದ್ದು.

**9. ರಾಯಚೂರಿನ ಕೃಷಿ ವಿಜ್ಞಾನಗಳ ವಿಶ್ವವಿದ್ಯಾಲಯಕ್ಕೆ ಕೆಲವು ಕಾಲೇಜುಗಳು ಮತ್ತು ಸಂಸ್ಥೆಗಳ ವರ್ಗಾವಣೆ.–** ಈ ಅಧಿನಿಯಮವು ಪ್ರಾರಂಭವಾದ ದಿನಾಂಕದಂದು ಮತ್ತು ಅಂದಿನಿಂದ ಪ್ರಾರಂಭಿಸಿ,–

(ಎ) ಈ ಅಧಿನಿಯಮವು ಪ್ರಾರಂಭವಾಗುವ ಪೂರ್ವದಲ್ಲಿ ಹಾಗೂ 3ನೇ ಪ್ರಕರಣದ (1)ನೇ ಉಪಪ್ರಕರಣದ (ಬಿ) ಖಂಡದಲ್ಲಿ ಉಲ್ಲೇಖಿಸಿರುವ ವಿಶ್ವವಿದ್ಯಾಲಯದ ಒಡೆತನದಲ್ಲಿರುವ ಮತ್ತು ನಿರ್ವಹಣೆಯಲ್ಲಿರುವ ರಾಯಚೂರಿನ ಕೃಷಿ ವಿಜ್ಞಾನಗಳ ವಿಶ್ವವಿದ್ಯಾಲಯದ ಪ್ರಾದೇಶಿಕ ಅಧಿಕಾರ ವ್ಯಾಪ್ತಿಯೊಳಗೆ ಇರುವ, ಎಲ್ಲಾ ಕಾಲೇಜುಗಳು, ಲಗತ್ತಾದ ಹಾಸ್ಟೆಲುಗಳು, ಪೀಠೋಪಕರಣಗಳ ವಸ್ತುಗಳೊಡನೆ ಇತರ ಕಟ್ಟಡಗಳು, ಗ್ರಂಥಾಲಯಗಳು, ಪುಸ್ತಕಗಳು, ಪ್ರಯೋಗಾಲಯಗಳು, ಉಗ್ರಾಣಗಳು, ಉಪಕರಣಗಳು, ಸಲಕರಣೆಗಳು, ಪರಿಕರಗಳು ಮತ್ತು ಸಾಧನ ಸಾಮಗ್ರಿ ಹಾಗೂ ಎಲ್ಲಾ ಇತರ ಚರ ಮತ್ತು ಸ್ಥಿರ ಎರಡೂ ಸ್ವತ್ತುಗಳು, ಸಂಶೋಧನೆಯ ಮತ್ತು ಇತರ ಸಂಸ್ಥೆಗಳು, ಎಲ್ಲಾ ಸ್ವತ್ತು ಹಕ್ಕುಗಳು, ಆಸ್ತಿ ಹಕ್ಕುಗಳು, ಹೊಣೆಗಾರಿಕೆಗಳು ಮತ್ತು ಬಾಧ್ಯತೆಗಳೊಂದಿಗೆ ರಾಯಚೂರಿನ ಕೃಷಿ ವಿಜ್ಞಾನಗಳ ವಿಶ್ವವಿದ್ಯಾಲಯಕ್ಕೆ ವರ್ಗಾವಣೆಗೊಳ್ಳತಕ್ಕದ್ದು ಮತ್ತು ಅದರಲ್ಲಿ ನಿಹಿತಗೊಳ್ಳತಕ್ಕದ್ದು:

ಪರಂತು, ರಾಜ್ಯ ಸರ್ಕಾರವು ರಾಯಚೂರಿನ ಕೃಷಿ ವಿಜ್ಞಾನಗಳ ವಿಶ್ವವಿದ್ಯಾಲಯಕ್ಕೆ ರಾಯಚೂರಿನಲ್ಲಿ ಕ್ಯಾಂಪಸನ್ನು ಅಭಿವೃದ್ಧಿಪಡಿಸುವುದಕ್ಕಾಗಿ ತಾನು ಸರಿಯೆಂದು ಭಾವಿಸಬಹುದಾದಂಥ ಹೆಚ್ಚುವರಿ ಅಭಿವೃದ್ಧಿ ಅನುದಾನವನ್ನು ನೀಡಬಹುದು.

(ಬಿ) (i) ಈ ಅಧಿನಿಯಮದ ಪ್ರಾರಂಭಕ್ಕೆ ಮುಂಚೆ, ರಾಯಚೂರಿನ ಕೃಷಿ ವಿಜ್ಞಾನಗಳ ವಿಶ್ವವಿದ್ಯಾಲಯಕ್ಕೆ ವರ್ಗಾವಣೆಗೊಂಡ ಕಾಲೇಜುಗಳಲ್ಲಿ 3ನೇ ಪ್ರಕರಣದ (1) ನೇ ಉಪಪ್ರಕರಣದ (ಬಿ) ಖಂಡದಲ್ಲಿ ಉಲ್ಲೇಖಿಸಿದ ವಿಶ್ವವಿದ್ಯಾಲಯದಲ್ಲಿ ಯಾವುದೇ ಪರೀಕ್ಷೆಗೆ ವ್ಯಾಸಂಗ ಮಾಡುತ್ತಿರುವ ಯಾವೊಬ್ಬ ವಿದ್ಯಾರ್ಥಿಗೆ ರಾಯಚೂರಿನ ಕೃಷಿ ವಿಜ್ಞಾನಗಳ ವಿಶ್ವವಿದ್ಯಾಲಯಗಳಲ್ಲಿ ತನ್ನ ವ್ಯಾಸಂಗ ಕ್ರಮವನ್ನು ಪೂರ್ಣಗೊಳಿಸಲು ಅನುಮತಿ ನೀಡತಕ್ಕದ್ದು ಮತ್ತು ರಾಯಚೂರಿನ ಕೃಷಿ ವಿಜ್ಞಾನಗಳ ವಿಶ್ವವಿದ್ಯಾಲಯವು ಆ ವಿಶ್ವವಿದ್ಯಾಲಯದ ಪಠ್ಯಕ್ರಮಗಳ ಅನುಸಾರವಾಗಿ ನಿಯಮಿಸಬಹುದಾದಂಥ ಅವಧಿಯವರೆಗೆ ಅಂಥ ವಿದ್ಯಾರ್ಥಿಗಳಿಗಾಗಿ ಪರೀಕ್ಷೆಗಳನ್ನು ನಡೆಸಲು ಏರ್ಪಾಡುಗಳನ್ನು ಮಾಡತಕ್ಕದ್ದು.

(ii) ಈ ಅಧಿನಿಯಮದ ಪ್ರಾರಂಭಕ್ಕೆ ಮುಂಚೆ, 3ನೇ ಪ್ರಕರಣದ (1)ನೇ ಉಪ-ಪ್ರಕರಣದ (ಬಿ) ಖಂಡದಲ್ಲಿ ಉಲ್ಲೇಖಿಸಲಾದ ವಿಶ್ವವಿದ್ಯಾಲಯವು, ಯಾವುದೇ ಪರೀಕ್ಷೆಯನ್ನು ನಡೆಸಿದ್ದು, ಕೋರ್ಸಿನ ಅಗತ್ಯತೆಗಳನ್ನು ಪೂರೈಸಿದ್ದು ಅಂಥ ಪರೀಕ್ಷೆಯ ಫಲಿತಾಂಶಗಳನ್ನು ಘೋಷಿಸಿರದಿದ್ದರೆ, ಆಗ ಧಾರವಾಡದ ಕೃಷಿ ವಿಜ್ಞಾನಗಳ ವಿಶ್ವವಿದ್ಯಾಲಯವು ಫಲಿತಾಂಶವನ್ನು ಘೋಷಿಸಬಹುದು ಮತ್ತು ಪದವಿಯನ್ನು ಪ್ರದಾನ ಮಾಡಬಹುದು.

(ಸಿ) ಈ ಅಧಿನಿಯಮವು ಪ್ರಾರಂಭವಾಗುವ ದಿನಾಂಕಕ್ಕಿಂತ ಮುಂಚೆ ರಾಯಚೂರಿನ ಕೃಷಿ ವಿಜ್ಞಾನಗಳ ವಿಶ್ವವಿದ್ಯಾಲಯದ ಅಧಿಕಾರ ಕ್ಷೇತ್ರ ವ್ಯಾಪ್ತಿಯೊಳಗೆ ಇರುವ 3ನೇ ಪ್ರಕರಣದ (1) ನೇ ಉಪಪ್ರಕರಣದಲ್ಲಿ (ಬಿ) ಖಂಡದಲ್ಲಿ ಉಲ್ಲೇಖಿಸಲಾದ ವಿಶ್ವವಿದ್ಯಾಲಯದ ಯಾವುದೇ ಸಂಸ್ಥೆಗಳಲ್ಲಿ ಕೆಲಸ ಮಾಡುತ್ತಿರುವ ಅಥವಾ ಅದಕ್ಕೆ ಲಗತ್ತಾದ ಯಾವೊಬ್ಬ ಅಧ್ಯಾಪಕ ಮತ್ತು ಇತರ ಸಿಬ್ಬಂದಿಯು ಆ ದಿನಾಂಕದಿಂದಲೇ ರಾಯಚೂರಿನ ಕೃಷಿ ವಿಜ್ಞಾನಗಳ ವಿಶ್ವವಿದ್ಯಾಲಯದಲ್ಲಿನ ಸಮುಚಿತ ಕೇಡರ್ ಅಥವಾ ಹುದ್ದೆಗಳ ಶ್ರೇಣಿಗಳಿಗೆ ವರ್ಗಾವಣೆಗೊಳ್ಳತಕ್ಕದ್ದು:

ಪರಂತು, ಹಾಗೆ ವರ್ಗಾವಣೆಗೊಂಡ ಯಾವೊಬ್ಬ ಅಧ್ಯಾಪಕರು ಅಥವಾ ಇತರ ಸಿಬ್ಬಂದಿಯು ಈ ಅಧಿನಿಯಮವು ಪ್ರಾರಂಭವಾದ ದಿನಾಂಕದಿಂದ ತೊಂಬತ್ತು ದಿನಗಳೊಳಗಾಗಿ ಅಥವಾ ರಾಜ್ಯ ಸರ್ಕಾರವು ಆದೇಶದ ಮೂಲಕ ನಿರ್ದೇಶಿಸಬಹುದಾದ ಆರು ತಿಂಗಳಿಗೆ ಮೀರದ ಮುಂದಿನ ಅವಧಿಯ ಒಳಗೆ ರಾಜ್ಯ ಸರ್ಕಾರಕ್ಕೆ ಧಾರವಾಡದ ಕೃಷಿ ವಿಜ್ಞಾನಗಳ ವಿಶ್ವವಿದ್ಯಾಲಯಕ್ಕೆ ವರ್ಗಾವಣೆಯನ್ನು ಕೋರಿ ಅರ್ಜಿ ಸಲ್ಲಿಸಬಹುದು ಮತ್ತು ಇದರ ಬಗ್ಗೆ ರಾಜ್ಯ ಸರ್ಕಾರದ ನಿರ್ಣಯವು ಅಂತಿಮವಾಗಿರತಕ್ಕದ್ದು;

(ಡಿ) ರಾಯಚೂರಿನ ಕೃಷಿ ವಿಜ್ಞಾನಗಳ ವಿಶ್ವವಿದ್ಯಾಲಯಕ್ಕೆ ವರ್ಗಾವಣೆ ಬಯಸಿದ ಧಾರವಾಡದ ಕೃಷಿ ವಿಜ್ಞಾನಗಳ ವಿಶ್ವವಿದ್ಯಾಲಯದ ಯಾವೊಬ್ಬ ಅಧ್ಯಾಪಕ ಅಥವಾ ಇತರ ಸಿಬ್ಬಂದಿಯು ಈ ಅಧಿನಿಯಮವು ಪ್ರಾರಂಭವಾದ ದಿನಾಂಕದಿಂದ ತೊಂಬತ್ತು ದಿನಗಳೊಳಗೆ ಅಥವಾ ರಾಜ್ಯ ಸರ್ಕಾರವು ಆದೇಶದ ಮೂಲಕ ನಿರ್ದೇಶಿಸಬಹುದಾದ ಆರು ತಿಂಗಳು ಮೀರದ ಮುಂದಿನ ಅವಧಿಯ ಒಳಗೆ ರಾಜ್ಯ ಸರ್ಕಾರಕ್ಕೆ ರಾಯಚೂರಿನ ಕೃಷಿ ವಿಜ್ಞಾನಗಳ ವಿಶ್ವವಿದ್ಯಾಲಯಕ್ಕೆ ವರ್ಗಾವಣೆಯನ್ನು ಕೋರಿ ಅರ್ಜಿಯನ್ನು ಸಲ್ಲಿಸಬಹುದು ಮತ್ತು ಇದರ ಬಗ್ಗೆ ರಾಜ್ಯ ಸರ್ಕಾರದ ನಿರ್ಣಯವು ಅಂತಿಮವಾಗಿರತಕ್ಕದ್ದು;

(ಇ) ರಾಜ್ಯ ಸರ್ಕಾರವು ಧಾರವಾಡದ ಕೃಷಿ ವಿಜ್ಞಾನಗಳ ವಿಶ್ವವಿದ್ಯಾಲಯದ ಮತ್ತು ರಾಯಚೂರಿನ ಕೃಷಿ ವಿಜ್ಞಾನಗಳ ವಿಶ್ವವಿದ್ಯಾಲಯದ ಕುಲಪತಿಯವರೊಡನೆ ಸಮಾಲೋಚಿಸಿ, ಈ ವಿಶ್ವವಿದ್ಯಾಲಯಗಳಲ್ಲಿ ಹೆಚ್ಚುವರಿಯಾಗಿ ಇರುವ ಬೋಧಿಸುವ ಮತ್ತು ಇತರ ಸಿಬ್ಬಂದಿಯು ಯಾರಾದರೂ ಇದ್ದರೆ, ಅದನ್ನು ನಿರ್ಧರಿಸಿ, ಹಾಗೆ ಹೆಚ್ಚುವರಿಯಾಗಿ ಇರುವ ಸಿಬ್ಬಂದಿಯನ್ನು ಸಂದರ್ಭಾನುಸಾರ ಧಾರವಾಡದ ಕೃಷಿ ವಿಜ್ಞಾನಗಳ ವಿಶ್ವವಿದ್ಯಾಲಯಕ್ಕೆ ಅಥವಾ ರಾಯಚೂರಿನ ಕೃಷಿ ವಿಜ್ಞಾನಗಳ ವಿಶ್ವವಿದ್ಯಾಲಯಕ್ಕೆ ತಾನು ಯುಕ್ತವೆಂದು ಪರಿಗಣಿಸಬಹುದಾದರಿಂದ ತತ್ವಗಳು ಮತ್ತು ಕಾರ್ಯವಿಧಾನಗಳನ್ನು ಅನುಸರಿಸಿದ ತರುವಾಯ ವರ್ಗಾಯಿಸಬಹುದು.

**10. ನಿರ್ದೇಶನಗಳನ್ನು ನೀಡಲು ಅಧಿಕಾರ.–** ಕುಲಾಧಿಪತಿಯು, ತಾನಾಗಿಯೇ ಅಥವಾ ರಾಜ್ಯ ಸರ್ಕಾರದ ಶಿಫಾರಸ್ಸಿನ ಮೇಲೆ, ವಿಶ್ವವಿದ್ಯಾಲಯದ ಆಡಳಿತ ಮತ್ತು ವಿದ್ಯಾ ವಿಷಯಕ ಕಾರ್ಯ ನಿರ್ವಹಣೆಯ ಹಿತದೃಷ್ಟಿಯಿಂದ ಅದರಲ್ಲೂ ಶಾಂತಿ ಮತ್ತು ನೆಮ್ಮದಿಯನ್ನು ಕಾಯ್ದುಕೊಂಡು ಬರುವ ದೃಷ್ಟಿಯಿಂದ ಮತ್ತು ಸ್ವತ್ತು ಹಾಗೂ ಹಣಕಾಸುಗಳನ್ನು ಸಂರಕ್ಷಿಸುವುದಕ್ಕಾಗಿ ಅವಶ್ಯಕ ಅಥವಾ ಯುಕ್ತವಾಗಬಹುದಾದಂಥ ನಿರ್ದೇಶನಗಳನ್ನು ನೀಡಬಹುದು.

## ಅಧ್ಯಾಯ - III

## ವಿಶ್ವವಿದ್ಯಾಲಯದ ಪ್ರಾಧಿಕಾರಗಳು

**11. ವಿಶ್ವವಿದ್ಯಾಲಯದ ಪ್ರಾಧಿಕಾರಗಳು.–** ಈ ಮುಂದಿನವು ವಿಶ್ವವಿದ್ಯಾಲಯದ ಪ್ರಾಧಿಕಾರಗಳಾಗಿರತಕ್ಕದ್ದು ಎಂದರೆ:–

(1) ವ್ಯವಸ್ಥಾಪನಾ ಮಂಡಳಿ

(2) ವಿದ್ಯಾವಿಷಯಕ ಪರಿಷತ್ತು

(3) ಸಂಶೋಧನಾ ಪರಿಷತ್ತು

(4) ವಿಸ್ತರಣಾ ಶಿಕ್ಷಣ ಪರಿಷತ್ತು

(5) ಸ್ನಾತಕೋತ್ತರ ವ್ಯಾಸಂಗಗಳು ಮತ್ತು ಅವುಗಳ ವ್ಯಾಸಂಗ ಮಂಡಳಿಗಳೂ ಸೇರಿದಂತೆ ಫ್ಯಾಕಲ್ಟಿ.

(6) ಶಾಸನಗಳ ಮೂಲಕ ವಿಶ್ವವಿದ್ಯಾಲಯದ ಪ್ರಾಧಿಕಾರಗಳು ಎಂಬುದಾಗಿ ಘೋಷಿಸಿರಬಹುದಾದಂಥ ವಿಶ್ವವಿದ್ಯಾಲಯದ ಇತರ ನಿಕಾಯಗಳು

**12. ವ್ಯವಸ್ಥಾಪನಾ ಮಂಡಳಿ ಮತ್ತು ಅದರ ರಚನೆ.–** (1) ಕುಲಾಧಿಪತಿಯವರು ಅದಷ್ಟು ಬೇಗನೆ ವ್ಯವಸ್ಥಾಪನಾ ಮಂಡಳಿಯನ್ನು ರಚಿಸತಕ್ಕದ್ದು.

(2) ವ್ಯವಸ್ಥಾಪನಾ ಮಂಡಳಿಯು ಈ ಮುಂದಿನವರನ್ನು ಒಳಗೊಂಡಿರತಕ್ಕದ್ದು:–

(i) ಕುಲಪತಿ – ಇವರು ಅಧ್ಯಕ್ಷರಾಗಿರತಕ್ಕದ್ದು.

(ii) ಕೃಷಿ ಇಲಾಖೆಯ ಪ್ರಭಾರವುಳ್ಳ ಕರ್ನಾಟಕ ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು ಅಥವಾ ಕಾರ್ಯದರ್ಶಿಗಳು.

(iii) ಕರ್ನಾಟಕ ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು ಅಥವಾ ಕಾರ್ಯದರ್ಶಿಗಳು ಆರ್ಥಿಕ ಇಲಾಖೆ ಅಥವಾ ಉಪಕಾರ್ಯದರ್ಶಿ ದರ್ಜೆಗಿಂತ ಕಡಿಮೆ ದರ್ಜೆಯವರಲ್ಲದ ಅವರ ನಾಮನಿರ್ದೇಶಿತರು.

(iv) ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು ಅಥವಾ ಕಾರ್ಯದರ್ಶಿಗಳು ಅರಣ್ಯ, ಪರಿಸರ ಮತ್ತು ಜೀವಿಪರಿಸರಶಾಸ್ತ್ರ ಇಲಾಖೆ ಅಥವಾ ಉಪಕಾರ್ಯದರ್ಶಿ ದರ್ಜೆಗಿಂತ ಕಡಿಮೆ ದರ್ಜೆಯವರಲ್ಲದ ಅವರ ನಾಮನಿರ್ದೇಶಿತರು.

(v) ತೋಟಗಾರಿಕೆ ಇಲಾಖೆಯ ಪ್ರಭಾರವುಳ್ಳ ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು ಅಥವಾ ಕಾರ್ಯದರ್ಶಿಗಳು

(vi) ರಾಜ್ಯ ಸರ್ಕಾರವು ನಾಮನಿರ್ದೇಶಿಸಿದ ವಿಶ್ವವಿದ್ಯಾಲಯದ ಪದವೀಧರರಾಗಿ ಐದು ವರ್ಷಗಳಿಂತ ಕಡಿಮೆ ಅವಧಿ ಆಗಿರದ ಪೈಕಿಯಿಂದ ಸರ್ಕಾರದ ನೌಕರರಲ್ಲದ ಅಥವಾ ವಿಶ್ವವಿದ್ಯಾಲಯದ ನೌಕರರಲ್ಲದ ಒಬ್ಬ ವ್ಯಕ್ತಿ.

(vii) ರಾಜ್ಯ ಸರ್ಕಾರದಿಂದ ನಾಮನಿರ್ದೇಶಿತರಾದ ವಿಶ್ವವಿದ್ಯಾಲಯದ ಅಧಿಕಾರ ಕ್ಷೇತ್ರ ವ್ಯಾಪ್ತಿಯಲ್ಲಿರುವ ಐವರು ಪ್ರಗತಿಪರ ರೈತರು ಇವರ ಪೈಕಿ ಇಬ್ಬರು ಅನುಸೂಚಿತ ಜಾತಿ ಅಥವಾ ಅನುಸೂಚಿತ ಪಂಗಡಕ್ಕೆ ಸೇರಿದವರಾಗಿರತಕ್ಕದ್ದು;

(viii) ಸಭಾಧ್ಯಕ್ಷರು ನಾಮನಿರ್ದೇಶನ ಮಾಡಿದ ಕರ್ನಾಟಕ ರಾಜ್ಯ ವಿಧಾನಸಭೆಯ ಇಬ್ಬರು ಸದಸ್ಯರು ಹಾಗೂ ಸಭಾಪತಿಯವರು ನಾಮನಿರ್ದೇಶನ ಮಾಡಿದ ಕರ್ನಾಟಕ ವಿಧಾನ ಪರಿಷತ್ತಿನ ಒಬ್ಬರು ಸದಸ್ಯರು ;

(ix) ಕುಲಾಧಿಪತಿಯವರು ನಾಮನಿರ್ದೇಶನ ಮಾಡಿದ ಕೃಷಿ ಮತ್ತು ಸಂಬಂಧಿಸಿದ ವಿಜ್ಞಾನಗಳ ಕ್ಷೇತ್ರದಿಂದ ವಿಶ್ವವಿದ್ಯಾಲಯದ ಅಧಿಕಾರ ಕ್ಷೇತ್ರ ವ್ಯಾಪ್ತಿಯ ಹೊರಗಿನವರಾದ ಪ್ರೊಫೆಸರ್ ದರ್ಜೆಗಿಂತ ಕಡಿಮೆ ದರ್ಜೆಯವರಲ್ಲದ ಒಬ್ಬ ಪ್ರಖ್ಯಾತ ಶಿಕ್ಷಣ ತಜ್ಞರು;

(x) ಕುಲಾಧಿಪತಿಯವರು ನಾಮನಿರ್ದೇಶನ ಮಾಡಿದ ಒಬ್ಬ ಕೃಷಿ ಉದ್ಯಮಿ;

(xi) ಕುಲಾಧಿಪತಿಯವರು ನಾಮನಿರ್ದೇಶನ ಮಾಡಿದ ಗ್ರಾಮೀಣಾಭಿವೃದ್ಧಿ ಕಾರ್ಯಕರ್ತರಾಗಿ ಹಿನ್ನೆಲೆಯುಳ್ಳ ಒಬ್ಬ ಮಹಿಳಾ ಸಮಾಜ ಸೇವಕರು;

(xii) ಭಾರತೀಯ ಕೃಷಿ ಸಂಶೋಧನಾ ಪರಿಷತ್ತಿನ ಮಹಾ ನಿರ್ದೇಶಕರು ನಾಮನಿರ್ದೇಶನ ಮಾಡಿದ ಆ ಸಂಸ್ಥೆಯ ಒಬ್ಬ ಪ್ರತಿನಿಧಿ;

(xiii) ವಿಶ್ವವಿದ್ಯಾಲಯದ ಶಿಕ್ಷಣ ನಿರ್ದೇಶಕರು;

(xiv) ಕೃಷಿ ಆಯುಕ್ತರು, ಕರ್ನಾಟಕ;

(xv) ಕುಲಪತಿಯವರು–ಸುತ್ತು ಸರದಿಯ ಮೇಲೆ ಎರಡು ವರ್ಷಗಳ ಅವಧಿಯವರೆಗೆ ನಾಮನಿರ್ದೇಶನ ಮಾಡಿದ ಒಬ್ಬ ಡೀನ್;

(xvi) ಕುಲಸಚಿವರು, ಇವರು ಸದಸ್ಯ ಕಾರ್ಯದರ್ಶಿಯಾಗಿರತಕ್ಕದ್ದು;

(3) ಪದನಿಮಿತ್ತ ಸದಸ್ಯರುಗಳನ್ನು ಹೊರತುಪಡಿಸಿ ಮಂಡಳಿಯ ಸದಸ್ಯರ ಪದಾವಧಿಯು ಸಂದರ್ಭಾನುಸಾರ ಸರ್ಕಾರ ಅಥವಾ ಕುಲಾಧಿಪತಿಯವರ ಇಚ್ಛೆಗೊಳಪಟ್ಟು ಮೂರು ವರ್ಷಗಳಾಗಿರತಕ್ಕದ್ದು ಮತ್ತು ಅವರುಗಳು ವಿಶ್ವವಿದ್ಯಾಲಯದ ಯಾವುದೇ ಪ್ರಾಧಿಕಾರಕ್ಕೂ ಯಾವುದೇ ಪ್ರವರ್ಗದಲ್ಲೂ ಪುನರ್ ನಾಮನಿರ್ದೇಶನಗೊಳ್ಳಲು ಅರ್ಹರಾಗಿರತಕ್ಕದ್ದಲ್ಲ;

(4) ಪದಾವಧಿ ಮುಕ್ತಾಯವಾದ ಸಂದರ್ಭವನ್ನು ಹೊರತುಪಡಿಸಿ ಮರಣ, ರಾಜಿನಾಮೆ, ತೆಗೆದು ಹಾಕುವಿಕೆ ಅಥವಾ ಯಾವುದೇ ಇತರ ಕಾರಣಗಳಿಂದಾಗಿ ಯಾವೊಬ್ಬ ಸದಸ್ಯರ ಸ್ಥಾನವು ಖಾಲಿಯಾದಾಗ ಆ ಖಾಲಿ ಸ್ಥಾನವನ್ನು ಈ ಅಧಿನಿಯಮದ ಉಪಬಂಧಗಳಿಗೆ ಅನುಸಾರವಾಗಿ ಭರ್ತಿ ಮಾಡತಕ್ಕದ್ದು ಮತ್ತು ಅಂತಹ ಖಾಲಿ ಸ್ಥಾನವನ್ನು ತುಂಬುವ ವ್ಯಕ್ತಿಯು ಯಾವ ಖಾಲಿ ಸ್ಥಾನಕ್ಕೆ ಆತನು ನಾಮನಿರ್ದೇಶಿತನಾಗಿದ್ದಾನೆಯೋ ಆ ವ್ಯಾಪ್ತಿಯ ಉಳಿದ ಪದಾವಧಿವರೆಗೆ ಆ ಸ್ಥಾನವನ್ನು ಹೊಂದಿರತಕ್ಕದ್ದು.

(5) ಮಂಡಳಿಯ ಸಭೆಗಾಗಿ ಮಂಡಳಿಯ ಸದಸ್ಯರ ಮೂರನೇ ಒಂದು ಭಾಗದಷ್ಟು ಸದಸ್ಯರು ಸಭೆಯ ಕೋರಂ ಆಗಿರತಕ್ಕದ್ದು:

ಪರಂತು ಕೋರಂ ಇಲ್ಲದಿದುದರಿಂದಾಗಿ ಮಂಡಳಿಯ ಒಂದು ಸಭೆಯನ್ನು ಮುಂದೂಡಿದ್ದರೆ, ಅದೇ ವ್ಯವಹಾರಗಳನ್ನು ನಡೆಸುವುದಕ್ಕಾಗಿ ಕರೆದ ಮುಂದಿನ ಸಭೆಯಲ್ಲಿ ಕೋರಂನ ಅವಶ್ಯಕತೆ ಇರುವುದಿಲ್ಲ.

(6) ವಿಶ್ವವಿದ್ಯಾಲಯದ ಅಧಿಕಾರಿಗಳನ್ನು ಹೊರತುಪಡಿಸಿ ಮಂಡಳಿಯ ಸದಸ್ಯರು ಈ ಅಧಿನಿಯಮದ ಅಡಿಯಲ್ಲಿ ತಾವು ನೆರವೇರಿಸಿದ ಪ್ರಕಾರ್ಯಗಳಿಗೆ, ನಿಯಮಿಸಬಹುದಾದಂಥ ದಿನ ಭತ್ಯೆ, ಪ್ರಯಾಣ ಭತ್ಯೆಯನ್ನು ಹೊರತುಪಡಿಸಿ ಯಾವುದೇ ಸಂಭಾವನೆಯನ್ನು ಪಡೆಯಲು ಅರ್ಹರಾಗಿರತಕ್ಕದ್ದಲ್ಲ.

(7) ಮಂಡಳಿಯು ತನ್ನ ಸಭೆಯಲ್ಲಿ ಪರಿಶೀಲಿಸುತ್ತಿರುವ ಯಾವುದೇ ವಿಷಯಗಳ ಬಗ್ಗೆ ತಜ್ಞ ಸಲಹೆ ಪಡೆಯಲು ಆ ವಿಷಯಗಳಲ್ಲಿ ಪರಿಣತಿ ಅಥವಾ ವಿಶೇಷ ಜ್ಞಾನವನ್ನು ಉಳ್ಳ ಯಾವೊಬ್ಬ ವ್ಯಕ್ತಿಯನ್ನು ತನ್ನ ಸಭೆಗೆ ಹಾಜರಾಗಲು ಆಹ್ವಾನಿಸಬಹುದು. ಅಂತಹ ವ್ಯಕ್ತಿಯು ಅಂತಹ ಸಭೆಯ ವ್ಯವಹರಣೆಗಳಲ್ಲಿ ಮಾತನಾಡಬಹುದು ಅಥವಾ ಅನ್ಯಥಾ ಭಾಗವಹಿಸಬಹುದು. ಆದರೆ, ಆತನು ಮತದಾನದ ಹಕ್ಕನ್ನು ಹೊಂದಿರುವುದಿಲ್ಲ. ಹಾಗೆ ಆಹ್ವಾನಿತರಾದ ಯಾವೊಬ್ಬ ವ್ಯಕ್ತಿಯು ಸಭೆಗೆ ಹಾಜರಾಗಿದ್ದಕ್ಕಾಗಿ ನಿಯಮಿಸಬಹುದಾದಂತಹ ಭತ್ಯೆ ಪಡೆಯಲು ಅರ್ಹನಾಗಿರತಕ್ಕದ್ದು.

(8) ಸಾಮಾನ್ಯವಾಗಿ ಮಂಡಳಿಯು ಪ್ರತಿ ಮೂರು ತಿಂಗಳಿಗೊಮ್ಮೆ ಕನಿಷ್ಠ ಒಂದು ಬಾರಿಯಾದರೂ ಕುಲಪತಿಯವರು ನಿಗದಿಪಡಿಸುವಂಥ ದಿನಾಂಕ ಮತ್ತು ಸ್ಥಳದಲ್ಲಿ ಸೇರತಕ್ಕದ್ದು. ಆದಾಗ್ಯೂ ಕುಲಪತಿಯವರು ತಾನು ಸೂಕ್ತವೆಂದು ಭಾವಿಸದಾಗಲೆಲ್ಲ, ಮಂಡಳಿಯ ಅರ್ಧಕ್ಕಿಂತ ಕಡಿಮೆಯಲ್ಲದ ಸದಸ್ಯರು ಬರೆದು ಸಹಿ ಮಾಡಿ ಕೋರಿಕೊಂಡಾಗ ಮಂಡಳಿಯ ವಿಶೇಷ ಸಭೆಯನ್ನು ಕರೆಯಬಹುದು.

**13. ಮಂಡಳಿಯ ಅಧಿಕಾರಗಳು ಮತ್ತು ಪ್ರಕಾರ್ಯಗಳು.**–(1) ಈ ಅಧಿನಿಯಮದ ಮತ್ತು ಶಾಸನಗಳ ಉಪಬಂಧಗಳಿಗೆ ಒಳಪಟ್ಟು, ಮಂಡಳಿಯು ವಿಶ್ವವಿದ್ಯಾಲಯದ ಮುಖ್ಯ ಕಾರ್ಯಕಾರಿ ನಿಕಾಯ ಆಗಿರತಕ್ಕದ್ದು ಮತ್ತು ವಿಶ್ವವಿದ್ಯಾಲಯದ ಸ್ವತ್ತುಗಳು ಮತ್ತು ಚಟುವಟಿಕೆಗಳನ್ನು ನಿರ್ವಹಿಸತಕ್ಕದ್ದು ಹಾಗೂ ಮೇಲ್ವಿಚಾರಣೆ ನಡೆಸತಕ್ಕದ್ದು ಮತ್ತು ಈ ಅಧಿನಿಯಮದಲ್ಲಿ ಅನ್ಯಥಾ ಉಪಬಂಧಿಸಿರದ ಹೊರತು ವಿಶ್ವವಿದ್ಯಾಲಯದ ಎಲ್ಲಾ ಆಡಳಿತಾತ್ಮಕ ವ್ಯವಹಾರಗಳನ್ನು ನಡೆಸಲು ಜವಾಬ್ದಾರಿಯಾಗಿರತಕ್ಕದ್ದು.

(2) (1)ನೇ ಉಪಪ್ರಕರಣದ ಉಪಬಂಧಗಳ ಸಾಮಾನ್ಯಾನ್ವಯಕ್ಕೆ ಬಾಧಕವಾಗದಂತೆ ಮಂಡಳಿಯು ಈ ಮುಂದಿನ ಅಧಿಕಾರಗಳನ್ನು ಚಲಾಯಿಸತಕ್ಕದ್ದು ಮತ್ತು ಪ್ರಕಾರ್ಯಗಳನ್ನು ನೆರವೇರಿಸತಕ್ಕದ್ದು, ಎಂದರೆ:–

(i) ವಿಶ್ವವಿದ್ಯಾಲಯದ ಹಣಕಾಸು ಅಂದಾಜುಗಳು ಮತ್ತು ಆಯವ್ಯಯವನ್ನು ಪರಿಗಣಿಸುವುದು ಮತ್ತು ಅನುಮೋದಿಸುವುದು;

(ii) ವಿಶ್ವವಿದ್ಯಾಲಯದ ಸ್ವತ್ತನ್ನು ಮತ್ತು ನಿಧಿಗಳನ್ನು ಹೊಂದಿರುವುದು ಮತ್ತು ನಿಯಂತ್ರಿಸುವುದು ಹಾಗೂ ವಿಶ್ವವಿದ್ಯಾಲಯದ ಪರವಾಗಿ ಯಾವುದೇ ಸಾಮಾನ್ಯ ನಿರ್ದೇಶನಗಳನ್ನು ಹೊರಡಿಸುವುದು;

(iii) ಸರ್ಕಾರದ ಪೂರ್ವ ಅನುಮೋದನೆಯೊಡನೆ, ವಿಶ್ವವಿದ್ಯಾಲಯದ ಪರವಾಗಿ ಯಾವುದೇ ಸ್ಥಿರ ಅಥವಾ ಚರ ಸ್ವತ್ತನ್ನು ಸ್ವೀಕರಿಸುವುದು ಅಥವಾ ವರ್ಗಾವಣೆ ಮಾಡುವುದು;

(iv) ವಿಶ್ವವಿದ್ಯಾಲಯದ ವಶದಲ್ಲಿ ಇರುವ ನಿಧಿಗಳನ್ನು ಅವನ್ನು ಇಟ್ಟಿರುವ ಉದ್ದೇಶಕ್ಕಾಗಿ ವಿನಿಯೋಗಿಸುವುದು;

(v) ವಿಶ್ವವಿದ್ಯಾಲಯದ ನಿಧಿಗಳನ್ನು ಹೂಡುವುದಕ್ಕಾಗಿ ಮತ್ತು ಹಿಂಪಡೆಯುವುದಕ್ಕಾಗಿ ವ್ಯವಸ್ಥೆ ಮಾಡುವುದು;

(vi) ಸರ್ಕಾರದ ಪೂರ್ವಾನುಮೋದನೆಯೊಡನೆ ಬಂಡವಾಳನ್ನು ಹೂಡುವುದಕ್ಕಾಗಿ ಹಣವನ್ನು ತರುವುದು ಮತ್ತು ಅದರ ವಾಪಾಸಾತಿಗೆ ಸೂಕ್ತ ವ್ಯವಸ್ಥೆಯನ್ನು ಮಾಡುವುದು;

(vii) ವಿಶ್ವವಿದ್ಯಾಲಯದ ಪರವಾಗಿ ದತ್ತಿ, ಮರಣ ಶಾಸನದಾನ ಮತ್ತು ವಂತಿಕೆಗಳನ್ನು ಒಪ್ಪಿಕೊಳ್ಳುವುದು;

(viii) ಅಗತ್ಯವಿದ್ದಲ್ಲೆಲ್ಲಾ ವಿದ್ಯಾವಿಷಯಕ ಪರಿಷತ್ತು, ಸಂಶೋಧನಾ ಪರಿಷತ್ತು ಮತ್ತು ವಿಸ್ತಾರಣಾ ಶಿಕ್ಷಣ ಪರಿಷತ್ತಿನ ಶಿಫಾರಸ್ಸುಗಳನ್ನು ಪರಿಗಣಿಸುವುದು ಮತ್ತು ಅನುಮೋದಿಸುವುದು.

(ix) ವಿಶ್ವವಿದ್ಯಾಲಯದ ಸಾಮಾನ್ಯ ಮೊಹರಿನ ನಮೂನೆ ಮತ್ತು ಉಪಯೋಗದ ಬಗ್ಗೆ ನಿರ್ದೇಶಿಸುವುದು;

(x) ಈ ಅಧಿನಿಯಮದ ಮತ್ತು ಶಾಸನಗಳ ಉಪಬಂಧಗಳಿಗೆ ಅನುಸಾರವಾಗಿ ತಾನು ಅವಶ್ಯವೆಂದು ಭಾವಿಸಬಹುದಾದಂಥ ಸಮಿತಿಗಳನ್ನು ಮತ್ತು ನಿಕಾಯಗಳನ್ನು ನೇಮಿಸುವುದು ಮತ್ತು ಅವುಗಳ ಪರಿಶೀಲನಾಂಶಗಳನ್ನು ನಿರ್ಧರಿಸುವುದು;

(xi) ವಿದ್ಯಾವಿಷಯಕ ಪರಿಷತ್ತಿನ ಶಿಫಾರಸ್ಸಿನ ಮೇಲೆ ಹೊಸ ವಿಭಾಗ, ಕೇಂದ್ರ, ಸಂಶೋಧನಾ ಕೇಂದ್ರ ಅಥವಾ ಉಪ ಕೇಂದ್ರವನ್ನು ಸ್ಥಾಪಿಸುವುದು ಅಥವಾ ಅವುಗಳ ಪೈಕಿ ಯಾವುದಾದರೊಂದನ್ನು ರದ್ದುಗೊಳಿಸುವುದು ಅಥವಾ ವಿಭಾಗ, ಸಂಶೋಧನಾ ಕೇಂದ್ರ, ಉಪ ಕೇಂದ್ರ ಅಥವಾ ಕೇಂದ್ರವನ್ನು ಪುನರ್ ರಚಿಸುವ ಬಗ್ಗೆ ಪರಿಗಣಿಸುವುದು ಮತ್ತು ಅನುಮೋದಿಸುವುದು;

(xii) ವಿದ್ಯಾವಿಷಯಕ ಪರಿಷತ್ತಿನ ಶಿಫಾರಸ್ಸಿನ ಮೇಲೆ ಹೊಸ ಕಾಲೇಜು ಅಥವಾ ಫ್ಯಾಕಲ್ಟಿಯನ್ನು ಸ್ಥಾಪಿಸುವುದು ಅಥವಾ ಎರಡು ಅಥವಾ ಹೆಚ್ಚು ಕಾಲೇಜುಗಳನ್ನು ಅಥವಾ ಫ್ಯಾಕಲ್ಟಿಗಳನ್ನು ಒಂದೇ ಕಾಲೇಜಿನಲ್ಲಿ ಅಥವಾ ಫ್ಯಾಕಲ್ಟಿಯಲ್ಲಿ ಸೇರಿಸುವುದು ಅಥವಾ ಕಾಲೇಜನ್ನು ಅಥವಾ ಫ್ಯಾಕಲ್ಟಿಯನ್ನು ಮುಚ್ಚುವುದು ಅಥವಾ ಪ್ರಸ್ತುತ ಇರುವ ಯಾವುದೇ ಫ್ಯಾಕಲ್ಟಿಯನ್ನು ಪುನರ್ ರಚಿಸುವ ಬಗ್ಗೆ ಪರಿಗಣಿಸುವುದು ಮತ್ತು ಅನುಮೋದಿಸುವುದು;

(xiii) ರಾಜ್ಯ ಸರ್ಕಾರದ ಅನುಮೋದನೆಯೊಡನೆ ಬೋಧಕ ಮತ್ತು ಬೋಧಕೇತರ ಹುದ್ದೆಗಳನ್ನು ಸೃಜಿಸುವುದು.

(xiv) ವಿಶ್ವವಿದ್ಯಾಲಯದ ಅಧಿಕಾರಿಗಳು, ಅಧ್ಯಾಪಕರು ಮತ್ತು ಸಹಾಯಕ ಪ್ರಾಧ್ಯಾಪಕ (ಪ್ರೊಫೆಸರ್) ಮತ್ತು ಹೆಚ್ಚಿನ ಶ್ರೇಣಿಯ ನೌಕರರ ನೇಮಕಾತಿಗಾಗಿ ಶಿಫಾರಸ್ಸುಗಳನ್ನು ನಿಯಮಿಸಬಹುದಾದಂತೆ ಅನುಮೋದಿಸಬಹುದು.

**14. ವಿದ್ಯಾವಿಷಯಕ ಪರಿಷತ್ತು.–** (1) ವಿದ್ಯಾವಿಷಯಕ ಪರಿಷತ್ತು ಈ ಮುಂದಿನ ಸದಸ್ಯರನ್ನು ಒಳಗೊಂಡಿರತಕ್ಕದ್ದು, ಎಂದರೆ:–

(i) ಕುಲಪತಿಯವರು, ಇದರ ಅಧ್ಯಕ್ಷರಾಗಿರುತ್ತಾರೆ;

(ii) ಸಂಶೋಧನೆ ಮತ್ತು ವಿಸ್ತರಣಾ ಶಿಕ್ಷಣದ ನಿರ್ದೇಶಕರು;

(iii) ಘಟಕ ಕಾಲೇಜುಗಳ ಡೀನುಗಳು;

(iv) ಕುಲಪತಿಯವರು ನಾಮನಿರ್ದೇಶನ ಮಾಡಿದ ವಿಶ್ವವಿದ್ಯಾಲಯದ ಇಬ್ಬರು ವಿಭಾಗ ಮುಖ್ಯಸ್ಥರು ಸುತ್ತು ಸರದಿಯ ಮೇಲೆ;

(v) ಕುಲಪತಿಯವರು ನಾಮನಿರ್ದೇಶನ ಮಾಡಿದ ಪ್ರತಿಯೊಂದು ಫ್ಯಾಕಲ್ಟಿಯಿಂದ ಪ್ರೊಫೆಸರ್ ದರ್ಜೆಗಿಂತ ಕಡಿಮೆಯಲ್ಲದ ಒಬ್ಬ ಅಧ್ಯಾಪಕರು ಸುತ್ತು ಸರದಿಯ ಮೇಲೆ;

(vi) ಕುಲಪತಿಯವರು ನಾಮನಿರ್ದೇಶನ ಮಾಡಿದ ವಿಶ್ವವಿದ್ಯಾಲಯದ ಹೊರಗಿನಿಂದ ಒಬ್ಬ ಪ್ರಖ್ಯಾತ ಕೃಷಿ ಶಿಕ್ಷಣ ತಜ್ಞರು;

(vii) ಕುಲಸಚಿವರು;

(viii) ಕೃಷಿ ನಿರ್ದೇಶಕರು ಕರ್ನಾಟಕ ಸರ್ಕಾರ;

(ix) ಕುಲಪತಿಯವರು ನಾಮನಿರ್ದೇಶನ ಮಾಡಿದ ಪ್ರೊಫೆಸರ್ ದರ್ಜೆಗಿಂತ ಕಡಿಮೆಯಲ್ಲದ ಸಂಯೋಜಿತ ಕಾಲೇಜಿನ ಒಬ್ಬ ಪ್ರತಿನಿಧಿ;

(x) ಶಿಕ್ಷಣ ನಿರ್ದೇಶಕರು, ಇವರು ಸದಸ್ಯ ಕಾರ್ಯದರ್ಶಿಯಾಗಿರತಕ್ಕದ್ದು.

(2) ಕೃಷಿ ಮತ್ತು ಸಂಬಂಧಿತ ಕ್ಷೇತ್ರದ ವಿವಿಧ ವಲಯಗಳ ಸಾಕಷ್ಟು ಪ್ರಾತಿನಿಧ್ಯ ಪಡೆದುಕೊಳ್ಳುವುದಕ್ಕೆ ಸಾಧ್ಯವಾಗುವಂತೆ ನಿಯಮಿಸಬಹುದಾದಂತಹ ಅವಧಿಗಾಗಿ ಮತ್ತು ಅಂತಹ ರೀತಿಯಲ್ಲಿ ಇಬ್ಬರು ವ್ಯಕ್ತಿಗಳನ್ನು ಮೀರದಂತೆ ಸದಸ್ಯರನ್ನು ವಿದ್ಯಾವಿಷಯಕ ಪರಿಷತ್ತು ಸಹ–ಆಯ್ಕೆ (ಕೋ–ಆಪ್ಟ್) ಮಾಡಿಕೊಳ್ಳತಕ್ಕದ್ದು.

(3) ಪದನಿಮಿತ್ತ ಸದಸ್ಯರ ಹೊರತಾಗಿ ಇತರ ವಿದ್ಯಾವಿಷಯಕ ಪರಿಷತ್ತಿನ ಸದಸ್ಯರು, ಎರಡು ವರ್ಷಗಳ ಅವಧಿಯವರೆಗೆ ಪದಧಾರಣ ಮಾಡತಕ್ಕದ್ದು ಮತ್ತು ವಿಶ್ವವಿದ್ಯಾಲಯದ ಯಾವುದೇ ಪ್ರಾಧಿಕಾರಕ್ಕೆ ಮರುನಾಮನಿರ್ದೇಶನಗೊಳ್ಳಲು ಅರ್ಹರಾಗಿರತಕ್ಕದ್ದಲ್ಲ.

(4) ವಿದ್ಯಾವಿಷಯಕ ಪರಿಷತ್ತಿನ ಮೂರನೇ ಒಂದರಷ್ಟು ಸದಸ್ಯರ ಹಾಜರಾತಿ ವಿದ್ಯಾವಿಷಯಕ ಪರಿಷತ್ತಿನ ಸಭೆಗೆ ಕೋರಂ ಆಗಿರತಕ್ಕದ್ದು :

ಪರಂತು ಕೋರಂ ಇಲ್ಲದಿದ್ದುದರಿಂದಾಗಿ ವಿದ್ಯಾವಿಷಯಕ ಪರಿಷತ್ತಿನ ಒಂದು ಸಭೆಯನ್ನು ಮುಂದೂಡಿದ್ದರೆ, ಅದೇ ವ್ಯವಹಾರಗಳನ್ನು ನಡೆಸುವುದಕ್ಕಾಗಿ ಕರೆದ ಮುಂದಿನ ಸಭೆಯಲ್ಲಿ ಕೋರಂನ ಅವಶ್ಯಕತೆ ಇರುವುದಿಲ್ಲ.

(5) ಸಾಮಾನ್ಯವಾಗಿ ವಿದ್ಯಾವಿಷಯಕ ಪರಿಷತ್ತು ಕುಲಪತಿಯವರು ನಿಗದಿಪಡಿಸಬಹುದಾದಂತಹ ದಿನಾಂಕದಂದು, ಕೊನೆ ಪಕ್ಷ ಮೂರು ತಿಂಗಳಿಗೊಮ್ಮೆ ಸಭೆ ಸೇರತಕ್ಕದ್ದು. ಆದಾಗ್ಯೂ ಕುಲಪತಿಯವರು ವಿದ್ಯಾವಿಷಯಕ ಪರಿಷತ್ತಿನ ವಿಶೇಷ ಸಭೆಯನ್ನು ಕರೆಯಬಹುದು.

**15. ವಿದ್ಯಾವಿಷಯಕ ಪರಿಷತ್ತಿನ ಅಧಿಕಾರಗಳು ಮತ್ತು ಪ್ರಕಾರ್ಯಗಳು.–** (1) ವಿದ್ಯಾವಿಷಯಕ ಪರಿಷತ್ತು ಈ ಅಧಿನಿಯಮದ ಮತ್ತು ಶಾಸನಗಳ ಉಪಬಂಧಗಳಿಗೆ ಒಳಪಟ್ಟು ಎಲ್ಲಾ ವ್ಯಾಸಂಗ ಕ್ರಮಗಳನ್ನು ಮತ್ತು ಪಠ್ಯ ವಿಷಯಗಳನ್ನು

ನಿರ್ಧರಿಸುವುದಕ್ಕಾಗಿ ಈ ನಿಯಮಗಳನ್ನು ರಚಿಸುವ ಅಧಿಕಾರವನ್ನು ಹೊಂದಿರತಕ್ಕದ್ದು ಮತ್ತು ವಿಶ್ವವಿದ್ಯಾಲಯದೊಳಗೆ ಬೋಧನೆ ಮತ್ತು ಇತರ ಶೈಕ್ಷಣಿಕ ಕಾರ್ಯಕ್ರಮಗಳ ಮೇಲೆ ಸಾಮಾನ್ಯ ನಿಯಂತ್ರಣವನ್ನು ಹೊಂದಿರತಕ್ಕದ್ದು ಮತ್ತು ಅವುಗಳ ಗುಣಮಟ್ಟವನ್ನು ಕಾಯ್ದುಕೊಂಡು ಬರುವುದಕ್ಕೆ ಹೊಣೆಯಾಗಿರತಕ್ಕದ್ದು.

(2) ವಿದ್ಯಾವಿಷಯಕ ಪರಿಷತ್ತು ತನ್ನ ನಿಯಂತ್ರಣಕ್ಕೊಳಪಡುವ ಎಲ್ಲಾ ವಿದ್ಯಾ ವಿಷಯಗಳಿಗೆ ಸಂಬಂಧಪಟ್ಟಂತೆ ಈ ಅಧಿನಿಯಮಕ್ಕೆ ಮತ್ತು ಪರಿನಿಯಮಗಳಿಗೆ ಸುಸಂಗತವಾದ ವಿನಿಯಮಗಳನ್ನು ರಚಿಸಲು ಮತ್ತು ಅಂತಹ ವಿನಿಯಮಗಳನ್ನು ನಿರಸನಗೊಳಿಸಲು ಅಧಿಕಾರ ಹೊಂದಿರತಕ್ಕದ್ದು.

(3) (1)ನೇ ಉಪ ಪ್ರಕರಣದ ಉಪಬಂಧಗಳ ಸಾಮಾನ್ಯಾನ್ವಯಕ್ಕೆ ಪ್ರತಿಕೂಲವಾಗದಂತೆ ವಿದ್ಯಾವಿಷಯಕ ಪರಿಷತ್ತು ಈ ಮುಂದಿನ ಅಧಿಕಾರಗಳನ್ನು ಚಲಾಯಿಸತಕ್ಕದ್ದು ಮತ್ತು ಪ್ರಕಾರ್ಯಗಳನ್ನು ನೆರವೇರಿಸತಕ್ಕದ್ದು, ಎಂದರೆ:–

(i) ಗ್ರಂಥಾಲಯಗಳ ನಿಯಂತ್ರಣ ಮತ್ತು ನಿರ್ವಹಣೆಯೂ ಸೇರಿದಂತೆ, ಎಲ್ಲಾ ವಿದ್ಯಾ ವಿಷಯಗಳ ಬಗ್ಗೆ ಮಂಡಳಿಗೆ ಮತ್ತು ಕುಲಪತಿಯವರಿಗೆ ಸಲಹೆ ನೀಡುವುದು;

(ii) ಸಂಶೋಧನೆ ಮತ್ತು ವಿಸ್ತರಣಾ ಶಿಕ್ಷಣದಲ್ಲಿನ ಹುದ್ದೆಗಳೂ ಸೇರಿದಂತೆ ಪ್ರಾಧ್ಯಾಪಕರ (ಪ್ರೊಫೆಸರ್), ಅಸೋಸಿಯೆಟ್ ಪ್ರಾಧ್ಯಾಪಕರ, ಸಹಾಯಕ ಪ್ರಾಧ್ಯಾಪಕರ ಹುದ್ದೆಗಳನ್ನು ಪ್ರಾರಂಭಿಸುವುದು ಮತ್ತು ಅವುಗಳ ಕರ್ತವ್ಯಗಳಿಗೆ ಸಂಬಂಧಪಟ್ಟಂತೆ ಶಿಫಾರಸ್ಸುಗಳನ್ನು ಮಾಡುವುದು;

(iii) ಫ್ಯಾಕಲ್ಟಿ, ಕಾಲೇಜು, ಬೋಧನ, ಸಂಶೋಧನೆ ಮತ್ತು ವಿಸ್ತರಣಾ ಶಿಕ್ಷಣ ವಿಭಾಗಗಳನ್ನು ಸ್ಥಾಪಿಸಲು/ಸಮ್ಮಿಲನ/ ರದ್ದುಗೊಳಿಸಲು ಶಿಫಾರಸ್ಸುಗಳನ್ನು ಮಾಡುವುದು;

(iv) ವಿಶ್ವವಿದ್ಯಾಲಯಕ್ಕೆ, ವಿದ್ಯಾರ್ಥಿಗಳಿಗೆ ಪ್ರವೇಶ ನೀಡಲು ವಿನಿಯಮಗಳನ್ನು ರಚಿಸುವುದು ಮತ್ತು ಪ್ರವೇಶ ನೀಡಬೇಕಾದ ವಿದ್ಯಾರ್ಥಿಗಳ ಸಂಖ್ಯೆಯನ್ನು ನಿರ್ಧರಿಸುವುದು;

(v) ಪದವಿಗಳು, ಡಿಪ್ಲೋಮಾಗಳು ಮತ್ತು ಸರ್ಟಿಫಿಕೇಟ್ ಕೋರ್ಸ್‌ಗಳಿಗೆ ಬೇಕಾದ ವ್ಯಾಸಂಗ ಕ್ರಮಗಳಿಗೆ ಸಂಬಂಧಿಸಿದ ವಿನಿಯಮಗಳನ್ನು ರಚಿಸುವುದು;

(vi) ಪರೀಕ್ಷೆಗಳನ್ನು ನಡೆಸುವುದಕ್ಕೆ ಸಂಬಂಧಪಡುವ ವಿನಿಯಮಗಳನ್ನು ರಚಿಸುವುದು ಮತ್ತು ಶಿಕ್ಷಣದ ಗುಣಮಟ್ಟವನ್ನು ಕಾಯ್ದುಕೊಂಡು ಬರುವುದು ಮತ್ತು ಸುಧಾರಿಸುವುದು;

(vii) ಗೌರವ ಪದವಿಗಳನ್ನು ಪ್ರದಾನ ಮಾಡುವುದಕ್ಕೆ ಸಂಬಂಧಿಸಿದಂತೆ ಮಂಡಳಿಗೆ ಶಿಫಾರಸ್ಸುಗಳನ್ನು ಮಾಡುವುದು;

(viii) ವಿಶ್ವವಿದ್ಯಾಲಯದ ಅಧ್ಯಾಪಕರಿಗೆ ಮತ್ತು ಸೇವಾ ಸಿಬ್ಬಂದಿಗೆ ನಿಯಮಿಸತಕ್ಕ ವಿದ್ಯಾರ್ಹತೆಗಳಿಗೆ ಸಂಬಂಧಿಸಿದಂತೆ ಶಿಫಾರಸ್ಸು ಮಾಡುವುದು;

(ix) ಶೈಕ್ಷಣಿಕ, ಸಂಶೋಧನಾ ಸಂಸ್ಥೆಗಳು, ನಿಗಮಗಳು ಮತ್ತು ಇತರ ಸಂಸ್ಥೆಗಳೊಡನೆ ವಾಗ್ದಾನ ಪತ್ರ ಮತ್ತು ಒಪ್ಪಂದ ಪತ್ರಗಳನ್ನು ಪರಿಶೀಲಿಸುವುದು ಹಾಗೂ ಅನುಮೋದಿಸುವುದು;

(x) ಈ ಅಧಿನಿಯಮದ ಮೂಲಕ ಅಥವಾ ಅದರಡಿಯಲ್ಲಿ ಮಂಡಳಿಯು ಅಥವಾ ಕುಲಪತಿಯವರು ತನಗೆ ವಹಿಸಬಹುದಾದಂತಹ ಅಥವಾ ವಿಧಿಸಬಹುದಾದಂತಹ ಅಧಿಕಾರಗಳನ್ನು ಚಲಾಯಿಸುವುದು ಮತ್ತು ಅಂತಹ ಇತರ ಪ್ರಕಾರ್ಯಗಳನ್ನು ನೆರವೇರಿಸುವುದು.

**16**. **ಸಂಶೋಧನಾ ಪರಿಷತ್ತು.–** ಈ ಮುಂದಿನ ಸದಸ್ಯರನ್ನು ಒಳಗೊಂಡ ಒಂದು ಸಂಶೋಧನಾ ಪರಿಷತ್ತು ಇರತಕ್ಕದ್ದು, ಎಂದರೆ:–

(i) ಕುಲಪತಿಯವರು – ಇವರು ಅಧ್ಯಕ್ಷರಾಗಿರತಕ್ಕದ್ದು;

(ii) ಕೃಷಿ ಇಲಾಖೆ ನಿರ್ದೇಶಕರು;

(iii) ವ್ಯವಸಾಯೋತ್ಪನ್ನಗಳ ಮಾರಾಟ ಇಲಾಖೆ ನಿರ್ದೇಶಕರು;

(iv) ತೋಟಗಾರಿಕೆ ಇಲಾಖೆ ನಿರ್ದೇಶಕರು;

(v) ಮಹಿಳಾ ಮತ್ತು ಮಕ್ಕಳ ಕಲ್ಯಾಣ ಇಲಾಖೆ ನಿರ್ದೇಶಕರು;

(vi) ರೇಷ್ಮೆ ಇಲಾಖೆ ನಿರ್ದೇಶಕರು;

(vii) ಜಲವಿಭಾಜಕ ಪ್ರದೇಶ ನಿರ್ವಹಣೆ ಇಲಾಖೆ ನಿರ್ದೇಶಕರು;

(viii) ಅರಣ್ಯ, ಸಂಶೋಧನೆ ಮತ್ತು ತರಬೇತಿಯ ಮುಖ್ಯ ಸಂರಕ್ಷಣಾಧಿಕಾರಿ;

(ix) ವಿಶ್ವವಿದ್ಯಾಲಯದ ಎಲ್ಲಾ ನಿರ್ದೇಶಕರು;

(x) ಘಟಕ ಕಾಲೇಜುಗಳ ಎಲ್ಲಾ ಡೀನುಗಳು;

(xi) ಸಂಶೋಧನೆಯ ಮತ್ತು ವಿಸ್ತರಣಾ ಶಿಕ್ಷಣದ ಎಲ್ಲಾ ಸಹವರ್ತಿ ನಿರ್ದೇಶಕರುಗಳು;

(xii) ವಿಶ್ವವಿದ್ಯಾಲಯದ ಎಲ್ಲಾ ವಿಭಾಗಗಳ ಮುಖ್ಯಸ್ಥರು;

(xiii) ಕೃಷಿ ಮತ್ತು ಸಂಬಂಧಿಸಿದ ವಿಭಾಗಗಳಲ್ಲಿ ವಿಶೇಷ ಪರಿಣತಿಯನ್ನು ಹೊಂದಿರುವ ರೈತರ ವಿಶೇಷ ಜ್ಞಾನ ಮತ್ತು ಅನುಭವದ ಪ್ರಯೋಜನವನ್ನು ಪಡೆದುಕೊಳ್ಳಲು ಕುಲಪತಿಯವರು ನಾಮನಿರ್ದೇಶನ ಮಾಡಿದಂತಹ ಇಬ್ಬರು ಪ್ರಗತಿಪರ ರೈತರು;

(xiv) ಯಾವುದೇ ಸಭೆಯ ಸಂಬಂಧದಲ್ಲಿ ಅಂತಹ ಸಭೆಯ ಕಾರ್ಯಸೂಚಿಯಲ್ಲಿರುವ ವಿಷಯಗಳ ಬಗ್ಗೆ ಪ್ರಸಿದ್ಧ ವಿಜ್ಞಾನಿಗಳ ವಿಶೇಷ ಜ್ಞಾನದ ಪ್ರಯೋಜನವನ್ನು ಪಡೆಯುವುದಕ್ಕಾಗಿ ಕುಲಪತಿಯವರು ನಾಮನಿರ್ದೇಶನ ಮಾಡಿದ, ವಿಶ್ವವಿದ್ಯಾಲಯಕ್ಕೆ ಹೊರಗಿನವರಾದ ಒಬ್ಬ ವಿಜ್ಞಾನಿ;

(xv) ಯಾವುದೇ ಸಭೆಯ ಸಂಬಂಧದಲ್ಲಿ ಅಂತಹ ಸಭೆಯ ಕಾರ್ಯಸೂಚಿಯಲ್ಲಿರುವ ವಿಷಯಗಳ ಬಗ್ಗೆ ಕೃಷಿಕೈಗಾರಿಕೋದ್ಯಮಿಯ ವಿಶೇಷ ಜ್ಞಾನದ ಪ್ರಯೋಜನವನ್ನು ಪಡೆಯುವುದಕ್ಕಾಗಿ ಕುಲಪತಿಯವರು ನಾಮನಿರ್ದೇಶನ ಮಾಡಿದ, ಒಬ್ಬ ಕೃಷಿ ಕೈಗಾರಿಕೋದ್ಯಮಿ;

(xvi) ಜಲಸಂಪನ್ಮೂಲ ಅಭಿವೃದ್ಧಿ ಸಂಸ್ಥೆಯ ಮುಖ್ಯ ಇಂಜಿನಿಯರ್;

(xvii) ಕುಲಸಚಿವರು;

(xviii) ಸಂಶೋಧನಾ ನಿರ್ದೇಶಕರು – ಇವರು ಸದಸ್ಯ ಕಾರ್ಯದರ್ಶಿಯಾಗಿರತಕ್ಕದ್ದು;

ಪದನಿಮಿತ್ತ ಸದಸ್ಯರನ್ನು ಹೊರತುಪಡಿಸಿ ಸಂಶೋಧನಾ ಪರಿಷತ್ತಿನ ಎಲ್ಲಾ ಸದಸ್ಯರ ಪದಾವಧಿಯು ಎರಡು ವರ್ಷಗಳಾಗಿರತಕ್ಕದ್ದು ಮತ್ತು ವಿಶ್ವವಿದ್ಯಾಲಯದ ಯಾವುದೇ ಪ್ರಾಧಿಕಾರಕ್ಕೆ ಮರುನಾಮ ನಿರ್ದೇಶನಗೊಳ್ಳಲು ಅರ್ಹರಾಗಿರತಕ್ಕದ್ದಲ್ಲ.

**17. ಸಂಶೋಧನಾ ಪರಿಷತ್ತಿನ ಪ್ರಕಾರ್ಯಗಳು.–** ಸಂಶೋಧನಾ ಪರಿಷತ್ತು ಈ ಮುಂದಿನವುಗಳಿಗೆ ಸಂಬಂಧಿಸಿದುವುಗಳನ್ನು ಪರಿಗಣಿಸತಕ್ಕದ್ದು ಮತ್ತು ಶಿಫಾರಸ್ಸುಗಳನ್ನು ಮಾಡತಕ್ಕದ್ದು.

(i) ಪರಿಣಾಮಕಾರಿಯಾಗಿ ಸಮನ್ವಯವನ್ನು ಸಾಧಿಸುವ ದೃಷ್ಟಿಯಿಂದ ಕೃಷಿ ಮತ್ತು ಇತರ ಸಂಬಂಧಿತ ವಿಜ್ಞಾನಗಳ ಕ್ಷೇತ್ರದಲ್ಲಿ ವಿಶ್ವವಿದ್ಯಾಲಯದ ವಿವಿಧ ಘಟಕಗಳು ಕೈಗೊಂಡ ಅಥವಾ ಕೈಗೊಳ್ಳಬೇಕಾದ ಸಂಶೋಧನಾ ಕಾರ್ಯಕ್ರಮಗಳು ಮತ್ತು ಯೋಜನೆಗಳು;

(ii) ಸಂಶೋಧನಾ ಯೋಜನೆಗಳನ್ನು ಅನುಷ್ಠಾನಗೊಳಿಸುವುದಕ್ಕೆ ಅಗತ್ಯವಾದ ಭೌತಿಕ, ಆರ್ಥಿಕ ಮತ್ತು ಆಡಳಿತಾತ್ಮಕ ಸೌಲಭ್ಯಗಳು;

(iii) ರೈತರ ಮತ್ತು ಇತರ ಹಿತಾಸಕ್ತಿದಾರರ ಅಗತ್ಯತೆಗಳನ್ನು ಪೂರೈಸುವ ಕಡೆಗೆ ಸಂಶೋಧನೆಯ ಅಭಿಮುಖವಾಗಿರುವಂತೆ ಮಾಡುವುದು.

(iv) ಸಂಶೋಧನೆಯಲ್ಲಿ ಸಾರ್ವಜನಿಕ ಮತ್ತು ಖಾಸಗಿ ಪಾಲುದಾರಿಕೆಯನ್ನು ಪೋಷಿಸುವುದು ಮತ್ತು ಸಮನ್ವಯಗೊಳಿಸುವುದು;

(v) ಕುಲಪತಿಯವರು ಅಥವಾ ಮಂಡಲಿ ಅಥವಾ ವಿಶ್ವವಿದ್ಯಾಲಯದ ಯಾವುದೇ ಇತರ ಪ್ರಾಧಿಕಾರವು ತನಗೆ ಪರಿಶೀಲಿಸಲು ಕಳುಹಿಸಬಹುದಾದ ಸಂಶೋಧನಾ ಕಾರ್ಯಕ್ರಮಗಳಿಗೆ ಸಂಬಂಧಪಟ್ಟ ಯಾವುದೇ ಇತರೆ ವಿಷಯ.

**18. ವಿಸ್ತರಣಾ ಶಿಕ್ಷಣ ಪರಿಷತ್ತು.–** (1) ಈ ಮುಂದಿನ ಸದಸ್ಯರನ್ನೊಳಗೊಂಡ ಒಂದು ವಿಸ್ತರಣಾ ಶಿಕ್ಷಣ ಪರಿಷತ್ತು ಇರತಕ್ಕದ್ದು ಎಂದರೆ.–

(i) ಕುಲಪತಿಯವರು – ಅಧ್ಯಕ್ಷರು

(ii) ಕೃಷಿ ಇಲಾಖೆ ನಿರ್ದೇಶಕರು, ಕರ್ನಾಟಕ ಸರ್ಕಾರ.

(iii) ಕರ್ನಾಟಕ ಸರ್ಕಾರದ ವ್ಯವಸಾಯೋತ್ಪನ್ನಗಳ ಮಾರಾಟ ಇಲಾಖೆ ನಿರ್ದೇಶಕರು.

(iv) ತೋಟಗಾರಿಕೆ ಇಲಾಖೆ ನಿರ್ದೇಶಕರು, ಕರ್ನಾಟಕ ಸರ್ಕಾರ.

(v) ಮಹಿಳಾ ಮತ್ತು ಮಕ್ಕಳ ಕಲ್ಯಾಣ ಇಲಾಖೆ ನಿರ್ದೇಶಕರು, ಕರ್ನಾಟಕ ಸರ್ಕಾರ.

(vi) ರೇಷ್ಮೆ ಇಲಾಖೆಯ ನಿರ್ದೇಶಕರು, ಕರ್ನಾಟಕ ಸರ್ಕಾರ.

(vii) ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ, ಸಮಾಜ ಅರಣ್ಯ ವಿಜ್ಞಾನ ಇಲಾಖೆ, ಕರ್ನಾಟಕ ಸರ್ಕಾರ.

(viii) ಜಲಾನಯನ ಅಭಿವೃದ್ಧಿ ಇಲಾಖೆ ನಿರ್ದೇಶಕರು, ಕರ್ನಾಟಕ ಸರ್ಕಾರ.

(ix) ವಿಶ್ವವಿದ್ಯಾಲಯದ ಎಲ್ಲಾ ನಿರ್ದೇಶಕರು ಮತ್ತು ಡೀನ್‌ಗಳು.

(x) ಕುಲಸಚಿವರು.

(xi) ಸಂಶೋಧನೆಯ ಎಲ್ಲಾ ಸಹವರ್ತಿ ನಿರ್ದೇಶಕರು ಮತ್ತು ವಿಸ್ತರಣೆ ಶಿಕ್ಷಣದ ಸಹವರ್ತಿ ನಿರ್ದೇಶಕರುಗಳು.

(xii) ವಿಶ್ವವಿದ್ಯಾಲಯದ ಎಲ್ಲಾ ವಿಭಾಗಗಳ ಮುಖ್ಯಸ್ಥರು;

(xiii) ಕೃಷಿ ಮತ್ತು ಇತರ ಸಂಬಂಧಿತ ಶಾಖೆಗಳಲ್ಲಿ ವಿಶೇಷ ಪರಿಣಿತಿಯುಳ್ಳ, ಪ್ರಗತಿಪರ ರೈತರ ವಿಶೇಷ ಜ್ಞಾನ ಹಾಗೂ ಅನುಭವದ ಪ್ರಯೋಜನವನ್ನು ಪಡೆದುಕೊಳ್ಳಲು ಕುಲಪತಿಯವರು ನಾಮನಿರ್ದೇಶನ ಮಾಡಿದಂಥ ಇಬ್ಬರು ಪ್ರಗತಿಪರ ರೈತರು;

(xiv) ಯಾವುದೇ ಸಭೆಯ ಸಂಬಂಧದಲ್ಲಿ ಅಂಥ ಸಭೆಯ ಕಾರ್ಯಸೂಚಿಯಲ್ಲಿನ ವಿಷಯಗಳ ಬಗ್ಗೆ ಅವರ ವಿಶೇಷ ಜ್ಞಾನದ ಪ್ರಯೋಜನವನ್ನು ಪಡೆದುಕೊಳ್ಳುವುದಕ್ಕಾಗಿ ಕುಲಪತಿಯವರು ನಾಮನಿರ್ದೇಶನ ಮಾಡಿದ ವಿಶ್ವವಿದ್ಯಾಲಯಕ್ಕೆ ಹೊರಗಿನವರಾದ ಒಬ್ಬ ಖ್ಯಾತ ವಿಸ್ತರಣಾ ಶಿಕ್ಷಣ ತಜ್ಞರು;

(xv) ಯಾವುದೇ ಸಭೆಯ ಸಂದರ್ಭದಲ್ಲಿ ಅಂಥ ಸಭೆಯ ಕಾರ್ಯಸೂಚಿಯಲ್ಲಿನ ವಿಷಯಗಳ ಬಗ್ಗೆ ಅವರ ವಿಶೇಷ ಜ್ಞಾನದ ಪ್ರಯೋಜನವನ್ನು ಪಡೆದುಕೊಳ್ಳುವುದಕ್ಕಾಗಿ ಕುಲಪತಿಯವರು ನಾಮ ನಿರ್ದೇಶನ ಮಾಡಿದ ಒಬ್ಬ ವ್ಯವಸಾಯೋದ್ಯಮಿಗಳು;

(xvi) ಕುಲಪತಿಯವರ ಕೋರಿಕೆಗನುಸಾರ ಐವರಿಗೆ ಮಿತಿಗೊಳಿಸಿದ ಈ ಮುಂದಿನ ಸಂಸ್ಥೆಗಳ ಒಬ್ಬೊಬ್ಬ ಪ್ರತಿನಿಧಿ,–

(ಎ) ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ, ಕರ್ನಾಟಕ ಸರ್ಕಾರ.

(ಬಿ) ಸಹಕಾರ ಇಲಾಖೆ, ಕರ್ನಾಟಕ ಸರ್ಕಾರ.

(ಸಿ) ಕರ್ನಾಟಕ ವ್ಯವಸಾಯೋದ್ಯಮಗಳ ಅಭಿವೃದ್ಧಿ ನಿಗಮ.

(ಡಿ) ಜಲಸಂಪನ್ಮೂಲ ಇಲಾಖೆ, ಕರ್ನಾಟಕ ಸರ್ಕಾರ.

(ಇ) ಭಾರತದ ರಸಗೊಬ್ಬರ ನಿಗಮ.

(ಎಫ್) ರಾಷ್ಟ್ರೀಯ ಬೀಜಗಳ ನಿಗಮ

(ಜಿ) ಯಾವುದೇ ಇತರ ವ್ಯವಸಾಯೋದ್ಯಮ ಅಥವಾ ವ್ಯವಸಾಯ ಸೇವಾಸಂಸ್ಥೆ/ಬೀಜ ಕಂಪೆನಿಗಳು.

(ಎಚ್) ಕರ್ನಾಟಕ ರಾಜ್ಯ ಬೀಜಗಳ ನಿಗಮ.

(ಐ) ಕರ್ನಾಟಕ ರಾಜ್ಯ ಬೀಜ ಪ್ರಮಾಣಪತ್ರ ನೀಡಿಕೆ ಏಜೆನ್ಸಿ.

(ಜೆ) ಸಂಬಂಧಿತ ಕೃಷಿ ಮತ್ತು ಗ್ರಾಮೀಣಾಭಿವೃದ್ಧಿಗೆ ಸಂಬಂಧಿಸಿದ ಸರ್ಕಾರೇತರ ಸಂಸ್ಥೆ.

(ಕೆ) ವಿಸ್ತರಣಾ ನಿರ್ದೇಶಕರು – ಸದಸ್ಯ ಕಾರ್ಯದರ್ಶಿ.

(2) ಪದನಿಮಿತ್ತ ಸದಸ್ಯರುಗಳನ್ನು ಹೊರತುಪಡಿಸಿ ವಿಸ್ತರಣಾ ಶಿಕ್ಷಣ ಪರಿಷತ್ತಿನ ಎಲ್ಲಾ ಸದಸ್ಯರುಗಳ ಪದಾವಧಿಯು ಎರಡು ವರ್ಷಗಳಾಗಿರತಕ್ಕದ್ದು ಮತ್ತು ಅವರು ವಿಶ್ವವಿದ್ಯಾಲಯದ ಯಾವುದೇ ಪ್ರಾಧಿಕಾರಕ್ಕೆ ಮರುನಾಮನಿರ್ದೇಶನಗೊಳ್ಳಲು ಅರ್ಹರಾಗಿರತಕ್ಕದ್ದಲ್ಲ.

**19. ವಿಸ್ತರಣಾ ಶಿಕ್ಷಣ ಪರಿಷತ್ತಿನ ಪ್ರಕಾರ್ಯಗಳು.–** ವಿಸ್ತರಣಾ ಶಿಕ್ಷಣ ಪರಿಷತ್ತು ಈ ಮುಂದಿನವುಗಳನ್ನು ಪರಿಶೀಲಿಸತಕ್ಕದ್ದು ಮತ್ತು ಆ ಬಗ್ಗೆ ಶಿಫಾರಸ್ಸು ಮಾಡತಕ್ಕದ್ದು ಎಂದರೆ:–

(i) ವಿಶ್ವವಿದ್ಯಾಲಯದ ವಿಸ್ತರಣಾ ಶಿಕ್ಷಣ ಕಾರ್ಯಕ್ರಮಗಳು ಮತ್ತು ಯೋಜನೆಗಳು.

(ii) ಕೃಷಿ ಮತ್ತು ಸಂಬಂಧಿತ ಶಾಖೆಗಳ ಸುಧಾರಣೆಗಾಗಿ ಮತ್ತು ಗ್ರಾಮೀಣ ಸಮುದಾಯಗಳ ಅಭಿವೃದ್ಧಿಗಾಗಿ, ವಿಸ್ತರಣಾ ಶಿಕ್ಷಣವನ್ನು ಸಮನ್ವಯಗೊಳಿಸುವುದು.

(iii) ರೈತರ ಶಿಕ್ಷಣ ಮತ್ತು ತರಬೇತಿಯನ್ನು ಮತ್ತು ಸಲಹಾ ಸೇವೆಗಳನ್ನು ಅಭಿವೃದ್ಧಿಗೊಳಿಸುವುದು.

(iv) ಕ್ಷೇತ್ರ ಸಮಸ್ಯೆಗಳನ್ನು ಗುರುತಿಸಿ ಪರಿಹರಿಸುವುದು ಮತ್ತು ಮಾಹಿತಿಯ ಪ್ರಸಾರ ಮಾಡುವುದು.

(v) ವಿಸ್ತರಣಾ ಶಿಕ್ಷಣದ ವಿಧಾನ:

(vi) ಕೃಷಿ ವಿಜ್ಞಾನ ಕೇಂದ್ರದ ಕೆಲಸಕಾರ್ಯಗಳ ಮೌಲ್ಯಮಾಪನ ಮಾಡುವುದು;

(vii) ಕುಲಪತಿಯವರು ಮಂಡಳಿ ಅಥವಾ ವಿಶ್ವವಿದ್ಯಾಲಯದ ಯಾವುದೇ ಇತರ ಪ್ರಾಧಿಕಾರವು ತನಗೆ ಪರಿಶೀಲನೆಗಾಗಿ ಕಳುಹಿಸಿಕೊಟ್ಟ ಯಾವುದೇ ಇತರ ವಿಷಯ.

**20. ಅಧ್ಯಯನ ಮಂಡಳಿ.–** (1) ಪದವಿ ಮತ್ತು ಸ್ನಾತಕೋತ್ತರ ಕಾರ್ಯಕ್ರಮಗಳಿಗೆ ಬೇರೆ ಬೇರೆ ಅಧ್ಯಯನ ಮಂಡಳಿಯಿರತಕ್ಕದ್ದು. ಅಧ್ಯಯನ ಮಂಡಳಿಯ ಅಧಿಕಾರಗಳು ಮತ್ತು ಪ್ರಕಾರ್ಯಗಳು ಶಾಸನಗಳ ಮೂಲಕ ನಿಯಮಿಸಲಾದಂತೆ ಇರತಕ್ಕದ್ದು.

(2) ಪದವಿ ಕಾರ್ಯಕ್ರಮಗಳಿಗೆ ಅಧ್ಯಯನ ಮಂಡಳಿಯ ರಚನೆಯು ಈ ಮುಂದಿನಂತೆ ಇರತಕ್ಕದ್ದು, ಎಂದರೆ:–

(i) ಶಿಕ್ಷಣ ಇಲಾಖೆ ನಿರ್ದೇಶಕರು – ಅಧ್ಯಕ್ಷರು.

(ii) ಎಲ್ಲಾ ಘಟಕ ಕಾಲೇಜುಗಳ ಡೀನ್‌ಗಳು.

(iii) ಕುಲಪತಿಯವರು ನಾಮನಿರ್ದೇಶಿಸಿದ ಪ್ರೊಫೆಸರ್ ದರ್ಜೆಗಿಂತ ಕಡಿಮೆ ದರ್ಜೆಯವರಲ್ಲದ ಸಂಯೋಜಿತ ಕಾಲೇಜಿನ ಒಬ್ಬರು ಪ್ರತಿನಿಧಿ.

(iv) ಸಂಶೋಧನಾ ನಿರ್ದೇಶಕರು ಮತ್ತು ವಿಸ್ತರಣಾ ಶಿಕ್ಷಣ ನಿರ್ದೇಶಕರು.

(v) ಕುಲಸಚಿವರು.

(vi) ವಿದ್ಯಾರ್ಥಿ ಕ್ಷೇಮಾಭಿವೃದ್ಧಿ ಡೀನ್.

(vii) ವಿಶ್ವವಿದ್ಯಾಲಯದ ಎಲ್ಲಾ ವಿಭಾಗಗಳ ಮುಖ್ಯಸ್ಥರು.

(viii) ಸುತ್ತು ಸರದಿಯ ಆಧಾರದ ಮೇಲೆ ಎರಡು ವರ್ಷಗಳ ಅವಧಿಗೆ, ಅಧ್ಯಕ್ಷರು ನಾಮನಿರ್ದೇಶನದ ಇಲಾಖಾ ಮುಖ್ಯಸ್ಥರಲ್ಲದ ವಿಶ್ವವಿದ್ಯಾಲಯದ ಪ್ರತಿಯೊಂದು ಇಲಾಖೆಯ ಒಬ್ಬ ಪ್ರೊಫೆಸರ್.

(ix) ಸುತ್ತು ಸರದಿಯ ಆಧಾರದ ಮೇಲೆ ಎರಡು ವರ್ಷಗಳ ಅವಧಿಗೆ ಅಧ್ಯಕ್ಷರು ನಾಮನಿರ್ದೇಶನ ಮಾಡಿದ ಸಹವರ್ತಿ ಪ್ರೊಫೆಸರರ ಕೇಡರ್‌ನಲ್ಲಿನ ಐವರು ಅಧ್ಯಾಪಕರು.

(x) ಸುತ್ತು ಸರದಿಯ ಆಧಾರದ ಮೇಲೆ ಎರಡು ವರ್ಷಗಳ ಅವಧಿಗೆ ಅಧ್ಯಕ್ಷರು ನಾಮನಿರ್ದೇಶನ ಮಾಡಿದ ಸಹಾಯಕ ಪ್ರೊಫೆಸರರ ಕೇಡರ್‌ನಲ್ಲಿನ ಐವರು ಅಧ್ಯಾಪಕರು.

(xi) ಎರಡು ವರ್ಷಗಳ ಅವಧಿಗೆ ಅಧ್ಯಕ್ಷರು ನಾಮನಿರ್ದೇಶನ ಮಾಡಿರುವ ವಿಶ್ವವಿದ್ಯಾಲಯಕ್ಕೆ ಹೊರಗಿನವರಾದ ಇಬ್ಬರು ಪ್ರಖ್ಯಾತ ಪ್ರೊಫೆಸರುಗಳು.

(xii) ವಿಶ್ವವಿದ್ಯಾಲಯ ಕುಲಪತಿಯವರು ನಾಮನಿರ್ದೇಶನ ಮಾಡಿದ ಕಾಲೇಜಿನ ಒಬ್ಬರು ಡೀನ್ ಸದಸ್ಯ ಕಾರ್ಯದರ್ಶಿಯಾಗಿ ಕರ್ತವ್ಯ ನಿರ್ವಹಿಸತಕ್ಕದ್ದು.

(3) ಪದವಿ ಕಾರ್ಯಕ್ರಮಗಳಿಗೆ ಅಧ್ಯಯನ ಮಂಡಳಿಗಳ ಪ್ರಕಾರ್ಯಗಳು ಈ ಮುಂದಿನಂತೆ ಇರತಕ್ಕದ್ದು. ಎಂದರೆ:–

(i) ಪದವಿ ಬೋಧನಾ ಕಾರ್ಯಕ್ರಮದ ಅಡಿಯಲ್ಲಿ ಪುನರಾವಲೋಕನ ಮಾಡುವುದು ಮತ್ತು ಅದರ ಸುಧಾರಣೆಗಳಿಗೆ ಸಲಹೆ ನೀಡುವುದು;

(ii) ಅಧ್ಯಯನಗಳ ಮಂಡಳಿಯು ರಚಿಸಿದಂಥ ಕೋರ್ಸುಗಳು, ಪಠ್ಯವಿಷಯಗಳು, ಸಮಿತಿ ಅಥವಾ ಅದೇ ತರಹದ ಸಮಿತಿಯ ಶಿಫಾರಸ್ಸುಗಳನ್ನು ಪರಿಗಣಿಸುವುದು ಮತ್ತು ಅವನ್ನು ಪರ್ಯಾಲೋಚನೆ ಮತ್ತು ಅಂಗೀಕಾರಕ್ಕಾಗಿ ವಿದ್ಯಾವಿಷಯಕ ಪರಿಷತ್ತಿನ ಮುಂದೆ ಮಂಡಿಸುವುದು;

(iii) ವಿದ್ಯಾವಿಷಯಕ ಪರಿಷತ್ತು ಅಥವಾ ಕುಲಪತಿಯವರು ಗೊತ್ತುಪಡಿಸಬಹುದಾಂಥ ಇತರ ಕರ್ತವ್ಯಗಳನ್ನು ನಿರ್ವಹಿಸುವುದು;

(4) ಸ್ನಾತಕೋತ್ತರ ಕಾರ್ಯಕ್ರಮಗಳಿಗಾಗಿ ಅಧ್ಯಯನಗಳ ಮಂಡಳಿಯ ರಚನೆಯು ಈ ಮುಂದಿನಂತೆ ಇರತಕ್ಕದ್ದು, ಎಂದರೆ:–

(i) ಶಿಕ್ಷಣ ಇಲಾಖೆಯ ನಿರ್ದೇಶಕರು – ಅಧ್ಯಕ್ಷರು.

(ii) ಸಂಯೋಜಿತ ಕಾಲೇಜುಗಳ ಡೀನ್‌ಗಳು.

(iii) ಸಂಶೋಧನಾ ನಿರ್ದೇಶಕರು ಮತ್ತು ವಿಸ್ತರಣಾ ಶಿಕ್ಷಣದ ನಿರ್ದೇಶಕರು.

(iv) ಕುಲಸಚಿವರು.

(v) ವಿದ್ಯಾರ್ಥಿ ಕ್ಷೇಮಾಭಿವೃದ್ಧಿ ಡೀನ್.

(vi) ವಿಶ್ವವಿದ್ಯಾಲಯದ ಎಲ್ಲಾ ವಿಭಾಗದ ಮುಖ್ಯಸ್ಥರು.

(vii) ಸುತ್ತು ಸರದಿಯ ಆಧಾರದ ಮೇಲೆ ಎರಡು ವರ್ಷಗಳ ಅವಧಿಗಾಗಿ ಅಧ್ಯಕ್ಷರು ನಾಮನಿರ್ದೇಶಿಸಿದ ಸಹವರ್ತಿ ಪ್ರೊಫೆಸರ್ ದರ್ಜೆಯ ಹತ್ತು ಜನ ಸ್ನಾತಕೋತ್ತರ ಅಧ್ಯಾಪಕರು.

(viii) ಸುತ್ತು ಸರದಿಯ ಆಧಾರದ ಮೇಲೆ ಎರಡು ವರ್ಷಗಳ ಅವಧಿಗಾಗಿ ಅಧ್ಯಕ್ಷರು ನಾಮನಿರ್ದೇಶಿಸಿದ ಸಹಾಯಕ ಪ್ರೊಫೆಸರ್ ದರ್ಜೆಯ ಹತ್ತು ಜನ ಸ್ನಾತಕೋತ್ತರ ಅಧ್ಯಾಪಕರು.

(ix) ಎರಡು ವರ್ಷಗಳ ಅವಧಿಗಾಗಿ ಅಧ್ಯಕ್ಷರು ನಾಮನಿರ್ದೇಶಿಸಿದ ವಿಶ್ವವಿದ್ಯಾಲಯಕ್ಕೆ ಹೊರಗಿನವರಾದ ಇಬ್ಬರು ಖ್ಯಾತ ಪ್ರೊಫೆಸರ್‌ಗಳು.

(x) ಸ್ನಾತಕೋತ್ತರ ವ್ಯಾಸಂಗದ ಡೀನ್ ಅವರು ಸದಸ್ಯ ಕಾರ್ಯದರ್ಶಿಯಾಗಿ ಕೆಲಸ ನಿರ್ವಹಿಸತಕ್ಕದ್ದು.

(5) ಸ್ನಾತಕೋತ್ತರ ವ್ಯಾಸಂಗ ಕ್ರಮದ ಮಂಡಳಿಯು ಈ ಮುಂದಿನ ಪ್ರಕಾರ್ಯಗಳನ್ನು ನೆರವೇರಿಸತಕ್ಕದ್ದು, ಎಂದರೆ:–

(i) ಸ್ನಾತಕೋತ್ತರ ಮತ್ತು ಡಿಪ್ಲೊಮಾ ಬೋಧನ ಕಾರ್ಯಕ್ರಮಗಳ ಪುನರಾವಲೋಕನ ಮಾಡುವುದು ಮತ್ತು ಅವುಗಳ ಸುಧಾರಣೆಗೆ ಸಲಹೆಗಳನ್ನು ನೀಡುವುದು;

(ii) ಅಧ್ಯಯನ ಮಂಡಳಿಯು ರಚಿಸಿದ ವ್ಯಾಸಂಗ ಕ್ರಮಗಳು, ಪಠ್ಯಕ್ರಮಗಳ, ಸಮಿತಿಗಳು ಅಥವಾ ಅಂತಹುದೇ ಸಮಿತಿಗಳ ಶಿಫಾರಸ್ಸುಗಳನ್ನು ಪರಿಗಣಿಸುವುದು ಮತ್ತು ವಿದ್ಯಾವಿಷಯಕ ಪರಿಷತ್ತಿನ ಮುಂದೆ ಅವುಗಳನ್ನು ಪರ್ಯಾಲೋಚನೆ ಮತ್ತು ಅನುಮೋದನೆಗಾಗಿ ಮಂಡಿಸುವುದು;

(iii) ವಿದ್ಯಾವಿಷಯಕ ಪರಿಷತ್ತು ಅಥವಾ ಕುಲಪತಿಯವರು ವಹಿಸಬಹುದಾದಂತಹ ಇತರ ಪ್ರಕಾರ್ಯಗಳನ್ನು ನೆರವೇರಿಸುವುದು.

**21. ಸಮಿತಿಗಳ ರಚನೆ.–** ಪ್ರತಿಯೊಂದು ಪ್ರಾಧಿಕಾರವು ಸಮಿತಿಗಳನ್ನು ನೇಮಿಸಲು ಅಧಿಕಾರವನ್ನು ಹೊಂದಿರತಕ್ಕದ್ದು ಮತ್ತು ಅಂಥ ಸಮಿತಿಯು ಈ ಅಧಿನಿಯಮ ಅಥವಾ ಶಾಸನಗಳಲ್ಲಿ ಅನ್ಯಥಾ ಉಪಬಂಧಿಸಿದ್ದ ಹೊರತು, ಪ್ರಾಧಿಕಾರದ ಸದಸ್ಯರುಗಳ ಅಥವಾ ತಾನು ಸರಿಯೆಂದು ಭಾವಿಸಬಹುದಾದ ಇತರ ವ್ಯಕ್ತಿಗಳನ್ನೊಳಗೊಂಡಿರತಕ್ಕದ್ದು.

**22. ಪ್ರಾಧಿಕಾರಗಳ ಸದಸ್ಯತ್ವದ ಸಂಬಂಧದಲ್ಲಿ ಉಪಬಂಧ.–** (1) ಈ ಅಧಿನಿಯಮದಲ್ಲಿ ಅನ್ಯಥಾ ಉಪಬಂಧಿಸಿರುವುದನ್ನುಳಿದು, ವಿಶ್ವವಿದ್ಯಾಲಯದ ಯಾವುದೇ ಪ್ರಾಧಿಕಾರದ ಅಥವಾ ನಿಕಾಯದ ಪದನಿಮಿತ್ತ ಸದಸ್ಯನನ್ನು ಹೊರತುಪಡಿಸಿ ಇತರ ಯಾವುದೇ ಸದಸ್ಯರು ಮರಣ, ರಾಜೀನಾಮೆ, ತೆಗೆದುಹಾಕುವಿಕೆ ಅಥವಾ ಅನ್ಯಥಾ ಹಾಜರಾಗಲು ಅಥವಾ ತನ್ನ ಪೂರ್ಣ ಪದಾವಧಿಯನ್ನು ಪೂರ್ತಿಗೊಳಿಸಲು ಸಾಧ್ಯವಾಗದಿದ್ದಲ್ಲಿ, ಹಾಗೆ ಉಂಟಾದ ಖಾಲಿ ಸ್ಥಾನವನ್ನು ಅನುಕೂಲವಾದಷ್ಟು ಬೇಗನೆ, ಸಂದರ್ಭಾನುಸಾರ, ನೇಮಕಾತಿ, ನಾಮ ನಿರ್ದೇಶನ ಅಥವಾ ಸಹ ಸದಸ್ಯನನ್ನಾಗಿ ಸೇರಿಸುವಿಕೆಯಿಂದ ಭರ್ತಿಗೊಳಿಸತಕ್ಕದ್ದು ಮತ್ತು ಹಾಗೆ ನೇಮಕಗೊಂಡ, ನಾಮನಿರ್ದೇಶಿತನಾದ ಅಥವಾ ಸಹ ಸದಸ್ಯನಾಗಿ ಸೇರಿಕೊಂಡ ವ್ಯಕ್ತಿಯು, ಅಂಥ ಖಾಲಿ ಸ್ಥಾನವನ್ನು ತಾನು ಯಾರ ಸ್ಥಾನದಲ್ಲಿ ನೇಮಕಗೊಂಡಿರುವನೋ, ನಾಮ ನಿರ್ದೇಶಿತನಾಗಿರುವನೋ ಅಥವಾ ಸಹ ಸದಸ್ಯನಾಗಿ ಸೇರಿಕೊಂಡಿರುವನೋ ಆ ವ್ಯಕ್ತಿಯು ಸದಸ್ಯನ ಸ್ಥಾನದಲ್ಲಿ ಮುಂದುವರೆಯುತ್ತಿದ್ದ ಉಳಿದ ಭಾಗದ ಅವಧಿಗೆ ಅಂಥ ಖಾಲಿ ಸ್ಥಾನವನ್ನು ಭರ್ತಿಗೊಳಿಸತಕ್ಕದ್ದು.

(2) ಮಂಡಳಿಯು ಯಾವುದೇ ಪ್ರಾಧಿಕಾರದ ಅಥವಾ ವಿಶ್ವವಿದ್ಯಾಲಯದ ನಿಕಾಯದ ಸದಸ್ಯನಾದ ಯಾವುದೇ ವ್ಯಕ್ತಿಯನ್ನು ಅಂಥ ವ್ಯಕ್ತಿಯು ನೈತಿಕ ಪತನವನ್ನೊಳಗೊಂಡ ಯಾವುದೇ ಅಪರಾಧಕ್ಕಾಗಿ ನಿರ್ಣೀತ ಅಪರಾಧಿಯೆಂದು ಅಥವಾ ಸಂಬಂಧಪಟ್ಟ ಸದಸ್ಯನು ನಿರ್ವಹಿಸುತ್ತಿರುವ ಹುದ್ದೆಯ ಘನತೆಗೆ ಆತನ ನಡತೆಯು ಸರಿಹೊಂದುತ್ತಿಲ್ಲವೆಂಬ ಕಾರಣದ ಮೇಲೆ ಕುಲಾಧಿಪತಿಯವರ ಅನುಮೋದನೆ ಪಡೆದು ಸದಸ್ಯತ್ವದಿಂದ ತೆಗೆದುಹಾಕಬಹುದು. ಅಂಥ ವ್ಯಕ್ತಿಯು ಸಕ್ಷಮ ನ್ಯಾಯಾಲಯದಿಂದ ಹಾಗೆ ಅಪರಾಧಿಯಾಗಿ ನಿರ್ಣೀತನಾಗಿದ್ದರೆ ಕುಲಾಧಿಪತಿಯವರ ಪೂರ್ವಾನುಮೋದನೆಯು ಅವಶ್ಯಕವಾಗುವುದಿಲ್ಲ.

ಪರಂತು, ಯಾವುದೇ ವ್ಯಕ್ತಿಗೆ ತನ್ನ ಅಹವಾಲು ಹೇಳಿಕೊಳ್ಳಲು ಸಮಂಜಸ ಅವಕಾಶವನ್ನು ನೀಡಿದ ಹೊರತು ಅವರ ವಿರುದ್ಧ ಅಂಥ ಆದೇಶವನ್ನು ಹೊರಡಿಸತಕ್ಕದ್ದಲ್ಲ.

(3) ಬೇರೊಂದು ನಿಕಾಯದ ಸದಸ್ಯನಾದ ಯಾವನೇ ವ್ಯಕ್ತಿಯು ಆ ಸಂಸ್ಥೆಯು ವಿಶ್ವವಿದ್ಯಾಲಯದ ಒಂದು ನಿಕಾಯವಾಗಿರಲಿ ಇಲ್ಲದಿರಲಿ, ಅದರ ಪ್ರತಿನಿಧಿಯಾಗಿ ವಿಶ್ವವಿದ್ಯಾಲಯದ ಯಾವುದೇ ಪ್ರಾಧಿಕಾರ ಅಥವಾ ನಿಕಾಯದ ಸದಸ್ಯನಾಗಿರುವ ಸಂದರ್ಭದಲ್ಲಿ, ಆತನು ತನ್ನ ಸದಸ್ಯತ್ವದ ಅವಧಿ ಮುಕ್ತಾಯವಾಗುವುದಕ್ಕಿಂತ ಮುಂಚೆ, ತನ್ನನ್ನು ನೇಮಿಸಿದ ಅಥವಾ ನಾಮನಿರ್ದೇಶನ ಮಾಡಿದ ನಿಕಾಯದ ಸದಸ್ಯನಾಗಿರುವುದು ಮುಕ್ತಾಯವಾಗಿದ್ದರೆ, ವಿಶ್ವವಿದ್ಯಾಲಯದ ಆ ಪ್ರಾಧಿಕಾರ ಅಥವಾ ನಿಕಾಯದ ಸದಸ್ಯತ್ವವೂ ನಿಂತುಹೋಗತಕ್ಕದ್ದು.

(4) ಯಾವುದೇ ವ್ಯಕ್ತಿಯು ತಾನು ಹೊಂದಿರುವ ಹುದ್ದೆಯ ಬಲದಿಂದಾಗಿ ವಿಶ್ವವಿದ್ಯಾಲಯದ ಯಾವುದೇ ಪ್ರಾಧಿಕಾರದ ಅಥವಾ ನಿಕಾಯದ ಸದಸ್ಯನಾಗಿರುವಲ್ಲೆಲ್ಲಾ, ತನ್ನ ಸದಸ್ಯತ್ವದ ಅವಧಿಯು ಮುಕ್ತಾಯವಾಗುವ ಮುನ್ನವೆ ಆತ ಆ ಹುದ್ದೆಯಲ್ಲಿರುವುದು ನಿಂತುಹೋದರೆ, ಆತ/ಆಕೆಯು ಹೊಂದಿರುವ ಅಂಥ ಪ್ರಾಧಿಕಾರದ ಅಥವಾ ನಿಕಾಯದ ಸದಸ್ಯತ್ವವೂ ನಿಂತುಹೋಗತಕ್ಕದ್ದು:

ಪರಂತು, ನಾಲ್ಕು ತಿಂಗಳಿಗೆ ಮೀರದ ಅವಧಿಗೆ ಆತನು ರಜೆಯ ಮೇಲೆ ಹೋಗಿದ್ದರೆ ಅದನ್ನು ಆತನು ಹುದ್ದೆಯಲ್ಲಿರುವುದು ನಿಂತುಹೋಗಿದೆಯೆಂದು ಭಾವಿಸತಕ್ಕದ್ದಲ್ಲ.

(5) ವಿಶ್ವವಿದ್ಯಾಲಯದ ಯಾವುದೇ ಪ್ರಾಧಿಕಾರ ಅಥವಾ ನಿಕಾಯದ ಪದನಿಮಿತ್ತ ಸದಸ್ಯನಲ್ಲದ ಇತರ ಯಾವುದೇ ಸದಸ್ಯನು ಕುಲಪತಿಯವರ ವಿಳಾಸಕ್ಕೆ ಒಂದು ಪತ್ರವನ್ನು ಬರೆದು ರಾಜೀನಾಮೆ ನೀಡಬಹುದು ಮತ್ತು ಅಂಥ ರಾಜೀನಾಮೆಯು ಅದನ್ನು ಸ್ವೀಕರಿಸಿದ ದಿನಾಂಕದಿಂದ ಜಾರಿಗೆಬರತಕ್ಕದ್ದು.

**23. ಕ್ರಮಗಳ ಸಿಂಧುತ್ವ ಮತ್ತು ಅದಕ್ಕೆ ರಕ್ಷಣೆ.–** (1) ವಿಶ್ವವಿದ್ಯಾಲಯದ ಯಾವುದೇ ಪ್ರಾಧಿಕಾರ ಅಥವಾ ನಿಕಾಯದ ಯಾವುದೇ ಕ್ರಮ ಅಥವಾ ವ್ಯವಹರಣೆಯು ಅದರ ಸದಸ್ಯರುಗಳ ಸ್ಥಾನಗಳಲ್ಲಿ ಯಾವುದೇ ಸ್ಥಾನವು ಖಾಲಿ ಇರುವ ಕಾರಣದಿಂದಾಗಿ ಅಥವಾ ಯಾವೊಬ್ಬ ವ್ಯಕ್ತಿಯು ಮೊದಲು ವ್ಯವಹರಣೆಗಳಲ್ಲಿ ಭಾಗವಹಿಸಿದ್ದು ನಂತರ ಹಾಗೆ ಮಾಡಲು ಹಕ್ಕುಳ್ಳವನಲ್ಲವೆಂದು ಕಂಡುಬಂದ ಕಾರಣದಿಂದಾಗಿ ಅಸಿಂಧುವಾಗತಕ್ಕದ್ದಲ್ಲ.

(2) ಈ ಅಧಿನಿಯಮದಲ್ಲಿ ಅನ್ಯಥಾ ಉಪಬಂಧಿಸಿರುವುದನ್ನುಳಿದು, ವಿಶ್ವವಿದ್ಯಾಲಯದಿಂದ ಅಥವಾ ಅದರ ಪ್ರಾಧಿಕಾರಗಳಿಂದ ಸದ್ಭಾವನೆಯಿಂದ ಕೈಗೊಂಡ ಎಲ್ಲಾ ಕ್ರಮಗಳು ಅಥವಾ ಹೊರಡಿಸಿದ ಎಲ್ಲಾ ಆದೇಶಗಳು ಅಂತಿಮವಾಗಿರತಕ್ಕದ್ದು ಮತ್ತು ಈ ಅಧಿನಿಯಮ ಅಥವಾ ಶಾಸನಗಳು ಅಥವಾ ವಿನಿಯಮಗಳನ್ನು ಅನುಸರಿಸಿ ಮಾಡಿದೆ ಅಥವಾ ಮಾಡಲಾಗಿದೆ ಎಂದು ತಾತ್ಪರ್ಯವಾಗಿರುವ ಯಾವುದೇ ಕಾರ್ಯದ ಸಂಬಂಧದಲ್ಲಿ ವಿಶ್ವವಿದ್ಯಾಲಯ ಅಥವಾ ಅದರ ಪ್ರಾಧಿಕಾರದ ವಿರುದ್ಧವಾಗಿ ಯಾವುದೇ ದಾವೆಯನ್ನು ಹೂಡತಕ್ಕದ್ದಲ್ಲ ಅಥವಾ ಹಾನಿ ಪರಿಹಾರವನ್ನು ಕ್ಲೈಮು ಮಾಡತಕ್ಕದ್ದಲ್ಲ.

(3) ಈ ಅಧಿನಿಯಮದ ಅಥವಾ ಅದರಡಿಯಲ್ಲಿ ರಚಿಸಿರುವ ಯಾವುದೇ ಶಾಸನಗಳ ಪಾಲನೆಯಲ್ಲಿ ಸದ್ಭಾವನೆಯಿಂದ ಮಾಡಿದ ಅಥವಾ ಮಾಡಬೇಕೆಂದು ಉದ್ದೇಶಿಸಿದ ಯಾವುದೇ ಕಾರ್ಯದ ಸಂಬಂಧದಲ್ಲಿ ವಿಶ್ವವಿದ್ಯಾಲಯ ಯಾವೊಬ್ಬ ಅಧಿಕಾರಿಯ ಅಥವಾ ಇತರ ನೌಕರನ ವಿರುದ್ಧ ಯಾವುದೇ ದಾವೆ ಅಥವಾ ಇತರ ಕಾನೂನು ವ್ಯವಹರಣೆಯನ್ನು ಹೂಡಲು ಅವಕಾಶವಿರತಕ್ಕದ್ದಲ್ಲ.

## ಅಧ್ಯಾಯ - IV

## ವಿಶ್ವವಿದ್ಯಾಲಯದ ಅಧಿಕಾರಿಗಳು

**24. ವಿಶ್ವವಿದ್ಯಾಲಯದ ಅಧಿಕಾರಿಗಳು.–** ಈ ಮುಂದಿನವರುಗಳು ವಿಶ್ವವಿದ್ಯಾಲಯದ ಅಧಿಕಾರಿಗಳಾಗಿರತಕ್ಕದ್ದು, ಎಂದರೆ:–

(i) ಕುಲಾಧಿಪತಿಯವರು;

(ii) ಸಹ ಕುಲಾಧಿಪತಿಯವರು;

(iii) ಕುಲಪತಿಯವರು;

(iv) ನಿರ್ದೇಶಕರುಗಳು;

(v) ಡೀನ್‌ಗಳು;

(vi) ಕುಲಸಚಿವರು;

(vii) ವಿಶ್ವವಿದ್ಯಾಲಯ ಗ್ರಂಥಪಾಲಕರು;

(viii) ವಿದ್ಯಾರ್ಥಿ ಕ್ಷೇಮಾಭಿವೃದ್ಧಿ ಡೀನ್;

(ix) ಶಾಸನಗಳ ಮೂಲಕ ವಿಶ್ವವಿದ್ಯಾಲಯದ ಅಧಿಕಾರಿಗಳೆಂದು ಘೋಷಿಸ ಬಹುದಾದಂತಹ ವಿಶ್ವವಿದ್ಯಾಲಯದ ಸೇವೆಯಲ್ಲಿರುವ ಇತರ ಅಧಿಕಾರಿಗಳು; ಮತ್ತು

(x) ಲೆಕ್ಕ ನಿಯಂತ್ರಕರು;

**25. ಕುಲಾಧಿಪತಿ.–** (1) ಕರ್ನಾಟಕ ರಾಜ್ಯದ ರಾಜ್ಯಪಾಲರು ತಮ್ಮ ಹುದ್ದೆಯ ಬಲದಿಂದಾಗಿ ವಿಶ್ವವಿದ್ಯಾಲಯದ ಕುಲಾಧಿಪತಿಯಾಗಿರತಕ್ಕದ್ದು.

(2) ಕುಲಾಧಿಪತಿಯವರು ವಿಶ್ವವಿದ್ಯಾಲಯದ ಮುಖ್ಯಸ್ಥರಾಗಿರತಕ್ಕದ್ದು ಮತ್ತು ಅವರು ಹಾಜರಿದ್ದಾಗ ವಿಶ್ವವಿದ್ಯಾಲಯದ ಘಟಿಕೋತ್ಸವಗಳ ಅಧ್ಯಕ್ಷತೆಯನ್ನು ವಹಿಸತಕ್ಕದ್ದು.

(3) ಗೌರವ ಪದವಿಯನ್ನು ನೀಡುವ ಪ್ರತಿಯೊಂದು ಪ್ರಸ್ತಾವಕ್ಕೂ ವ್ಯವಸ್ಥಾಪನಾ ಮಂಡಳಿಯ ಅನುಮೋದನೆ ನೀಡಿ ಕುಲಾಧಿಪತಿಯವರು ಸ್ಥಿರೀಕರಿಸಿರತಕ್ಕದ್ದು.

(4) ಈ ಅಧಿನಿಯಮ ಮತ್ತು ಶಾಸನಗಳಿಗೆ ಅನುಸಾರವಾಗಿರದ ವಿಶ್ವವಿದ್ಯಾಲಯದ ಯಾವುದೇ ಅಧಿಕಾರಿ ಅಥವಾ ಪ್ರಾಧಿಕಾರದ ಯಾವುದೇ ಆದೇಶ ಅಥವಾ ವ್ಯವಹರಣೆಗಳನ್ನು ಕುಲಾಧಿಪತಿಯವರು ಲಿಖಿತದ ಆದೇಶದ ಮೂಲಕ ಶೂನ್ಯಗೊಳಿಸಬಹುದು :

ಪರಂತು ಅಂತಹ ಆದೇಶವನ್ನು ಹೊರಡಿಸುವ ಮೊದಲು ಅವರು ಅಂತಹ ಆದೇಶವನ್ನು ಏಕೆ ಹೊರಡಿಸಬಾರದು ಎಂದು ಕಾರಣ ಕೇಳುವ ನೋಟೀಸನ್ನು ಸಂಬಂಧಪಟ್ಟ ಅಧಿಕಾರಿ ಅಥವಾ ಪ್ರಾಧಿಕಾರಕ್ಕೆ ನೀಡತಕ್ಕದ್ದು ಮತ್ತು ಅಂತಹ ಆದೇಶದಲ್ಲಿ ಈ ಸಂಬಂಧದಲ್ಲಿ ನಿರ್ದಿಷ್ಟಪಡಿಸಿದ ಅವಧಿಯೊಳಗೆ ಯಾವುದೇ ಕಾರಣವನ್ನು ನೀಡಿದಲ್ಲಿ ಅದನ್ನು ಅವರು ಪರಿಗಣಿಸತಕ್ಕದ್ದು.

(5) ಕುಲಾಧಿಪತಿಯವರು ಈ ಅಧಿನಿಯಮದ ಅಥವಾ ಶಾಸನಗಳ ಮೂಲಕ ತಮಗೆ ಪ್ರದತ್ತವಾದಂತಹ ಇತರ ಅಧಿಕಾರಗಳನ್ನು ಚಲಾಯಿಸತಕ್ಕದ್ದು ಮತ್ತು ಅಂತಹ ಇತರ ಕರ್ತವ್ಯಗಳನ್ನು ನಿರ್ವಹಿಸತಕ್ಕದ್ದು.

**26. ಸಹಕುಲಾಧಿಪತಿಯವರು.–** (1) ಕರ್ನಾಟಕ ರಾಜ್ಯದ ಕೃಷಿ ಸಚಿವರು ತಮ್ಮ ಹುದ್ದೆಯ ಬಲದಿಂದಾಗಿ ಸಹಕುಲಾಧಿಪತಿಗಳಾಗಿರತಕ್ಕದ್ದು.

(2) ಸಹಕುಲಾಧಿಪತಿಯವರು ಈ ಅಧಿನಿಯಮದ ಮೂಲಕ ಅದರಡಿಯಲ್ಲಿ ಅಥವಾ ಶಾಸನಗಳ ಅಡಿಯಲ್ಲಿ ತಮಗೆ ಪ್ರದತ್ತವಾಗಬಹುದಾದಂತಹ ಕುಲಾಧಿಪತಿಯವರ ಅಧಿಕಾರಗಳು ಮತ್ತು ಪ್ರಕಾರ್ಯಗಳನ್ನು ಚಲಾಯಿಸತಕ್ಕದ್ದು. ಕುಲಾಧಿಪತಿಯವರು ಸಹಕುಲಾಧಿಪತಿಯವರಿಗೆ ಲಿಖಿತ ಆದೇಶದ ಮೂಲಕ ಪ್ರತ್ಯಾಯೋಜಿಸಬಹುದಾದಂತಹ ಕುಲಾಧಿಪತಿಯವರ ಅಧಿಕಾರಗಳನ್ನು ಸಹ ಅವರು ಚಲಾಯಿಸತಕ್ಕದ್ದು ಮತ್ತು ಅಂತಹ ಇತರ ಕರ್ತವ್ಯಗಳನ್ನು ಸಹ ನಿರ್ವಹಿಸತಕ್ಕದ್ದು ಹಾಗೂ ಅಂತಹ ಪ್ರತ್ಯಾಯೋಜನೆಯು ಆದೇಶದಲ್ಲಿ ನಿರ್ದಿಷ್ಟಪಡಿಸಿದಂತಹ ನಿರ್ಬಂಧಗಳಿಗೆ ಒಳಪಟ್ಟಿರತಕ್ಕದ್ದು.

(3) ಅವರು ಕುಲಾಧಿಪತಿಯವರ ಅನುಪಸ್ಥಿತಿಯಲ್ಲಿ ವಿಶ್ವವಿದ್ಯಾಲಯದ ಘಟಿಕೋತ್ಸವದ ಅಧ್ಯಕ್ಷತೆಯನ್ನು ವಹಿಸತಕ್ಕದ್ದು.

**27. ಕುಲಪತಿಯವರು .–** (1) ಕುಲಪತಿಯವರು ವಿಶ್ವವಿದ್ಯಾಲಯದ ಪೂರ್ಣಕಾಲಿಕ ಅಧಿಕಾರಿಯಾಗಿರತಕ್ಕದ್ದು.

(2) ರಾಜ್ಯ ಸರ್ಕಾರವು ಈ ಮುಂದಿನ ವ್ಯಕ್ತಿಗಳನ್ನು ಒಳಗೊಂಡ ಒಂದು ಶೋಧನಾ ಸಮಿತಿಯನ್ನು ರಚಿಸತಕ್ಕದ್ದು, ಎಂದರೆ:–

(i) ಮಹಾ ನಿರ್ದೇಶಕರು, ಭಾರತೀಯ ಕೃಷಿ ಸಂಶೋಧನಾ ಪರಿಷತ್ತು;

(ii) ಅಧ್ಯಕ್ಷರು, ವಿಶ್ವವಿದ್ಯಾಲಯ ಅನುದಾನ ಆಯೋಗ ಅಥವಾ ಅವರ ನಾಮನಿರ್ದೇಶಿತರು;

(iii) ಕುಲಾಧಿಪತಿಯವರ ಒಬ್ಬ ನಾಮನಿರ್ದೇಶಿತರು;

(iv) ರಾಜ್ಯ ಸರ್ಕಾರದ ಒಬ್ಬ ನಾಮನಿರ್ದೇಶಿತರು;

ರಾಜ್ಯ ಸರ್ಕಾರವು ಅಂತಹ ಸಮಿತಿಯ ಸದಸ್ಯರಲ್ಲಿ ಒಬ್ಬರನ್ನು ಸಮಿತಿಯ ಅಧ್ಯಕ್ಷರಾಗಿ ನೇಮಕ ಮಾಡತಕ್ಕದ್ದು. ಕೃಷಿ ಇಲಾಖೆಯ ಪ್ರಭಾರದಲ್ಲಿರುವ ಸರ್ಕಾರದ ಕಾರ್ಯದರ್ಶಿಗಳು ಅಥವಾ ಸರ್ಕಾರದ ಉಪ ಕಾರ್ಯದರ್ಶಿಗಳ ದರ್ಜೆಗಿಂತ ಕಡಿಮೆಯಲ್ಲದ ದರ್ಜೆಯ ಅವರ ನಾಮನಿರ್ದೇಶಿತರು ಶೋಧನಾ ಸಮಿತಿಯ ಸಂಚಾಲಕರಾಗಿರತಕ್ಕದ್ದು.

(3) ಶೋಧನಾ ಸಮಿತಿಯು ಖ್ಯಾತ ಕೃಷಿ ತಜ್ಞರಾದ ಮೂರು ವ್ಯಕ್ತಿಗಳ ಹೆಸರಿನ ಪಟ್ಟಿಯನ್ನು ಅಕಾರದಿಯಾಗಿ ರಾಜ್ಯ ಸರ್ಕಾರಕ್ಕೆ ಸಲ್ಲಿಸತಕ್ಕದ್ದು. ರಾಜ್ಯ ಸರ್ಕಾರವು ಕುಲಾಧಿಪತಿಯವರಿಗೆ ಆ ಪಟ್ಟಿಯನ್ನು ಕಳುಹಿಸತಕ್ಕದ್ದು. ಕುಲಾಧಿಪತಿಯವರು ಅರ್ಹತೆ, ಸಮದರ್ಶಿತ್ವ ಮತ್ತು ಸಾಮಾಜಿಕ ನ್ಯಾಯ ಇವುಗಳನ್ನು ಗಮನದಲ್ಲಿಟ್ಟುಕೊಂಡು ಮತ್ತು ರಾಜ್ಯ ಸರ್ಕಾರದ ಸಹಮತಿಯೊಡನೆ ಸದರಿ ಪಟ್ಟಿಯಿಂದ ಒಬ್ಬ ವ್ಯಕ್ತಿಯನ್ನು ಕುಲಪತಿಯಾಗಿ ನೇಮಿಸತಕ್ಕದ್ದು:

ಪರಂತು, ಕುಲಾಧಿಪತಿಯವರು, ಅವಶ್ಯವಿದ್ದಲ್ಲಿ ರಾಜ್ಯ ಸರ್ಕಾರದ ಸಹಮತಿಯೊಡನೆ ಎರಡನೇ ಪಟ್ಟಿಯನ್ನು ಕೇಳಬಹುದು ಮತ್ತು ಶೋಧನಾ ಸಮಿತಿಯು ಎರಡನೇ ಪಟ್ಟಿಯನ್ನು ಕಳುಹಿಸತಕ್ಕದ್ದು ಮತ್ತು ಅದು ಅಂತಿಮವಾಗಿರತಕ್ಕದ್ದು.

(4) (3)ನೇ ಉಪ ಪ್ರಕರಣದಲ್ಲಿ ಏನೇ ಇದ್ದರೂ ಕೃಷಿ ವಿಜ್ಞಾನಗಳ ವಿಶ್ವವಿದ್ಯಾಲಯದ ಮೊದಲ ಕುಲಪತಿಯವರನ್ನು ರಾಜ್ಯ ಸಕಾರದ ಶಿಫಾರಸ್ಸಿನ ಮೇಲೆ ಕುಲಾಧಿಪತಿಯವರು ನೇಮಕ ಮಾಡತಕ್ಕದ್ದು.

(5) ಕುಲಪತಿಯವರು ನಾಲ್ಕು ವರ್ಷಗಳವರೆಗೆ ಅಥವಾ ಅವರಿಗೆ ಅರವತ್ತೈದು ವರ್ಷಗಳಾಗುವವರೆಗೆ ಇವುಗಳಲ್ಲಿ ಯಾವುದು ಮೊದಲೋ ಆ ಅವಧಿಯವರೆಗೆ ಪದಧಾರಣೆಯನ್ನು ಮಾಡಿರತಕ್ಕದ್ದು. ಅವರು ಪುನರ್ ನೇಮಕಾತಿಗೆ ಅರ್ಹರಾಗಿರತಕ್ಕದ್ದಲ್ಲ.

(6) ಕುಲಪತಿಯವರ ಉಪಲಬ್ಧಿಗಳು ಮತ್ತು ಇತರ ಸೇವಾ ಷರತ್ತುಗಳು ಕುಲಾಧಿಪತಿಯವರು ನಿರ್ಧರಿಸಬಹುದಾದಂತೆ ಇರತಕ್ಕದ್ದು ಮತ್ತು ಅವುಗಳನ್ನು ಅವರು ಕುಲಪತಿಯಾಗಿ ನೇಮಕವಾದ ತರುವಾಯ ಅವರಿಗೆ ಅನಾನುಕೂಲವಾಗುವಂತೆ ಬದಲಾಯಿಸತಕ್ಕದಲ್ಲ.

(7) ಕುಲಪತಿಯವರು ಕುಲಾಧಿಪತಿಯವರಿಗೆ ರಾಜಿನಾಮೆ ಪತ್ರವನ್ನು ಬರೆದು ತನ್ನ ಸಹಿ ಹಾಕಿ ತಾನು ಬಿಡುಗಡೆಗೊಳ್ಳಲು ಇಚ್ಛಿಸುವ ದಿನಾಂಕದಿಂದ ಅರವತ್ತು ದಿನಗಳಿಗೆ ಮೊದಲು ಅದನ್ನು ಕುಲಾಧಿಪತಿಯವರಿಗೆ ಕಳುಹಿಸುವ ಮೂಲಕ ತನ್ನ ಸ್ಥಾನವನ್ನು ತ್ಯಜಿಸಬಹುದು ಆದರೆ ಕುಲಾಧಿಪತಿಯವರು ಅವರನ್ನು ಅದಕ್ಕೂ ಮೊದಲೇ ಬಿಡುಗಡೆಗೊಳಿಸಬಹುದು.

(8) ಕುಲಪತಿಯವರ ಹುದ್ದೆಯು ತಾತ್ಕಾಲಿಕವಾಗಿ ಖಾಲಿಯಾದರೆ ಅಥವಾ ಅವರ ರಜೆಯ ಕಾರಣದಿಂದಾಗಿ ಗೈರುಹಾಜರಾದಲ್ಲಿ ಅಥವಾ ಇನ್ನಾವುದೇ ಕಾರಣಗಳಿಗಾಗಿ ಖಾಲಿಯಾದರೆ ಶಿಕ್ಷಣ ನಿರ್ದೇಶಕರು ಮತ್ತು ಶಿಕ್ಷಣ ನಿರ್ದೇಶಕರ ಗೈರು ಹಾಜರಿಯಲ್ಲಿ, ಕುಲಸಚಿವರು ಅಥವಾ ಕೇಂದ್ರ ಕಾರ್ಯಸ್ಥಾನದಲ್ಲಿರುವ ವಿಶ್ವವಿದ್ಯಾಲಯದ ಅತ್ಯಂತ ಹಿರಿಯ ನಿರ್ದೇಶಕರು, ಕುಲಾಧಿಪತಿಯವರ ಅನುಮೋದನೆ ಪಡೆದು ಕುಲಪತಿಯವರ ಕರ್ತವ್ಯಗಳನ್ನು ನಿರ್ವಹಿಸಬಹುದು. ಆದರೆ ಅವರ ಪದಾವಧಿಯು ಆರು ತಿಂಗಳುಗಳನ್ನು ಮೀರತಕ್ಕದ್ದಲ್ಲ.

(9) ಕುಲಪತಿಯವರನ್ನು, ಅವರ ದುರ್ನಡತೆಯ ಕಾರಣದ ಮೇಲೆ ಅಥವಾ ಅಸಮರ್ಥತೆಯ ಕಾರಣದ ಮೇಲೆ ಅಥವಾ ಕುಲಪತಿಯವರು ತಮ್ಮ ಪದದಲ್ಲಿ ಮುಂದುವರಿಯುವುದರಿಂದ ವಿಶ್ವವಿದ್ಯಾಲಯದ ಹಿತಾಸಕ್ತಿಗೆ ದಕ್ಕೆ ಉಂಟಾಗುತ್ತದೆಂದು ಕುಲಾಧಿಪತಿಯವರು ಮನಗಂಡರೆ ಆಗ ಕುಲಾಧಿಪತಿಯವರು ಉಚ್ಚ ನ್ಯಾಯಾಲಯದ ನ್ಯಾಯಮೂರ್ತಿಯವರನ್ನು ಅಥವಾ ನ್ಯಾಯಮೂರ್ತಿ ಆಗಿದ್ದವರನ್ನು ನಾಮನಿರ್ದೇಶನ ಮಾಡಿ ಅವರಿಂದ ಯುಕ್ತ ವಿಚಾರಣೆಯನ್ನು ನಡೆಸಿದ ತರುವಾಯ ಮತ್ತು ಆ ವಿಚಾರಣೆಯಲ್ಲಿ ಕುಲಪತಿಯವರಿಗೆ ಮನವಿಯನ್ನು ಸಲ್ಲಿಸಲು ಅವಕಾಶವನ್ನು ನೀಡಿ, ಕುಲಾಧಿಪತಿಯವರು ಹೊರಡಿಸಿದ ಆದೇಶದ ಮೂಲಕವಾಗಿ ಹೊರತು ಅನ್ಯಥಾ ಕುಲಪತಿಯವರನ್ನು ಅವರ ಸ್ಥಾನದಿಂದ ತೆಗೆಯತಕ್ಕದ್ದಲ್ಲ.

**28. ವಿಶೇಷಾಧಿಕಾರಿ.–** (1) ಸರ್ಕಾರವು ಒಬ್ಬ ಅಧಿಕಾರಿಯನ್ನು ವಿಶೇಷಾಧಿಕಾರಿಯಾಗಿ ನೇಮಕ ಮಾಡತಕ್ಕದ್ದು.

(2) (1)ನೇ ಉಪ ಪ್ರಕರಣದ ಅಡಿಯಲ್ಲಿ ನೇಮಕಗೊಂಡ ವಿಶೇಷಾಧಿಕಾರಿಯು ರಾಯಚೂರಿನ ಕೃಷಿ ವಿಜ್ಞಾನಗಳ ವಿಶ್ವವಿದ್ಯಾಲಯದ ಸ್ಥಾಪನೆಗೆ ಸೂಕ್ತ ಕ್ರಮಗಳನ್ನು ಕೈಗೊಳ್ಳತಕ್ಕದು ಮತ್ತು ರಾಜ್ಯ ಸರ್ಕಾರವು ನಿರ್ದಿಷ್ಟಪಡಿಸಬಹುದಾದಂಥ ವಿಶ್ವವಿದ್ಯಾಲಯದ ಕುಲಪತಿಗಳ ಅಧಿಕಾರಗಳನ್ನು ಚಲಾಯಿಸತಕ್ಕದ್ದು ಮತ್ತು ಪ್ರಕಾರ್ಯಗಳನ್ನು ನೆರವೇರಿಸತಕ್ಕದ್ದು.

(3) ವಿಶೇಷಾಧಿಕಾರಿಯು ಮೊದಲನೇ ಕುಲಪತಿಯವರು ನೇಮಕವಾಗುವವರೆಗೆ ಪದಧಾರಣೆಯನ್ನು ಮಾಡಿರುತ್ತಾರೆ.

**29. ಕುಲಪತಿಯವರ ಅಧಿಕಾರಗಳು ಮತ್ತು ಕರ್ತವ್ಯಗಳು.– (1)** ಕುಲಪತಿಯವರು ವಿಶ್ವವಿದ್ಯಾಲಯದ ಪ್ರಧಾನ ಕಾರ್ಯನಿರ್ವಾಹಕ ಶೈಕ್ಷಣಿಕ ಅಧಿಕಾರಿ ಮತ್ತು ಮಂಡಳಿಯ, ವಿದ್ಯಾವಿಷಯಕ ಪರಿಷತ್ತಿನ ಮತ್ತು ಇತರ ಪ್ರಾಧಿಕಾರಗಳ ಪದನಿಮಿತ್ತ ಅಧ್ಯಕ್ಷರಾಗಿರತಕ್ಕದ್ದು ಹಾಗೂ ಕುಲಾಧಿಪತಿಯವರ ಮತ್ತು ಸಹಕುಲಾಧಿಪತಿಯವರ ಅನುಪಸ್ಥಿತಿಯಲ್ಲಿ ವಿಶ್ವವಿದ್ಯಾಲಯದ ಘಟಿಕೋತ್ಸವದ ಅಧ್ಯಕ್ಷತೆಯನ್ನು ವಹಿಸತಕ್ಕದ್ದು ಹಾಗೂ ಪದವಿಗಳನ್ನು ಪಡೆಯಲು ಅರ್ಹರಾದವರಿಗೆ ಪದವಿಗಳನ್ನು ಪ್ರದಾನ ಮಾಡತಕ್ಕದ್ದು.

(2) ಕುಲಪತಿಯವರು ವಿಶ್ವವಿದ್ಯಾಲಯದ ವ್ಯವಹಾರಗಳ ಮೇಲೆ ಸಾಮಾನ್ಯ ನಿಯಂತ್ರಣವನ್ನು ಹೊಂದಿರತಕ್ಕದ್ದು ಮತ್ತು ವಿಶ್ವವಿದ್ಯಾಲಯದ ಶಿಸ್ತನ್ನು ಕಾಪಾಡುವುದಕ್ಕೆ ಜವಾಬ್ದಾರರಾಗಿರತಕ್ಕದ್ದು.

(3) ಕುಲಪತಿಯವರು ಮಂಡಳಿಯ, ವಿದ್ಯಾವಿಷಯಕ ಪರಿಷತ್ತಿನ, ಸಂಶೋಧನಾ ಪರಿಷತ್ತಿನ ವಿಸ್ತರಣಾ ಶಿಕ್ಷಣ ಪರಿಷತ್ತಿನ ಸಭೆಗಳನ್ನು ಏರ್ಪಡಿಸತಕ್ಕದ್ದು.

(4) ಕುಲಪತಿಯವರು ಈ ಅಧಿನಿಯಮದ, ಶಾಸನಗಳ ಮತ್ತು ವಿನಿಯಮಗಳ ಉಪಬಂಧಗಳು ಸರಿಯಾಗಿ ಪಾಲನೆಯಾಗುವಂತೆ ನೋಡಿಕೊಳ್ಳತಕ್ಕದ್ದು.

(5) ಕುಲಪತಿಯವರು ವಾರ್ಷಿಕ ಹಣಕಾಸು ಅಂದಾಜುಗಳನ್ನು ಮತ್ತು ವಾರ್ಷಿಕ ಲೆಕ್ಕಪತ್ರಗಳನ್ನು ಮಂಡಳಿಗೆ ಮಂಡಿಸುವುದಕ್ಕೆ ಹೊಣೆಗಾರರಾಗಿರತಕ್ಕದ್ದು.

(6) ಕುಲಪತಿಯವರು ಯಾವುದೇ ತುರ್ತು ಪರಿಸ್ಥಿತಿಯ ಸಂದರ್ಭದಲ್ಲಿ ತಕ್ಷಣ ಕ್ರಮಕೈಗೊಳ್ಳಬೇಕಾಗಿದೆ ಎಂದು ಅಭಿಪ್ರಾಯಪಟ್ಟಲ್ಲಿ ಅವರು ಅಂಥ ಯಾವುದೇ ಕ್ರಮವನ್ನು ಕೈಗೊಳ್ಳಬಹುದು. ಅಂತಹ ಸಂದರ್ಭದಲ್ಲಿ ಅವರು ತದನಂತರ ತಾನು ಕೈಗೊಂಡ ಕ್ರಮಗಳ ಬಗ್ಗೆ, ಆದಷ್ಟು ಬೇಗನೆ ಒಂದು ವರದಿಯನ್ನು ಸಾಮಾನ್ಯವಾಗಿ ಅಂತಹ ವಿಷಯಗಳನ್ನು ನಿರ್ವಹಿಸುವ ಪ್ರಾಧಿಕಾರಕ್ಕೆ ಅಥವಾ ನಿಕಾಯಕ್ಕೆ ಸಲ್ಲಿಸತಕ್ಕದ್ದು. ಕುಲಪತಿಯವರ ಕ್ರಮವನ್ನು ಆ ಪ್ರಾಧಿಕಾರ ಅಥವಾ ನಿಕಾಯವು ಒಪ್ಪಿಕೊಳ್ಳದಿದ್ದಲ್ಲಿ ಅಂತಹ ವಿಷಯವನ್ನು ಕುಲಾಧಿಪತಿಯವರಿಗೆ ಕಳುಹಿಸತಕ್ಕದ್ದು ಮತ್ತು ಅದರ ಬಗ್ಗೆ ಅವರ ತೀರ್ಮಾನವು ಅಂತಿಮವಾಗಿರತಕ್ಕದ್ದು.

(7) ಕುಲಪತಿಯವರು ಕೈಗೊಂಡ ಕ್ರಮದಿಂದಾಗಿ ವಿಶ್ವವಿದ್ಯಾಲಯದ ಸೇವೆಯಲ್ಲಿರುವ ಯಾವುದೇ ವ್ಯಕ್ತಿಗೆ ತೊಂದರೆ ಉಂಟಾದಲ್ಲಿ, ಅಂತಹ ವ್ಯಕ್ತಿಯು ಕೈಗೊಂಡ ಕ್ರಮದ ಬಗ್ಗೆ ನೋಟೀಸನ್ನು ಸ್ವೀಕರಿಸಿದ ದಿನಾಂಕದಿಂದ ಮೂವತ್ತು ದಿನಗಳೊಳಗೆ ಮಂಡಳಿಗೆ ಅಪೀಲನ್ನು ಸಲ್ಲಿಸಬಹುದು.

(8) ಮಂಡಳಿಯ ಮೇಲ್ಮನವಿ ಆದೇಶದಿಂದ ಬಂಧಿತನಾದ ಯಾವೊಬ್ಬ ವ್ಯಕ್ತಿಯು ಅಂತಹ ಆದೇಶವನ್ನು ಸ್ವೀಕರಿಸಿದ ದಿನಾಂಕದಿಂದ ಮೂವತ್ತು ದಿನಗಳೊಳಗೆ ಕುಲಾಧಿಪತಿಯವರಿಗೆ ಎರಡನೇ ಅಪೀಲನ್ನು ಸಲ್ಲಿಸಬಹುದು ಮತ್ತು ಅಂತಹ ಅಪೀಲಿನ ಮೇಲೆ ಕುಲಾಧಿಪತಿಯವರ ತೀರ್ಮಾನವು ಅಂತಿಮವಾಗಿರತಕ್ಕದ್ದು.

(9) ಕುಲಪತಿಯವರು, (8)ನೇ ಉಪಪ್ರಕರಣದಡಿಯಲ್ಲಿಯ ತೀರ್ಮಾನವನ್ನು ಹೊರತುಪಡಿಸಿ ಮಂಡಳಿಯ ತೀರ್ಮಾನವು ಅಧಿನಿಯಮಗಳ ಮತ್ತು ಶಾಸನಗಳ ಉಪಬಂಧಗಳಿಗೆ ಸರ್ಕಾರದ ವಿನಿಯಮಗಳಿಗೆ ಅನುಗುಣವಾಗಿಲ್ಲವೆಂದು, ಹಾಗೂ ವಿಶ್ವವಿದ್ಯಾಲಯದ ಹಿತಾಸಕ್ತಿಗೆ ಪೂರಕವಾಗಿ ಇಲ್ಲವೆಂದು ಅಭಿಪ್ರಾಯಪಟ್ಟಲ್ಲಿ ಆತನು ಹದಿನೈದು ದಿನಗಳೊಳಗಾಗಿ ಅದನ್ನು ಕುಲಾಧಿಪತಿಯವರಿಗೆ ಅವರ ತೀರ್ಮಾನವನ್ನು ಕೋರಿ ಕಳುಹಿಸಿಕೊಡತಕ್ಕದ್ದು. ಅದರ ಮೇಲೆ ಕುಲಾಧಿಪತಿಯವರು ಕೈಗೊಂಡ ತೀರ್ಮಾನವು ಅಂತಿಮವಾಗಿರತಕ್ಕದ್ದು. ಕುಲಾಧಿಪತಿಯವರು ಹಾಗೆ ಕಳುಹಿಸಿಕೊಟ್ಟ ವಿಷಯವನ್ನು ವಿಲೆಮಾಡುವವರೆಗೆ ಮಂಡಳಿಯ ತೀರ್ಮಾನವನ್ನು ಜಾರಿಗೊಳಿಸತಕ್ಕದ್ದಲ್ಲ.

(10) ಮೇಲಿನ ಉಪ ಪ್ರಕರಣದ ಉಪಬಂಧಗಳಿಗೆ ಒಳಪಟ್ಟು ಕುಲಪತಿಯವರು ವಿಶ್ವವಿದ್ಯಾಲಯದ ಅಧಿಕಾರಿಗಳು, ಅಧ್ಯಾಪಕರು ಹಾಗೂ ಇತರ ನೌಕರರ ನೇಮಕಾತಿಗಳು, ಮುಂಬಡ್ತಿಗಳು ಮತ್ತು ವಜಾ ವಿಷಯಗಳಿಗೆ ಸಂಬಂಧಿಸಿದ ಮಂಡಳಿಯ ತೀರ್ಮಾನಗಳನ್ನು ಜಾರಿಗೊಳಿಸತಕ್ಕದು.

(11) ಕುಲಪತಿಯವರು ವಿಶ್ವವಿದ್ಯಾಲಯದ ವ್ಯವಹರಣೆಗಳ ಸೂಕ್ತ ಆಡಳಿತಕ್ಕೆ ಮತ್ತು ಬೋಧನೆ, ಸಂಶೋಧನೆ ಹಾಗೂ ವಿಸ್ತರಣಾ ಶಿಕ್ಷಣ ಇವುಗಳ ನಿಕಟ ಸಹವರ್ತನೆ ಮತ್ತು ಒಗ್ಗೂಡುವಿಕೆಗೆ ಜವಾಬ್ದಾರನಾಗಿರತಕ್ಕದ್ದು.

(12) ಕುಲಪತಿಯವರು ಈ ಅಧಿನಿಯಮ ಮತ್ತು ಶಾಸನಗಳ ಉಪಬಂಧಗಳ ಅಡಿಯಲ್ಲಿ ತಮಗೆ ಪ್ರದಾನ ಮಾಡಿದ ಅಥವಾ ವಹಿಸಿದಂತಹ ಇತರ ಅಧಿಕಾರಗಳನ್ನು ಚಲಾಯಿಸತಕ್ಕದ್ದು ಮತ್ತು ಅಂತಹ ಇತರ ಕರ್ತವ್ಯಗಳನ್ನು ನೆರವೇರಿಸತಕ್ಕದ್ದು.

**30. ವಿಶ್ವವಿದ್ಯಾಲಯದ ಇತರ ಅಧಿಕಾರಿಗಳ ಸೇವೆಯ ನಿಬಂಧನೆಗಳು ಮತ್ತು ಷರತ್ತುಗಳು.–** 24ನೇ ಪ್ರಕರಣದ (iv) ರಿಂದ (ix)ನೇ ಖಂಡಗಳಲ್ಲಿ ನಿರ್ದಿಷ್ಟಪಡಿಸಿದ ವಿಶ್ವವಿದ್ಯಾಲಯದ ಅಧಿಕಾರಿಗಳನ್ನು ನಿಯಮಿಸಬಹುದಾದಂತಹ ನಿಬಂಧನೆಗಳು ಮತ್ತು ಷರತ್ತುಗಳ ಮೇಲೆ ಮಂಡಳಿಯ ಅನುಮೋದನೆಯೊಂದಿಗೆ ಕುಲಪತಿಯವರು ನೇಮಿಸತಕ್ಕದ್ದು:

ಪರಂತು, ಕುಲಪತಿಯವರು ಅಂಥ ಅಧಿಕಾರಿಗಳ ನೇಮಕಾತಿಗಳನ್ನು ವಿಶ್ವವಿದ್ಯಾಲಯದ ಸಂಬಂಧಪಟ್ಟ ಪ್ರಾಧಿಕಾರಕ್ಕೆ ಮಾಹಿತಿ ಒದಗಿಸಿ ಆರು ತಿಂಗಳ ಅವಧಿಗೆ ತಾತ್ಕಾಲಿಕ ಕ್ರಮವಾಗಿ ಮಾಡಬಹುದು.

**31. ನಿರ್ದೇಶಕರುಗಳು, ಡೀನ್‌ಗಳು, ಕುಲಸಚಿವರು, ಲೆಕ್ಕ ನಿಯಂತ್ರಕರು ಇತ್ಯಾದಿ.–**

(1) **ಶಿಕ್ಷಣ ನಿರ್ದೇಶಕರು**

(ಎ) ವಿಶ್ವವಿದ್ಯಾಲಯದ ಬೋಧನೆ, ಸಂಶೋಧನೆ ಮತ್ತು ವಿಸ್ತರಣಾ ಶಿಕ್ಷಣ ಕಾರ್ಯಕ್ರಮಗಳನ್ನು ಸಮನ್ವಯಗೊಳಿಸಲು ಜವಾಬ್ದಾರರಾಗಿರತಕ್ಕದ್ದು. ವಿಶ್ವವಿದ್ಯಾಲಯದಲ್ಲಿನ ಕಾರ್ಯನೀತಿ ವಿಷಯಗಳ ಮತ್ತು ನಿವಾಸಿ ಬೋಧನೆ ಬಗೆಗಿನ ಪದ್ಧತಿಗೆ ಮತ್ತು ಶೈಕ್ಷಣಿಕ ತಂತ್ರಜ್ಞಾನ ಮತ್ತು ಅಧ್ಯಾಪಕರ ತರಬೇತಿ ಕಾರ್ಯಕ್ರಮಗಳ ಬಗ್ಗೆ ಕಾರ್ಯನಿರ್ವಹಿಸುತ್ತಾರೆ. ಅವರು ಪರೀಕ್ಷೆಯ ಮೇಲ್ವಿಚಾರಣೆಯನ್ನು ಮಾಡತಕ್ಕದ್ದು;

(ಬಿ) ವಿದ್ಯಾವಿಷಯಕ ಪರಿಷತ್ತು, ಪದವಿ ಕಾರ್ಯಕ್ರಮಗಳ ಅಧ್ಯಯನಗಳ ಮಂಡಳಿ ಮತ್ತು ಸ್ನಾತಕೋತ್ತರ ಕಾರ್ಯಕ್ರಮಗಳ ಅಧ್ಯಯನ ಮಂಡಳಿಗಳ ಶಾಶ್ವತವಾದ ದಾಖಲೆಗಳನ್ನು ನಿರ್ವಹಿಸಲು ಮತ್ತು ವಿದ್ಯಾರ್ಥಿಗಳ ಶಿಸ್ತನ್ನು ಕಾಪಾಡಿಕೊಂಡು ಬರಲು ಜವಾಬ್ದಾರರಾಗಿರತಕ್ಕದ್ದು;

(ಸಿ) ವಿದ್ಯಾವಿಷಯಕ ಪರಿಷತ್ತಿನ ಸದಸ್ಯ ಕಾರ್ಯದರ್ಶಿಯಾಗಿ ಮತ್ತು ಪದವಿ ಮತ್ತು ಸ್ನಾತಕೋತ್ತರ ಕಾರ್ಯಕ್ರಮಗಳ ಅಧ್ಯಯನ ಮಂಡಳಿಯ ಅಧ್ಯಕ್ಷರಾಗಿ ಕರ್ತವ್ಯ ನಿರ್ವಹಿಸತಕ್ಕದ್ದು;

(ಡಿ) ವಿಶ್ವವಿದ್ಯಾಲಯದಲ್ಲಿ ಎಲ್ಲಾ ಸಂಶೋಧನೆ ಮತ್ತು ವಿಸ್ತರಣಾ ಶಿಕ್ಷಣ ಕಾರ್ಯಕ್ರಮಗಳ ಸಮನ್ವಯ ನಡೆಸತಕ್ಕದ್ದು ಮತ್ತು ಪುನರಾವಲೋಕಿಸತಕ್ಕದ್ದು;

(ಇ) ಮಾಹಿತಿ ಕೇಂದ್ರ ಮತ್ತು ವಿಶ್ವವಿದ್ಯಾಲಯದ ಪ್ರಕಟಣೆ ವಿಭಾಗದ ಚಟುವಟಿಕೆಗಳ ಮೇಲ್ವಿಚಾರಣೆ ಮಾಡತಕ್ಕದ್ದು.

**(2) ಸಂಶೋಧನಾ ನಿರ್ದೇಶಕರು**: 33ನೇ ಪ್ರಕರಣದಲ್ಲಿ ಹೇಳಿದಂತೆ ವಿಶ್ವವಿದ್ಯಾಲಯದಲ್ಲಿ ಸಂಶೋಧನಾ ಕಾರ್ಯಕ್ರಮಗಳ ನಿರ್ದೇಶನ ಮತ್ತು ಸಮನ್ವಯ ಮತ್ತು ಸಂಶೋಧನೆ ಕೇಂದ್ರಗಳ ದಕ್ಷ ಕೆಲಸಗಳಿಗೆ ಜವಾಬ್ದಾರನಾಗಿರತಕ್ಕದ್ದು.

**(3) ವಿಸ್ತರಣಾ ನಿರ್ದೇಶಕರು**: 34ನೇ ಪ್ರಕರಣದಲ್ಲಿ ನಿರ್ದಿಷ್ಟಪಡಿಸಿದಂತೆ ಕೃಷಿ ವಿಸ್ತರಣಾ ಶಿಕ್ಷಣದ ಕಾರ್ಯನಿರ್ವಹಣೆಗೆ ಜವಾಬ್ದಾರರಾಗಿರತಕ್ಕದ್ದು.

(4) **ಡೀನ್:** ಕಾಲೇಜಿನ ಮುಖ್ಯಸ್ಥನಾಗಿರತಕ್ಕದ್ದು ಮತ್ತು ಕಾಲೇಜಿನಲ್ಲಿ ಕಲಿಸುವ, ಸಂಶೋಧನೆಯ ಮತ್ತು ವಿಸ್ತರಣಾ ಚಟುವಟಿಕೆಗಳ ಆಡಳಿತಕ್ಕೆ ಮತ್ತು ಅನುಷ್ಠಾನಕ್ಕೆ ಜವಾಬ್ದಾರನಾಗಿರತಕ್ಕದ್ದು.

**(5) ಸ್ನಾತಕೋತ್ತರ ಅಧ್ಯಯನಗಳ ಡೀನ್:** ಸ್ನಾತಕೋತ್ತರ ಅಧ್ಯಯನಗಳು ಮತ್ತು ಡಿಪ್ಲೊಮೊಗಳನ್ನೊಳಗೊಂಡಂತೆ ಇತರ ಶೈಕ್ಷಣಿಕ ಕಾರ್ಯಕ್ರಮಗಳ ಆಡಳಿತ ಮತ್ತು ಅನುಷ್ಠಾನಕ್ಕೆ ಜವಾಬ್ದಾರರಾಗಿರತಕ್ಕದ್ದು.

**(6) ವಿದ್ಯಾರ್ಥಿ ಕ್ಷೇಮಾಭಿವೃದ್ಧಿ ಡೀನ್:**

(ಎ) ವಿದ್ಯಾರ್ಥಿಗಳ ಸಲಹೆ ನೀಡಿಕೆ ಮತ್ತು ಕೌನ್ಸಿಲಿಂಗ್ ಕಾರ್ಯಕ್ರಮವನ್ನು ಯೋಜಿಸುವುದು ಮತ್ತು ನಿರ್ದೇಶನ ಮಾಡುವುದು ಮತ್ತು ವಿಶ್ವವಿದ್ಯಾಲಯದ ಪದವೀಧರರಿಗೆ ಉದ್ಯೋಗ ದೊರಕಿಸಿಕೊಡಲು ಸಹಾಯ ಮಾಡುವುದಕ್ಕಾಗಿ ಭಾವೀ ಉದ್ಯೋಗದಾತರು ಮತ್ತು ಉದ್ಯೋಗ ಏಜೆನ್ಸಿಗಳ ಸಹಕಾರವನ್ನು ಪಡೆದುಕೊಳ್ಳುವುದು ಮತ್ತು ವಿಶ್ವವಿದ್ಯಾಲಯದ ವಿದ್ಯಾರ್ಥಿಗಳಲ್ಲಿ ಶಿಸ್ತನ್ನು ಪ್ರೋತ್ಸಾಹಿಸತಕ್ಕದ್ದು;

(ಬಿ) ಕ್ರೀಡೆಗಳು, ಸಾಂಸ್ಕೃತಿಕ ಮತ್ತು ಇತರ ಮನರಂಜನಾ ಚಟುವಟಿಕೆಗಳು, ರಾಷ್ಟ್ರೀಯ ಯುವಸೇನಾದಳ (ಎನ್.ಸಿ.ಸಿ.), ಎನ್‌ಎಸ್‌ಎಸ್, ಮಾತುಗಾರಿಕೆ ಕೌಶಲ್ಯ ಸುಧಾರಣೆ ಮುಂತಾದ ವಿದ್ಯಾರ್ಥಿಗಳ ಪಠ್ಯೇತರ ಚಟುವಟಿಕೆಗಳು ಹಾಗೂ ಅದೇ ತರಹದ ಇತರ ಚಟುವಟಿಕೆಗಳನ್ನು ವಿಶ್ವವಿದ್ಯಾಲಯ ಮಟ್ಟದಲ್ಲಿ ಯೋಜಿಸುವುದು ಮತ್ತು ಏರ್ಪಡಿಸುವುದು.

(ಸಿ) ವಿದ್ಯಾರ್ಥಿ ನಿಲಯ, ಕೆಫ್ತೆರಿಯಾ ಹಾಗೂ ಮೇಲ್ವಿಚಾರಣೆ ಮತ್ತು ನಿರ್ವಹಣೆಯಲ್ಲಿ ಕ್ರೀಡೆಗಳನ್ನು ಮತ್ತು ಸಾಂಸ್ಕೃತಿಕ ಕಾರ್ಯಕ್ರಮಗಳನ್ನು ನಡೆಸುವಲ್ಲಿ ಡೀನ್‌ಗಳಿಗೆ ಸಹಾಯ ಮಾಡತಕ್ಕದ್ದು;

(ಡಿ) ವಿಶ್ವವಿದ್ಯಾಲಯದಲ್ಲಿ ವಿದ್ಯಾರ್ಥಿಗಳ ವೈದ್ಯಕೀಯ ಮತ್ತು ಆರೋಗ್ಯ ಸೇವೆಗಳು ಮತ್ತು ಇತರ ಕ್ಷೇಮಾಭಿವೃದ್ಧಿ ಕ್ರಮಗಳ ಮೇಲ್ವಿಚಾರಣೆ ಮಾಡತಕ್ಕದ್ದು ಮತ್ತು ನಿಯಂತ್ರಿಸತಕ್ಕದ್ದು.

**(7) ಕುಲಸಚಿವರು:**

(ಎ) ಇವರು ವಿಶ್ವವಿದ್ಯಾಲಯದ ಪ್ರೊಫೆಸರ್ ದರ್ಜೆಗಿಂತ ಕಡಿಮೆಯಲ್ಲದ ದರ್ಜೆಯ ಕೃಷಿ ವಿಜ್ಞಾನಗಳ ಕ್ಷೇತ್ರದಲ್ಲಿ ಒಬ್ಬ ವಿದ್ವಾಂಸರಾಗಿರತಕ್ಕದ್ದು ಅಥವಾ ಸರ್ಕಾರದ ಉಪ ಕಾರ್ಯದರ್ಶಿಯ ದರ್ಜೆಗಿಂತ ಕಡಿಮೆಯಲ್ಲದ ದರ್ಜೆಯ ರಾಜ್ಯ ಸರ್ಕಾರದ ಒಬ್ಬ ಅಧಿಕಾರಿಯಾಗಿರತಕ್ಕದ್ದು;

(ಬಿ) ವ್ಯವಸ್ಥಾಪನ ಮಂಡಳಿಯ ಸದಸ್ಯ ಕಾರ್ಯದರ್ಶಿಯಾಗಿರತಕ್ಕದ್ದು ಮತ್ತು ಎಲ್ಲಾ ಪರಿಷತ್ತುಗಳ ಖಾಯಂ ಸದಸ್ಯರಾಗಿರತಕ್ಕದ್ದು.

(ಸಿ) ವಿಶ್ವವಿದ್ಯಾಲಯದ ದಾಖಲೆಗಳು ಮತ್ತು ಸಾಮಾನ್ಯ ಮೊಹರಿನ ಕ್ರಮಬದ್ಧ ಅಭಿರಕ್ಷೆಗೆ ಜವಾಬ್ದಾರರಾಗಿರತಕ್ಕದ್ದು;

(ಡಿ) ವಿಶ್ವವಿದ್ಯಾಲಯಕ್ಕೆ ಪ್ರವೇಶದ ಅರ್ಜಿಗಳನ್ನು ಸ್ವೀಕರಿಸತಕ್ಕದ್ದು ಮತ್ತು ಎಲ್ಲಾ ವ್ಯಾಸಂಗ ಕ್ರಮಗಳು, ಪಠ್ಯ ವಿಷಯಗಳು ಮತ್ತು ಅವಶ್ಯವಾಗಬಹುದಾದ ಇತರ ಮಾಹಿತಿಯ ಶಾಶ್ವತ ದಾಖಲೆಯನ್ನು ಇಟ್ಟುಕೊಂಡುಬರತಕ್ಕದ್ದು.

(ಇ) ನಿಯಮಿಸಲಾದಂತೆ ವಿಶ್ವವಿದ್ಯಾಲಯದಲ್ಲಿ ಮಾನವ ಸಂಪನ್ಮೂಲ ಅಭಿವೃದ್ಧಿ ಮತ್ತು ಸಾಮಾನ್ಯ ಆಡಳಿತ ನಡೆಸಲು ಜವಾಬ್ದಾರರಾಗಿರತಕ್ಕದ್ದು.

**(8) ವಿಶ್ವವಿದ್ಯಾಲಯದ ಗ್ರಂಥಪಾಲಕ.–**

ವಿಶ್ವವಿದ್ಯಾಲಯದ ಗ್ರಂಥಾಲಯ ಮಾಹಿತಿ ಪದ್ಧತಿಯ ನಿರ್ವಹಣೆ ಮತ್ತು ವ್ಯವಸ್ಥಾಪನೆಗೆ ಮತ್ತು ವಿಶ್ವವಿದ್ಯಾಲಯದ ಎಲ್ಲಾ ಘಟಕಗಳ ಗ್ರಂಥಾಲಯ ಚಟುವಟಿಕೆಗಳಿಗೆ ಮಾರ್ಗದರ್ಶನ ನೀಡಲು ಮತ್ತು ಸಮನ್ವಯ ನಡೆಸುವುದಕ್ಕೆ ಇವರು ಜವಾಬ್ದಾರರಾಗಿರತಕ್ಕದ್ದು.

ಈ ಅಧಿನಿಯಮದ ಉಪಬಂಧಗಳಿಗೊಳಪಟ್ಟು, 24ನೇ ಪ್ರಕರಣದ (iv) ರಿಂದ (ix)ನೇ ಖಂಡದಲ್ಲಿ ನಿರ್ದಿಷ್ಟಪಡಿಸಲಾದ ವಿಶ್ವವಿದ್ಯಾಲಯದ ಅಧಿಕಾರಿಗಳು, ಕುಲಪತಿಯವರು ಕಾಲಕಾಲಕ್ಕೆ ನಿಯಮಿಸಬಹುದಾದ ಅಥವಾ ಅವರಿಗೆ ವಹಿಸಿಕೊಡಬಹುದಾದಂತಹ ಇತರ ಕರ್ತವ್ಯಗಳನ್ನು ನಿರ್ವಹಿಸತಕ್ಕದ್ದು.

**(9) ಲೆಕ್ಕ ನಿಯಂತ್ರಕರು.–**

(ಎ) ಲೆಕ್ಕ ನಿಯಂತ್ರಕರು, ವಿಶ್ವವಿದ್ಯಾಲಯದ ಒಬ್ಬ ಪೂರ್ಣಕಾಲಿಕ ಅಧಿಕಾರಿಯಾಗಿರತಕ್ಕದ್ದು. ಇವರು, ಕುಲಪತಿಯವರು ವ್ಯವಸ್ಥಾಪನಾ ಮಂಡಳಿಗೆ ಶಿಫಾರಸು ಮಾಡಿದ ಲೆಕ್ಕ ಪರಿಶೋಧನೆ, ಲೆಕ್ಕಪತ್ರ ನಿರ್ವಹಣೆ ಮತ್ತು ಹಣಕಾಸು ಆಡಳಿತದಲ್ಲಿ ಅನುಭವವುಳ್ಳ ರಾಜ್ಯ ಲೆಕ್ಕಪತ್ರ ಇಲಾಖೆಯ ಜಂಟಿ ನಿಯಂತ್ರಕರ ಕೇಡರ್‌ನ ಅಧಿಕಾರಿಗಳು ಅಥವಾ ಲೆಕ್ಕ ಪರಿಶೋಧನೆ ಮತ್ತು ಲೆಕ್ಕಪತ್ರ ಇಲಾಖೆಯ ಉಪಮಹಾಲೇಖಪಾಲರ ದರ್ಜೆಯ ಒಬ್ಬ ಅಧಿಕಾರಿ ಇವರ ಹೆಸರುಗಳುಳ್ಳ ಮೂವರಿಗೆ ಕಡಿಮೆಯಿಲ್ಲದ ಒಂದು ಹೆಸರುಪಟ್ಟಿಯಿಂದ ವ್ಯವಸ್ಥಾಪನಾ ಮಂಡಳಿಯು ಅನುಮೋದಿಸಿದ ಮತ್ತು ಕುಲಪತಿಯವರು ನೇಮಿಸಿದ ಅಧಿಕಾರಿಯಾಗಿರತಕ್ಕದ್ದು. ಹೆಸರು ಪಟ್ಟಿಯಲ್ಲಿರುವ ಯಾರನ್ನೂ ವ್ಯವಸ್ಥಾಪನಾ ಮಂಡಳಿಯು ಮೂವತ್ತು ದಿನಗಳೊಳಗೆ ಅನುಮೋದಿಸದಿದ್ದಲ್ಲಿ, ಕುಲಾಧಿಪತಿಯವರು ಕುಲಪತಿಯವರೊಡನೆ ಸಮಾಲೋಚಿಸಿ, ಲೆಕ್ಕ ನಿಯಂತ್ರಕರಾಗಲು ಸೂಕ್ತ ವ್ಯಕ್ತಿಯೆಂದು ತಾವು ಭಾವಿಸುವಂಥ ಇತರ ವ್ಯಕ್ತಿಯನ್ನು ಲೆಕ್ಕ ನಿಯಂತ್ರಕರನ್ನಾಗಿ ನೇಮಿಸಬಹುದು.

(ಬಿ) ಲೆಕ್ಕ ನಿಯಂತ್ರಕರ ನೇಮಕಾತಿಯ ಅವಧಿಯು ನಾಲ್ಕು ವರ್ಷಗಳಾಗಿರತಕ್ಕದ್ದು.

(ಸಿ) ಲೆಕ್ಕ ನಿಯಂತ್ರಕರು, ಹಣಕಾಸು ಸಮಿತಿಯ ನಿಯಂತ್ರಣಕ್ಕೊಳಪಟ್ಟು, ಶಾಸನಗಳು ಮತ್ತು ವಿನಿಯಮಗಳಲ್ಲಿ ನಿಯಮಿಸಬಹುದಾದ ಅಥವಾ ಕುಲಪತಿಯವರು ಅಥವಾ ಕುಲಸಚಿವರು ಕಾಲದಿಂದ ಕಾಲಕ್ಕೆ ಅಗತ್ಯ ಪಡಿಸಬಹುದಾದಂಥ ಅಧಿಕಾರಗಳನ್ನು ಚಲಾಯಿಸತಕ್ಕದ್ದು ಮತ್ತು ಅಂತಹ ಕರ್ತವ್ಯಗಳನ್ನು ನಿರ್ವಹಿಸತಕ್ಕದ್ದು. ಅವರು ವಿದ್ಯಾವಿಷಯಕ ಪರಿಷತ್ತಿನ ಪದನಿಮಿತ್ತ ಸದಸ್ಯರಾಗಿರತಕ್ಕದ್ದು ಮತ್ತು ಹಣಕಾಸು ಸಮಿತಿಯ ಪದನಿಮಿತ್ತ ಸದಸ್ಯ ಕಾರ್ಯದರ್ಶಿಯಾಗಿರತಕ್ಕದ್ದು.

(10) 24ನೇ ಪ್ರಕರಣದ (iv) ರಿಂದ (x)ನೇ ಖಂಡಗಳಲ್ಲಿ ನಿರ್ದಿಷ್ಟಪಡಿಸಿದ ವಿಶ್ವವಿದ್ಯಾಲಯದ ಅಧಿಕಾರಿಗಳಿಗೆ ಅವರ ಸಂಬಳ, ಭತ್ಯೆಗಳು ಮತ್ತು ಇತರ ಸೇವಾ ಷರತ್ತುಗಳನ್ನು ನಿಯಂತ್ರಿಸುವ ಶಾಸನಗಳು ಅಥವಾ ಇತರ ಆದೇಶಗಳಲ್ಲಿ ಉಪಬಂಧ ಕಲ್ಪಿಸುವಂತಹವುಗಳನ್ನುಳಿದು ವಿಶ್ವವಿದ್ಯಾಲಯದಲ್ಲಿನ ಯಾವುದೇ ಕೆಲಸಕ್ಕೆ ಬೇರೆ ಯಾವುದೇ ಪರಿಶ್ರಮಧನವನ್ನು ನೀಡತಕ್ಕದ್ದಲ್ಲ ಮತ್ತು ಅವರು ಸ್ವೀಕರಿಸತಕ್ಕದ್ದಲ್ಲ.

## ಅಧ್ಯಾಯ - V

## ಶಿಕ್ಷಣ, ಸಂಶೋಧನೆ ಮತ್ತು ವಿಸ್ತರಣಾ ಶಿಕ್ಷಣ

**32. ಶಿಕ್ಷಣ.–** (1) ಈ ಅಧಿನಿಯಮದ ಉಪಬಂಧಗಳಿಗೊಳಪಟ್ಟು, ವಿಶ್ವವಿದ್ಯಾಲಯದಲ್ಲಿ ಶಿಕ್ಷಣವು ನಿಯಮಿಸಲಾದಂತೆ ಕೃಷಿ ಹಾಗೂ ಅದಕ್ಕೆ ಸಂಬಂಧಿಸಿದ ವಿಜ್ಞಾನಗಳ ವಿಷಯದಲ್ಲಿ ಪದವಿಯ, ಸ್ನಾತಕೋತ್ತರ ಪದವಿಯ ಮತ್ತು ಡಾಕ್ಟರಲ್ ಡಿಗ್ರಿ ಕಾರ್ಯಕ್ರಮಗಳು ಮತ್ತು ಅಲ್ಪಾವಧಿ ಡಿಪ್ಲೊಮಾ/ ಸರ್ಟಿಫಿಕೇಟ್ ಕೋರ್ಸುಗಳನ್ನು ಒಳಗೊಂಡಿರತಕ್ಕದ್ದು.

(2) ಈ ಶೈಕ್ಷಣಿಕ ಕಾರ್ಯಕ್ರಮಗಳು ರಾಜ್ಯ ಮತ್ತು ರಾಷ್ಟ್ರೀಯ ಕಾರ್ಯನೀತಿಗಳಿಗೆ ಅನುಗುಣವಾಗಿರತಕ್ಕದ್ದು.

(3) ವಿಶ್ವವಿದ್ಯಾಲಯವು ಇ–ಕಲಿಕೆ, ವಿತರಿತ/ದೂರ ಶಿಕ್ಷಣ, ಮಾಹಿತಿ ಮತ್ತು ಸಂವಹನ ತಂತ್ರಜ್ಞಾನ ಆಧಾರಿತ ಜ್ಞಾನವನ್ನು ಹಂಚಿಕೊಳ್ಳುವುದು ಈ ಸಾಧನಗಳನ್ನು ಬಳಸಿಕೊಳ್ಳತಕ್ಕದ್ದು.

(4) ಸಕ್ಷಮ ಮತ್ತು ಕುಶಲ ಪದವೀಧರರನ್ನು ಮತ್ತು ಸ್ನಾತಕೋತ್ತರ ಪದವೀಧರರನ್ನು ತಯಾರಿಸುವ ಗುರಿಯನ್ನು ಕೃಷಿ ಶಿಕ್ಷಣ ಕಾರ್ಯಕ್ರಮಗಳು ಹೊಂದಿರತಕ್ಕದ್ದು.

**33. ಸಂಶೋಧನೆ.–** (1) ಈ ಅಧಿನಿಯಮ ಮತ್ತು ಶಾಸನಗಳ ಉಪಬಂಧಗಳಿಗೊಳಪಟ್ಟು, ವಿಶ್ವವಿದ್ಯಾಲಯವು ಕೃಷಿ ಮತ್ತು ಸಂಬಂಧಿತ ವಿಜ್ಞಾನಗಳಲ್ಲಿ ಕಾರ್ಯತಂತ್ರದ, ಮೂಲಭೂತ ಮತ್ತು ಆನ್ವಯಿಕ ಸಂಶೋಧನೆಗಳನ್ನು ಮಾಡತಕ್ಕದ್ದು.

(2) ವಿಶ್ವವಿದ್ಯಾಲಯವು ತನ್ನ ಸಂಶೋಧನಾ ಸಂಸ್ಥೆಯ ಮೂಲಕ ತನ್ನ ಅಧಿಕಾರ ಕ್ಷೇತ್ರ ವ್ಯಾಪ್ತಿಯಲ್ಲಿ ನಡೆಯುವ ಕೃಷಿ, ಪಶುಸಂಗೋಪನೆ ಮತ್ತಿತರ ಸಂಬಂಧಪಟ್ಟ ಶಾಖೆಗಳಲ್ಲಿನ ಸಂಶೋಧನಾ ಚಟುವಟಿಕೆಗಳ ಮೇಲೆ ನಿಯಂತ್ರಣವನ್ನು ಹೊಂದಿರುವ ಪ್ರಧಾನ ಏಜೆನ್ಸಿಯಾಗಿರತಕ್ಕದ್ದು.

(3) ವಿಶ್ವವಿದ್ಯಾಲಯವು ತನ್ನ ಅಧಿಕಾರ ಕ್ಷೇತ್ರ ವ್ಯಾಪ್ತಿಯಲ್ಲಿ ಕಾರ್ಯಾಚರಣೆ ಸಂಶೋಧನೆಯೂ ಸೇರಿದಂತೆ ಸಂಶೋಧನೆಗಳನ್ನು ನಡೆಸುವುದಕ್ಕೆ ಬೇರೆ ಬೇರೆ ಕೃಷಿ–ವಾತಾವರಣ ವಲಯಗಳಲ್ಲಿ ಸರ್ಕಾರದ ಸಹಮತಿಯೊಂದಿಗೆ ಪ್ರಾದೇಶಿಕ ವಲಯ ಸಂಶೋಧನಾ ಕೇಂದ್ರಗಳು ಮತ್ತು ಉಪಕೇಂದ್ರಗಳನ್ನು ಸ್ಥಾಪಿಸಬಹುದು.

**34. ವಿಸ್ತರಣಾ ಶಿಕ್ಷಣ.–** (1) ತಾಂತ್ರಿಕ ಮೌಲ್ಯಮಾಪನ ಮತ್ತು ಪರಿಷ್ಕರಣೆಯಾಗುವಂತೆ ನೋಡಿಕೊಳ್ಳಲು ಮತ್ತು ಸಂಶೋಧನೆಗಳಲ್ಲಿ ಕಂಡುಬಂದ ವಿಚಾರಗಳನ್ನು ಆಧರಿಸಿದ ತಂತ್ರಜ್ಞಾನವನ್ನು ತ್ವರಿತ ಕೃಷಿ ಬೆಳವಣಿಗೆಗಾಗಿ ರೈತರು ಮತ್ತು ಇತರರು ಅಳವಡಿಸಿಕೊಳ್ಳುವುದಕ್ಕೆ ಅವಕಾಶಕಲ್ಪಿಸಲು ವಿಸ್ತರಣಾ ಶಿಕ್ಷಣ ಕಾರ್ಯಕ್ರಮಗಳನ್ನು ವಿಶ್ವ ವಿದ್ಯಾಲಯದಲ್ಲಿ ಈ ಅಧಿನಿಯಮ ಮತ್ತು ಶಾಸನಗಳಿಗೊಳಪಟ್ಟು ಸ್ಥಾಪಿಸತಕ್ಕದ್ದು. ಈ ವಿಭಾಗವು ವಿವಿಧ ಹಿತಾಸಕ್ತಿದಾರರ ಅನುಕೂಲಕ್ಕಾಗಿ ಪ್ರಾತ್ಯಕ್ಷಿಕೆಗಳನ್ನು ಮತ್ತು ತರಬೇತಿಯನ್ನು ನಡೆಸತಕ್ಕದ್ದು. ಈ ವಿಸ್ತರಣಾ ಕಾರ್ಯವನ್ನು ವಿಶ್ವವಿದ್ಯಾಲಯದ ವಿವಿಧ ಘಟಕಗಳು ಮತ್ತು ಕೇಂದ್ರ ಹಾಗೂ ರಾಜ್ಯದ ಇತರ ಸಮುಚಿತ ಏಜೆಂಟ್‌ಗಳೊಂದಿಗೆ ಸಮನ್ವಯದಿಂದ ಮಾಡತಕ್ಕದ್ದು.

(2) ರಾಜ್ಯದಲ್ಲಿ ವಿಸ್ತರಣಾ ಕೃಷಿಯ ಮಾದರಿಗಳನ್ನು ಅಭಿವೃದ್ಧಿಪಡಿಸುವುದಕ್ಕೆ ವಿಶ್ವವಿದ್ಯಾಲಯವು ಜವಾಬ್ದಾರಿಯಾಗಿರತಕ್ಕದ್ದು.

**35. ಬೋಧನೆ, ಸಂಶೋಧನೆ ಮತ್ತು ವಿಸ್ತರಣೆಯ ಸಂಯೋಜನೆ.**–(1) ವಿಶ್ವವಿದ್ಯಾಲಯದ ಯುಕ್ತ ಅಧಿಕಾರಿಗಳೊಂದಿಗೆ ಸಮಾಲೋಚಿಸಿ, ವಿಶ್ವವಿದ್ಯಾಲಯದ ಬೋಧನೆ, ಸಂಶೋಧನೆ ಮತ್ತು ವಿಸ್ತರಣಾ ಶಿಕ್ಷಣದ ಚಟುವಟಿಕೆಗಳು ಸಂಪೂರ್ಣವಾಗಿ ಬೆರೆತು ಕೆಲಸಮಾಡುವುದಕ್ಕೆ ಅವಶ್ಯವಾಗಬಹುದಾದ ಕ್ರಮಗಳನ್ನು ತೆಗೆದುಕೊಳ್ಳಲು ಕುಲಪತಿಯವರು ಜವಾಬ್ದಾರರಾಗಿರತಕ್ಕದ್ದು.

(2) ಬೋಧಕರ ಕೇಡರ್‌ನಲ್ಲಿರತಕ್ಕ ಪ್ರತಿಯೊಬ್ಬ ಫ್ಯಾಕಲ್ಟಿ ಸದಸ್ಯರು ಬೋಧನೆಯ ಕಾರ್ಯದ ಜೊತೆಗೆ ತಮ್ಮ ಶೇಕಡ ಮೂವತ್ತರಷ್ಟು ಸಮಯವನ್ನು ಸಂಶೋಧನೆ ಮತ್ತು ವಿಸ್ತರಣೆ ಶಿಕ್ಷಣ ಕೈಗೊಳ್ಳಲು ಮೀಸಲಿಡತಕ್ಕದ್ದು. ಹಾಗೆಯೇ ಸಂಶೋಧನೆ ಮತ್ತು ವಿಸ್ತರಣಾ ಶಿಕ್ಷಣದಲ್ಲಿರತಕ್ಕ ಫ್ಯಾಕಲ್ಟಿ ಸದಸ್ಯರು ಸಂದರ್ಭಾನುಸಾರ ಬೋಧನೆ ಅಥವಾ ವಿಸ್ತರಣೆ ಅಥವಾ ಸಂಶೋಧನೆಯ ಕೆಲಸಕ್ಕೆ ತಮ್ಮ ಶೇಕಡಾ ಮೂವತ್ತರಷ್ಟು ಸಮಯವನ್ನು ವಿನಿಯೋಗಿಸತಕ್ಕದ್ದು.

(3) ಕಾಲೇಜಿನಲ್ಲಿರುವ ಎಲ್ಲಾ ಬೋಧನೆ, ಸಂಶೋಧನೆಯ ಮತ್ತು ವಿಸ್ತರಣಾ ಶಿಕ್ಷಣದ ಸಿಬ್ಬಂದಿಯು ಸಂದರ್ಭಾನುಸಾರ ಕಾಲೇಜಿನ ಡೀನ್‌ರವರ ಆಡಳಿತ ನಿಯಂತ್ರಣ ಅಥವಾ ನಿರ್ದೇಶಕರು (ಸಂಶೋಧನೆ) ಮತ್ತು ನಿರ್ದೇಶಕರು (ವಿಸ್ತರಣೆ) ಇವರ ತಾಂತ್ರಿಕ ನಿಯಂತ್ರಣದಲ್ಲಿರತಕ್ಕದ್ದು.

(4) ವಿಶ್ವವಿದ್ಯಾಲಯವು ರಾಜ್ಯದ ಪ್ರಾದೇಶಿಕ ಅವಶ್ಯಕತೆಗಳನ್ನು ದೃಷ್ಟಿಯಲ್ಲಿಟ್ಟುಕೊಂಡು ತನ್ನ ಸಂಶೋಧನೆ ಮತ್ತು ವಿಸ್ತರಣಾ ಶಿಕ್ಷಣ ಕಾರ್ಯಕ್ರಮಗಳನ್ನು ಅಭಿವೃದ್ಧಿಪಡಿಸತಕ್ಕದ್ದು ಮತ್ತು ರಾಜ್ಯ ಸರ್ಕಾರಕ್ಕೆ ಹಾಗೂ ಇತರ ಹಿತಾಸಕ್ತಿದಾರರಿಗೆ ಸೂಕ್ತವಾದ ತಾಂತ್ರಿಕ ಬ್ಯಾಕ್ ಸ್ಟಾಪಿಂಗ್ ಒದಗಿಸತಕ್ಕದ್ದು.

## ಅಧ್ಯಾಯ - VI

## ನಿಧಿಗಳು ಮತ್ತು ಲೆಕ್ಕಪತ್ರಗಳು

**36. ವಿಶ್ವವಿದ್ಯಾಲಯದ ನಿಧಿಗಳು.**– (1) ವಿಶ್ವವಿದ್ಯಾಲಯವು ಒಂದು ಸಾಮಾನ್ಯ ನಿಧಿಯನ್ನು ಹೊಂದಿರತಕ್ಕದ್ದು ಮತ್ತು ಅದಕ್ಕೆ ಈ ಮುಂದಿನವುಗಳು ಜಮೆಯಾಗತಕ್ಕದ್ದು,–

(ಎ) ಶುಲ್ಕಗಳಿಂದ, ದತ್ತಿಗಳಿಂದ ಮತ್ತು ಯಾವುದಾದರೂ ದಾನಗಳು ಇದ್ದರೆ ಅವುಗಳಿಂದ ಬರುವ ಆದಾಯ, ವಿದ್ಯಾರ್ಥಿ ನಿಲಯ, ಪ್ರಯೋಗ ಕೇಂದ್ರಗಳು ಹಾಗೂ ಫಾರ್ಮುಗಳೂ ಸೇರಿದಂತೆ ವಿಶ್ವವಿದ್ಯಾಲಯದ ಸ್ವತ್ತುಗಳಿಂದ ಬರುವ ಆದಾಯ;

(ಬಿ) ಈ ಅಧಿನಿಯಮದ ಉಪಬಂಧಗಳಿಗೆ ಸುಸಂಗತವಾಗಿರುವಂತಹ ಷರತ್ತುಗಳಿಗೆ ಒಳಪಟ್ಟು ಸರ್ಕಾರವು ನೀಡಿದ ವಂತಿಕೆಗಳು ಅಥವಾ ಅನುದಾನಗಳು;

(ಸಿ) ಇತರ ವಂತಿಕೆಗಳು, ಅನುದಾನಗಳು, ದೇಣಿಗೆಗಳು, ಲಾಭಗಳು, ಸಾಲಗಳು ಮತ್ತು ಇತರ ಸ್ವೀಕೃತಿಗಳು.

(2) ವಿಶ್ವವಿದ್ಯಾಲಯವು ಪ್ರತಿಷ್ಠಾನ ನಿಧಿ ಎಂಬ ಹೆಸರಿನ ನಿಧಿಯನ್ನು ಹೊಂದಿರತಕ್ಕದ್ದು. ಇದಕ್ಕೆ ಕೇಂದ್ರ ಸರ್ಕಾರವು ಅಥವಾ ರಾಜ್ಯ ಸರ್ಕಾರವು ಅಥವಾ ಯಾವುದೇ ಅನುಮೋದಿತ ಏಜೆನ್ಸಿಯು ನೀಡುವ ವಂತಿಕೆಗಳು ಮತ್ತು ಅನುದಾನಗಳು ಹಾಗೂ ಮಂಡಳಿಯು ನಿರ್ದಿಷ್ಟಪಡಿಸಬಹುದಾದಂತಹ ಇತರ ಮೊತ್ತಗಳು ಜಮೆಯಾಗತಕ್ಕದ್ದು. ಮಂಡಳಿಯು ಅವಶ್ಯವಿದ್ದಾಗಲೆಲ್ಲ ಅಂತಹ ಮೊಬಲಗನ್ನು ನಿರ್ದಿಷ್ಟಪಡಿಸಬಹುದಾದಂತೆ ಪ್ರತಿಷ್ಠಾನ ನಿಧಿಯಿಂದ ಸಾಮಾನ್ಯ ನಿಧಿಗೆ ನಿಯಮಿಸಬಹುದಾದ ವಿಧಾನದಲ್ಲಿ ವರ್ಗಾಯಿಸಬಹುದು.

(3) ವಿಶ್ವವಿದ್ಯಾಲಯವು, ಸರ್ಕಾರವು ನೀಡಿದ ಯಾವುದೇ ಅನುದಾನಗಳ ಸಂಬಂಧದಲ್ಲಿ ಲೆಕ್ಕಪತ್ರ ತ:ಖ್ತೆಗಳನ್ನು, ವರದಿಗಳನ್ನು ಮತ್ತು ಇತರ ವಿವರಗಳನ್ನು ಸರ್ಕಾರಕ್ಕೆ ನೀಡತಕ್ಕದ್ದು ಹಾಗೂ ಸರ್ಕಾರವು ನಿರ್ದೇಶಿಸಬಹುದಾದಂತಹ ಅವಧಿಯೊಳಗೆ ಮತ್ತು ವಿಧಾನದಲ್ಲಿ ಯಾವುದೇ ಅನುದಾನದ ಬಳಕೆಗೆ ಸಂಬಂಧಿಸಿದಂತೆ ತ:ಖ್ತೆಗಳು, ಲೆಕ್ಕಪತ್ರಗಳು, ವರದಿಗಳು ಹಾಗೂ ಇತರ ವಿವರಗಳನ್ನು ಸಲ್ಲಿಸತಕ್ಕದ್ದು.

(4) ವಿಶ್ವವಿದ್ಯಾಲಯವು ಸರ್ಕಾರದಿಂದ ಅಥವಾ ಯಾವುದೇ ಇತರ ರಾಜ್ಯ ಸರ್ಕಾರಗಳಿಂದ ಅಥವಾ ಕೇಂದ್ರ ಸರ್ಕಾರದಿಂದ ಅಥವಾ ಶಾಸನಾತ್ಮಕ ನಿಕಾಯಗಳಿಂದ ಅಥವಾ ದತ್ತಿಗಳಿಂದ ಅಥವಾ ದಾನಗಳಿಂದ, ವಿಶ್ವವಿದ್ಯಾಲಯವು ಮತ್ತು ದಾನಿ ಅಥವಾ ಅನುದಾನದಾತರ ನಡುವೆ ಮಾಡಿಕೊಂಡ ಒಪ್ಪಂದಗಳಲ್ಲಿಯ ಷರತ್ತುಗಳಿಗೆ ಒಳಪಟ್ಟು ತನ್ನ ಧ್ಯೇಯೋದ್ದೇಶಗಳ ಸಾಧನೆಗಾಗಿ ಅನುದಾನ ಸ್ವೀಕರಿಸಲು ಸಕ್ಷಮವಾಗಿರತಕ್ಕದ್ದು.

**37. ನಿಧಿಯ ಆಡಳಿತ.**– ವಿಶ್ವವಿದ್ಯಾಲಯದ ಸಾಮಾನ್ಯ ನಿಧಿ, ಪ್ರತಿಷ್ಠಾನ ನಿಧಿ ಮತ್ತು ಇತರ ನಿಧಿಗಳನ್ನು ಶಾಸನಗಳಲ್ಲಿ ಹೇಳಿದ ಉಪಬಂಧಗಳಿಗೆ ಅನುಗುಣವಾಗಿ ನಿರ್ವಹಿಸತಕ್ಕದ್ದು.

**38. ಲೆಕ್ಕಪರಿಶೋಧನೆಗೆ ಆದೇಶಿಸಲು ಸರ್ಕಾರದ ಅಧಿಕಾರ.**– ಸರ್ಕಾರವು, ಯಾವುದೇ ಸಮಯದಲ್ಲಿ ವಿಶ್ವವಿದ್ಯಾಲಯದ ಲೆಕ್ಕಪತ್ರಗಳ ಪರಿಶೋಧನೆಯನ್ನು ತಾನು ನಿರ್ದೇಶಿಸಬಹುದಾದಂತಹ ಲೆಕ್ಕಪರಿಶೋಧಕರಿಂದ ಮಾಡಿಸಬೇಕೆಂದು ಆದೇಶಿಸಲು ಅಧಿಕಾರವನ್ನು ಹೊಂದಿರತಕ್ಕದ್ದು.

**39. ಹಣಕಾಸಿನ ಅಂದಾಜುಗಳು.–** (1) ಕುಲಪತಿಯು ಮುಂಬರುವ ವರ್ಷಕ್ಕಾಗಿ ವಿಶ್ವವಿದ್ಯಾಲಯದ ಹಣಕಾಸಿನ ಅಂದಾಜುಗಳನ್ನು ತಯಾರಿಸುವಂತೆ ಮಾಡತಕ್ಕದ್ದು ಮತ್ತು ಅನುಮೋದನೆಗಾಗಿ ಅದನ್ನು ಮಂಡಳಿಯ ಮುಂದೆ ಮಂಡಿಸತಕ್ಕದ್ದು.

(2) ಮಂಡಳಿಯು, ತಾನು ಸೂಕ್ತವೆಂದು ಭಾವಿಸಬಹುದಾದಂತಹ ಮಾರ್ಪಾಡುಗಳಿಗೆ ಒಳಪಟ್ಟು ಹಣಕಾಸಿನ ಅಂದಾಜುಗಳನ್ನು ಅನುಮೋದಿಸಬಹುದು ಮತ್ತು ಮಂಡಳಿಯು ಅನುಮೋದಿಸಿದ ಹಣಕಾಸಿನ ಅಂದಾಜಿಗೆ ಅನುಸಾರವಾಗಿ ಅಲ್ಲದೆ ಯಾವ ವೆಚ್ಚವನ್ನು ಮಾಡತಕ್ಕದ್ದಲ್ಲ.

**40. ಲೆಕ್ಕಪತ್ರಗಳು ಮತ್ತು ಲೆಕ್ಕಪರಿಶೋಧನೆ.–** (1) ಲೆಕ್ಕಪತ್ರ ನಿರ್ವಹಣೆಯು ಜೋಡಿದಾಖಲಾತಿ ಪದ್ಧತಿಯನ್ನು ಆಧರಿಸಿದ ವಿಶ್ವವಿದ್ಯಾಲಯದ ವಾರ್ಷಿಕ ಲೆಕ್ಕಪತ್ರಗಳನ್ನು ಕುಲಪತಿಯವರ ನಿರ್ದೇಶನದ ಮೇರೆಗೆ ಲೆಕ್ಕ ನಿಯಂತ್ರಕರು ತಯಾರಿಸತಕ್ಕದ್ದು ಮತ್ತು ವಿಶ್ವವಿದ್ಯಾಲಯಕ್ಕೆ ಯಾವುದೇ ಮೂಲಗಳಿಂದ ಪ್ರಾಪ್ತವಾಗುವ ಅಥವಾ ಅದು ಸ್ವೀಕರಿಸುವ ಎಲ್ಲಾ ಮೊಬಲಗುಗಳನ್ನು ಹಾಗೂ ವಿಶ್ವವಿದ್ಯಾಲಯವು ವಿತರಣೆ ಮಾಡುವ ಅಥವಾ ಸಂದಾಯ ಮಾಡುವ ಎಲ್ಲಾ ಮೊಬಲಗುಗಳನ್ನು ಈ ಲೆಕ್ಕಪತ್ರಗಳಲ್ಲಿ ದಾಖಲಿಸತಕ್ಕದ್ದು.

(2) ವಾರ್ಷಿಕ ಲೆಕ್ಕಪತ್ರ ಮತ್ತು ಜಮಾ ಖರ್ಚು ಪಟ್ಟಿಯನ್ನು ಕುಲಪತಿಯವರು ರಾಜ್ಯ ಸರ್ಕಾರಕ್ಕೆ ಸಲ್ಲಿಸತಕ್ಕದ್ದು, ರಾಜ್ಯ ಸರ್ಕಾರವು ಈ ಸಂಬಂಧದಲ್ಲಿ ತಾನು ನೇಮಿಸಬಹುದಾದಂತಹ ವ್ಯಕ್ತಿಗಳು ಲೆಕ್ಕ ಪರಿಶೋಧನೆಯನ್ನು ನಡೆಸುವಂತೆ ಮಾಡತಕ್ಕದ್ದು. ಲೆಕ್ಕಪತ್ರಗಳನ್ನು ಪರಿಶೋಧಿಸಿದ ಮೇಲೆ ಅವುಗಳನ್ನು ಮುದ್ರಿಸತಕ್ಕದ್ದು ಹಾಗೂ ಕುಲಪತಿಯವರು ಅವುಗಳ ಪ್ರತಿಗಳನ್ನು ಲೆಕ್ಕಪರಿಶೋಧನೆಯ ವರದಿಯೊಡನೆ ಮಂಡಲಿಗೆ ಮತ್ತು ಕುಲಾಧಿಪತಿಯವರಿಗೆ ಮಂಡಿಸತಕ್ಕದ್ದು.

(3) ಮಂಡಳಿಯು, ಲೆಕ್ಕಪತ್ರಗಳ ಪ್ರತಿಯನ್ನು ಹಾಗೂ ವರದಿಯನ್ನು ಲೆಕ್ಕಪರಿಶೋಧನೆಯ ವರದಿಯ ಮೇಲೆ ವಿಶ್ವವಿದ್ಯಾಲಯವು ಕೈಗೊಂಡ ಕ್ರಮದ ಬಗ್ಗೆ ಒಂದು ಹೇಳಿಕೆಯೊಡನೆ ರಾಜ್ಯ ಸರ್ಕಾರಕ್ಕೆ ಸಲ್ಲಿಸತಕ್ಕದ್ದು, ಹಾಗೂ ರಾಜ್ಯ ಸರ್ಕಾರವು ಅವನ್ನು ರಾಜ್ಯ ವಿಧಾನಮಂಡಲದ ಉಭಯ ಸದನಗಳ ಮುಂದೆ ಮಂಡಿಸುವಂತೆ ಮಾಡತಕ್ಕದ್ದು.

(4) ವಿಶ್ವವಿದ್ಯಾಲಯವು ಯೋಜನೆಗಳ ಸಂಬಂಧದಲ್ಲಿ ಮತ್ತು ಭಾರತದ ಕೃಷಿ ಸಂಶೋಧನಾ ಪರಿಷತ್ತು, ಭಾರತ ಸರ್ಕಾರ ಮತ್ತು ಇತರ ಯೋಜನೆಗಳು/ಚಾರ್ಟೆಡ್ ಆಕೌಂಟೆಟ್ ಪ್ರಮಾಣ ಪತ್ರ ನೀಡಿದ ಸಂಸ್ಥೆಗಳು ಪ್ರಾಯೋಜಿಸಿದ ಕೃಷಿ ವಿಜ್ಞಾನ ಕೇಂದ್ರಗಳ ಸಂಬಂಧದಲ್ಲಿ ಲೆಕ್ಕಪರಿಶೋಧನೆ ಬಳಕೆ ಪ್ರಮಾಣ ಪತ್ರಗಳನ್ನು ನೀಡುವಂತೆ ಮಾಡತಕ್ಕದ್ದು.

**41. ಭವಿಷ್ಯ ನಿಧಿ, ನಿವೃತ್ತಿ ವೇತನ ಮತ್ತು ವಿಮೆ.–** (1) ಸರ್ಕಾರದ ಪೂರ್ವಾನುಮೋದನೆಯೊಡನೆ ವಿಶ್ವವಿದ್ಯಾಲಯವು ತನ್ನ ಅಧಿಕಾರಿಗಳು, ಪ್ರಾಧ್ಯಾಪಕರು, ಲಿಪಿಕ ಸಿಬ್ಬಂದಿ ಮತ್ತು ಇತರ ನೌಕರರ ಪ್ರಯೋಜನಕ್ಕಾಗಿ ನಿಯಮಿಸಬಹುದಾದಂತಹ ವಿಧಾನಗಳು ಮತ್ತು ಷರತ್ತುಗಳಿಗೆ ಒಳಪಟ್ಟು ತಾನು ಸೂಕ್ತವೆಂದು ಭಾವಿಸಬಹುದಾದಂತಹ ನಿವೃತ್ತಿ ವೇತನ, ಉಪದಾನ, ವಿಮೆ ಅಥವಾ ಭವಿಷ್ಯ ನಿಧಿ, ವಂತಿಗೆ ನಿವೃತ್ತಿ ವೇತನ ನಿಧಿ ಮತ್ತು ಇನ್ನಾವುದೇ ಅಂತಹ ನಿಧಿಗಳನ್ನು ರಚಿಸತಕ್ಕದ್ದು.

(2) ಸರ್ಕಾರವು, ಭವಿಷ್ಯ ನಿಧಿ ಅಧಿನಿಯಮ 1925 (1925ರ ಕೇಂದ್ರ ಅಧಿನಿಯಮ 19) ವಿಶ್ವವಿದ್ಯಾಲಯವು ಹಾಗೆ ರಚಿಸಿದ ಭವಿಷ್ಯ ನಿಧಿ ಅಥವಾ ನಿವೃತ್ತಿ ವೇತನ ನಿಧಿಗಳಿಗೆ ಅವು ಸರ್ಕಾರದ ಭವಿಷ್ಯ ನಿಧಿಗಳು ಆಗಿದ್ದರೆ ಹೇಗೋ ಹಾಗೆ ಅನ್ವಯಿಸತಕ್ಕದ್ದೆಂದು ಘೋಷಿಸಬಹುದು:

ಪರಂತು, ವಿಶ್ವವಿದ್ಯಾಲಯವು ಹಣಕಾಸು ಸಮಿತಿ ಮತ್ತು ಮಂಡಳಿಯೊಡನೆ ಸಮಾಲೋಚಿಸಿ ತಾನು ನಿರ್ಧರಿಸಬಹುದಾದಂತಹ ವಿಧಾನದಲ್ಲಿ ಭವಿಷ್ಯ ನಿಧಿಯ ಮೊಬಲಗನ್ನು ತೊಡಗಿಸಲು ಅಧಿಕಾರವನ್ನು ಹೊಂದಿರತಕ್ಕದ್ದು.

**42. ಸರ್ಕಾರದ ಅನುದಾನಗಳು.–** (1) ರಾಜ್ಯ ಸರ್ಕಾರವು, ಪ್ರತಿ ವರ್ಷವೂ ವಿಶ್ವವಿದ್ಯಾಲಯಕ್ಕೆ ಲುಪ್ತವಾಗದಂತಹ ಇಡಿಗಂಟು ಅನುದಾನವನ್ನು ನೀಡತಕ್ಕದ್ದು, ಎಂದರೆ :–

(i) ವಿಶ್ವವಿದ್ಯಾಲಯದ ಸೂಕ್ತ ಕಾರ್ಯನಿರ್ವಹಣೆಗಾಗಿ ವಿಶ್ವವಿದ್ಯಾಲಯದ ಸಿಬ್ಬಂದಿಯ ವೇತನ, ಭತ್ಯೆಗಳು, ಸಾದಿಲ್ವಾರು, ಇತರ ಸರಬರಾಜು ಮತ್ತು ಸೇವೆಗಳ ಮೇಲಿನ ಅಂದಾಜು ವೆಚ್ಚಕ್ಕಿಂತ ಕಡಿಮೆಯಲ್ಲದ ಒಂದು ಅನುದಾನ;

(ii) ರಾಜ್ಯ ಸರ್ಕಾರವು ವಿಶ್ವವಿದ್ಯಾಲಯದ ಸೂಕ್ತ ಕಾರ್ಯನಿರ್ವಹಣೆಗಾಗಿ ಅವಶ್ಯವೆಂದು ಭಾವಿಸಬಹುದಾದಂತಹ ಹೆಚ್ಚುವರಿ ಬಾಬುಗಳ ಆವರ್ತಕ ಮತ್ತು ಅನಾವರ್ತಕ ವೆಚ್ಚಗಳನ್ನು ಭರಿಸುವುದಕ್ಕೆ ಒಂದು ಅನುದಾನ.

(2) ರಾಜ್ಯ ಸರ್ಕಾರವು, ಪಂಚವಾರ್ಷಿಕ ಯೋಜನೆಯಲ್ಲಿ ಸೇರಿಸಿದ ಮತ್ತು ವಿಶ್ವವಿದ್ಯಾಲಯವು ಜಾರಿಗೊಳಿಸಲೆಂದು ವರ್ಗಾಯಿಸಿದ ಯೋಜನೆಗಳ ಸಂಬಂಧದಲ್ಲಿ ವಿಶ್ವವಿದ್ಯಾಲಯಕ್ಕೆ ಕೇಂದ್ರ ಸರ್ಕಾರ ಮತ್ತು ಅಂತಹ ಯೋಜನೆಗಳನ್ನು ಪ್ರಾಯೋಜಿಸಿದ ಇತರ ಏಜೆನ್ಸಿಗಳಿಂದ ನಿರೀಕ್ಷಿತ ಸಹಾಯವನ್ನು ಕಳೆದ ತರುವಾಯ ವಾರ್ಷಿಕ ಯೋಜನೆಯಲ್ಲಿ ತೋರಿಸಿದ ನಿವ್ವಳ ವೆಚ್ಚದ ಏರ್ಪಾಡಿಗೆ ಸಮನಾದ ಮೊತ್ತದ ಲುಪ್ತವಾಗದಂತಹ ಇಡಿಗಂಟು ಅನುದಾನವನ್ನು ಸಹ ನೀಡತಕ್ಕದ್ದು.

(3) ರಾಜ್ಯ ಸರ್ಕಾರವು ಯಾವುದೇ ಅನುದಾನವನ್ನು ನೀಡುವ ಮೊದಲು ಅದು ಅಗತ್ಯಪಡಿಸಬಹುದಾದಂತಹ ಅಂಕಿಅಂಶಗಳು, ಲೆಕ್ಕಪತ್ರಗಳು, ವರದಿಗಳು ಹಾಗೂ ಇತರ ವಿವರಗಳನ್ನು ರಾಜ್ಯ ಸರ್ಕಾರಕ್ಕೆ ವಿಶ್ವವಿದ್ಯಾಲಯವು ಸಲ್ಲಿಸತಕ್ಕದ್ದು

ಮತ್ತು ವಿಶ್ವವಿದ್ಯಾಲಯವು ರಾಜ್ಯ ಸರ್ಕಾರವು ನಿರ್ದೇಶಿಸಬಹುದಾದಂತಹ ಅವಧಿಯೊಳಗೆ ಹಾಗೂ ಅಂತಹ ವಿಧಾನದಲ್ಲಿ ಕ್ರಮವನ್ನು ತೆಗೆದುಕೊಳ್ಳತಕ್ಕದ್ದು ಮತ್ತು ಯಾವುದೇ ಅನುದಾನವನ್ನು ಬಳಸಿಕೊಂಡಿರುವುದಕ್ಕೆ ಸಂಬಂಧಪಟ್ಟ ಅಂಕಿಅಂಶಗಳು, ಲೆಕ್ಕಪತ್ರಗಳು, ವರದಿಗಳು ಹಾಗೂ ಇತರ ವಿವರಗಳನ್ನು ಒದಗಿಸತಕ್ಕದ್ದು.

(4) ವಿಶ್ವವಿದ್ಯಾಲಯವು ಸರ್ಕಾರದಿಂದ ಅಥವಾ ಯಾವುದೇ ಇತರ ರಾಜ್ಯ ಸರ್ಕಾರಗಳಿಂದ ಅಥವಾ ಕೇಂದ್ರ ಸರ್ಕಾರದಿಂದ ಅಥವಾ ಶಾಸನಾತ್ಮಕ ನಿಕಾಯಗಳಿಂದ ಅಥವಾ ದತ್ತಿಗಳಿಂದ ಅಥವಾ ದಾನಗಳಿಂದ, ವಿಶ್ವವಿದ್ಯಾಲಯವು ಮತ್ತು ದಾನಿ ಅಥವಾ ಅನುದಾನದಾತರ ನಡುವೆ ಮಾಡಿಕೊಂಡ ಒಪ್ಪಂದಗಳಲ್ಲಿಯ ಷರತ್ತುಗಳಿಗೆ ಒಳಪಟ್ಟು ತನ್ನ ಧ್ಯೇಯೋದ್ದೇಶಗಳ ಸಾಧನೆಗಾಗಿ ಅನುದಾನ ಸ್ವೀಕರಿಸಲು ಸಕ್ಷಮವಾಗಿರತಕ್ಕದ್ದು.

**43. ಹಣಕಾಸು ಸಮಿತಿ.–** (1) ಮಂಡಳಿಯು ಈ ಮುಂದಿನ ಸದಸ್ಯರುಗಳನ್ನೊಳಗೊಂಡ ಒಂದು ಹಣಕಾಸು ಸಮಿತಿಯನ್ನು ರಚಿಸತಕ್ಕದ್ದು ಎಂದರೆ :–

(i) ಕುಲಪತಿಯವರು – ಅಧ್ಯಕ್ಷರಾಗಿರತಕ್ಕದ್ದು;

(ii) ಸರ್ಕಾರದ ಪ್ರಧಾನ ಕಾರ್ಯದರ್ಶಿ, ಹಣಕಾಸು ಇಲಾಖೆ ಅಥವಾ ಉಪ ಕಾರ್ಯದರ್ಶಿ ದರ್ಜೆಗಿಂತ ಕಡಿಮೆ ದರ್ಜೆಯವರಲ್ಲದ ಅವರ ನಾಮನಿರ್ದೇಶಿತರು;

(iii) ಸರ್ಕಾರದ ಪ್ರಧಾನ ಕಾರ್ಯದರ್ಶಿ ಅಥವಾ ಕಾರ್ಯದರ್ಶಿ, ಕೃಷಿ ಇಲಾಖೆ ಅಥವಾ ಉಪ ಕಾರ್ಯದರ್ಶಿ ದರ್ಜೆಗಿಂತ ಕಡಿಮೆ ದರ್ಜೆಯವರಲ್ಲದ ಅವರ ನಾಮನಿರ್ದೇಶಿತರು;

(iv) ಕುಲಪತಿಯವರು ನಾಮನಿರ್ದೇಶಿಸಿದ ವ್ಯವಸ್ಥಾಪನಾ ಮಂಡಳಿಯ ಒಬ್ಬ ಸದಸ್ಯರು;

(v) ಕುಲಸಚಿವರು;

(vi) ಲೆಕ್ಕ ನಿಯಂತ್ರಕರು – ಸದಸ್ಯ ಕಾರ್ಯದರ್ಶಿ.

(2) ಹಣಕಾಸು ಸಮಿತಿಯು ಈ ಮುಂದಿನ ಪ್ರಕಾರ್ಯಗಳನ್ನು ಹೊಂದಿರತಕ್ಕದ್ದು, ಎಂದರೆ:–

(i) ವಿಶ್ವವಿದ್ಯಾಲಯದ ವಾರ್ಷಿಕ ಲೆಕ್ಕಪತ್ರಗಳು ಮತ್ತು ಆಯವ್ಯಯ ಅಂದಾಜುಗಳನ್ನು ಪರೀಕ್ಷಿಸುವುದು ಮತ್ತು ಅದರ ಮೇಲೆ ಮಂಡಳಿಗೆ ಸಲಹೆಗಳನ್ನು ನೀಡುವುದು;

(ii) ವಿಶ್ವವಿದ್ಯಾಲಯದ ಹಣಕಾಸಿನ ಪರಿಸ್ಥಿತಿಯನ್ನು ಕಾಲಕಾಲಕ್ಕೆ ಪರಿವೀಕ್ಷಿಸುವುದು;

(iii) ವಿಶ್ವವಿದ್ಯಾಲಯದ ಹಣಕಾಸಿಗೆ ಸಂಬಂಧಿಸಿದ ಎಲ್ಲ ವಿಷಯಗಳ ಮೇಲೆ ಮಂಡಳಿಗೆ ಶಿಫಾರಸ್ಸುಗಳನ್ನು ಮಾಡುವುದು;

(iv) ಮಂಡಳಿಗೆ ಕಟ್ಟುನಿಟ್ಟಾದ ಆರ್ಥಿಕ ಮಿತವ್ಯಯವನ್ನು ಅನುಸರಿಸಲು ಕಠಿಣ ಕ್ರಮಗಳನ್ನು ಅಳವಡಿಸಿಕೊಳ್ಳಲು ಶಿಫಾರಸ್ಸುಗಳನ್ನು ಮಾಡುವುದು ಮತ್ತು ಅನಗತ್ಯ ವೆಚ್ಚಗಳನ್ನು ಕಡಿತಗೊಳಿಸಲು ಸಲಹೆಗಳನ್ನು ನೀಡುವುದು;

(v) ವಿಶ್ವವಿದ್ಯಾಲಯದ ಹಣ ಬಲವನ್ನು ಉತ್ತಮಗೊಳಿಸಲು ಸಂಶೋಧನೆ ಮತ್ತು ಬೋಧನೆಗಳೆರಡರಲ್ಲೂ ವೆಚ್ಚ ವಸೂಲಿ ವಿಧಾನಗಳ ಬಗ್ಗೆ ಮಂಡಳಿಗೆ ಸೂಕ್ತ ಶಿಫಾರಸ್ಸುಗಳನ್ನು ಮಾಡುವುದು.

## ಅಧ್ಯಾಯ - VII

## ಕಾಲೇಜುಗಳ ಸಂಯೋಜನೆ ಮತ್ತು ಸಂಸ್ಥೆಗಳಿಗೆ ಮನ್ನಣೆ

**44. ಕಾಲೇಜುಗಳ ಸಂಯೋಜನೆ.–** (1) ವಿಶ್ವವಿದ್ಯಾಲಯದ ಪ್ರದೇಶದಲ್ಲಿರುವ ಕಾಲೇಜುಗಳನ್ನು ಈ ಪ್ರಕರಣದಲ್ಲಿ ನಿರ್ದಿಷ್ಟಪಡಿಸಿದ ಷರತ್ತುಗಳನ್ನು ಪೂರೈಸಿದ ತರುವಾಯ ರಾಜ್ಯ ಸರ್ಕಾರವು ಮಾಡಿದ ಶಿಫಾರಸ್ಸುಗಳ ಮೇಲೆ ವಿಶ್ವವಿದ್ಯಾಲಯದ ಸಂಯೋಜಿತ ಕಾಲೇಜುಗಳಾಗಿ ವಿಶ್ವವಿದ್ಯಾಲಯಕ್ಕೆ ಸಂಯೋಜಿಸತಕ್ಕದ್ದು.

(2) ಕುಲಸಚಿವರು, ಹೊಸ ಕಾಲೇಜುಗಳ ಸಂಯೋಜನೆಯ ಬಗ್ಗೆ, ಅಸ್ತಿತ್ವದಲ್ಲಿರುವ ಸಂಯೋಜಿತ ಕಾಲೇಜುಗಳಲ್ಲಿ ಹೊಸ ವ್ಯಾಸಂಗ ಕ್ರಮಗಳ ಬಗ್ಗೆ ಸಂಯೋಜಿತ ಕಾಲೇಜುಗಳಲ್ಲಿ ಹೊಸ ವಿಷಯಗಳು ಮತ್ತು ಮಂಜೂರಾದ ಪ್ರವೇಶ ಅವಕಾಶದಲ್ಲಿನ ಬದಲಾವಣೆಯ ಬಗ್ಗೆ ಅರ್ಜಿಗಳನ್ನು ಆಹ್ವಾನಿಸಿ, ಅರ್ಜಿಗಳ ಸ್ವೀಕೃತಿಗೆ ಕೊನೆಯ ದಿನಾಂಕವನ್ನು ನಿಗದಿಪಡಿಸಿ, ಒಂದು ಇಂಗ್ಲಿಷ್ ವೃತ್ತ ಪತ್ರಿಕೆ ಮತ್ತು ಒಂದು ಕನ್ನಡ ವೃತ್ತ ಪತ್ರಿಕೆ ಹೀಗೆ ಕಡೆಯ ಪಕ್ಷ ಎರಡು ಪ್ರಮುಖ ವೃತ್ತ ಪತ್ರಿಕೆಗಳಲ್ಲಿ ಅಧಿಸೂಚಿಸತಕ್ಕದ್ದು. ಈ ಜಾಹಿರಾತು, ವಿಶ್ವವಿದ್ಯಾಲಯವು ಅಗತ್ಯ ಪಡಿಸಬಹುದಾದಂತಹ ಇತರ ವಿವರಗಳನ್ನು ಒಳಗೊಂಡಿರತಕ್ಕದ್ದು ಮತ್ತು ಕಾಲೇಜುಗಳು ಭಾರತದ ಕೃಷಿ ಸಂಶೋಧನಾ ಪರಿಷತ್ತು ಅಥವಾ ಅಂತಹ ಇತರ ಪ್ರಾಧಿಕಾರಗಳ ಅನುಮೋದನೆ ಅಥವಾ

ಮನ್ನಣೆಯನ್ನು ಪಡೆಯಬೇಕೆಂಬುದನ್ನು ಅಗತ್ಯಪಡಿಸಿದಲ್ಲಿ, ಆ ಬಗ್ಗೆ ನಿರ್ದಿಷ್ಟ ಸೂಚನೆ ನೀಡತಕ್ಕದು ಮತ್ತು ಸಂಯೋಜನೆಗಾಗಿ ಸಲ್ಲಿಸಬೇಕಾದ ಶುಲ್ಕದ ಮೊಬಲಗನ್ನು ಸಹ ನಿರ್ದಿಷ್ಟಪಡಿಸತಕ್ಕದ್ದು.

(3) ವಿಶ್ವವಿದ್ಯಾಲಯಕ್ಕೆ ಸಂಯೋಜನೆಗಾಗಿ ಅರ್ಜಿಸಲ್ಲಿಸುವ ಕಾಲೇಜು, ಈ ಮುಂದಿನವುಗಳಿಗೆ ಸಂಬಂಧಪಟ್ಟಂತೆ ಮಾಹಿತಿಯನ್ನು ಒದಗಿಸಿ ಜಾಹಿರಾತಿನಲ್ಲಿ ನಿಗದಿಪಡಿಸಿದ ಕಾಲಮಿತಿಯೊಳಗೆ ಅರ್ಜಿಯನ್ನು ಕುಲಸಚಿವರಿಗೆ ಕಳುಹಿಸತಕ್ಕದ್ದು, ಎಂದರೆ:–

(i) ಆ ಕಾಲೇಜು ಒದಗಿಸಲು ಉದ್ದೇಶಿಸಿದ ಶಿಕ್ಷಣದ ಮಾದರಿಯನ್ನು ನೆರೆಹೊರೆಯಲ್ಲಿರುವ ಇತರ ಕಾಲೇಜುಗಳು ಅದೇ ಮಾದರಿಯ ಶಿಕ್ಷಣಕ್ಕೆ ಮಾಡಿರುವ ಪ್ರಸ್ತುತ ಏರ್ಪಾಟನ್ನು ಮತ್ತು ಕಾಲೇಜನ್ನು ಯಾವ ಸ್ಥಳದಲ್ಲಿ ಸ್ಥಾಪಿಸಬೇಕಾಗಿದೆಯೋ ಆ ಸ್ಥಳದ ಸೂಕ್ತತೆಯನ್ನೂ ಗಮನದಲ್ಲಿಟ್ಟುಕೊಂಡು, ಆ ಕಾಲೇಜು ಸ್ಥಳೀಯ ಅವಶ್ಯಕತೆಯನ್ನು ಪೂರೈಸುತ್ತದೆ;

(ii) ಅದು ಕ್ರಮಬದ್ಧವಾಗಿ ರಚಿಸಲಾದ ಆಡಳಿತ ಮಂಡಳಿಯ ಆಡಳಿತ ನಿರ್ವಹಣೆಗೆ ಒಳಪಟ್ಟಿದೆ;

(iii) ಬೋಧಕ ಸಿಬ್ಬಂದಿಯ ಸಂಖ್ಯೆ ಮತ್ತು ಅರ್ಹತೆಗಳು ಮತ್ತು ಅವರ ಪದಾವಧಿಯನ್ನು ನಿಯಂತ್ರಿಸುವ ಷರತ್ತುಗಳು ಆ ಕಾಲೇಜಿನಲ್ಲಿ ಕೈಗೊಳ್ಳಬೇಕಾದ ಶಿಕ್ಷಣ, ಬೋಧನೆ ಅಥವಾ ತರಬೇತಿಗಳ ವ್ಯಾಸಂಗ ಕ್ರಮಗಳಿಗೆ ತಕ್ಕ ಏರ್ಪಾಟನ್ನು ಮಾಡುವಂಥದ್ದಾಗಿದೆ;

(iv) ಕಾಲೇಜನ್ನು ನಡೆಸುವಂಥ ಕಟ್ಟಡಗಳು ಸೂಕ್ತವಾಗಿವೆ ಮತ್ತು ತಂದೆ ತಾಯಿಗಳ ಅಥವಾ ಪಾಲಕರ ಜೊತೆಯಲ್ಲಿ ವಾಸವಾಗಿರದೆ ಇರುವ ವಿದ್ಯಾರ್ಥಿಗಳಿಗಾಗಿ ಆ ಕಾಲೇಜಿನಲ್ಲಿ ಅಥವಾ ಆ ಕಾಲೇಜು ಅನುಮೋದಿಸಿದ ವಸತಿಗಳಲ್ಲಿ ನಿವಾಸಕ್ಕಾಗಿ ಹಾಗೂ ಮೇಲ್ವಿಚಾರಣೆ ಮತ್ತು ಕ್ಷೇಮಾಭಿವೃದ್ಧಿಗಾಗಿ, ಶಾಸನಗಳು ಮತ್ತು ವಿನಿಯಮಗಳಿಗೆ ಅನುಗುಣವಾಗಿ ಏರ್ಪಾಟು ಮಾಡಲಾಗುವುದು;

(v) ಗ್ರಂಥಾಲಯಕ್ಕಾಗಿ ಸೂಕ್ತ ವ್ಯವಸ್ಥೆ ಮಾಡಲಾಗಿದೆ;

(vi) ಪ್ರಾಯೋಗಿಕ ವಿಜ್ಞಾನದ ಯಾವುದೇ ಶಾಖೆಯಲ್ಲಿ ಸಂಯೋಜನೆಯನ್ನು ಕೋರಿರುವಲ್ಲಿ, ಶಾಸನಗಳು ಮತ್ತು ವಿನಿಯಮಗಳಿಗೆ ಅನುಗುಣವಾಗಿ ಆ ವಿಜ್ಞಾನದ ಶಾಖೆಯಲ್ಲಿ ಶಿಕ್ಷಣ ಕೊಡುವುದಕ್ಕಾಗಿ ಸರಿಯಾದ ರೀತಿಯಲ್ಲಿ ಸಜ್ಜುಗೊಳಿಸಿದ ಪ್ರಯೋಗಶಾಲೆ ಅಥವಾ ವಸ್ತು ಸಂಗ್ರಹಾಲಯ ವ್ಯವಸ್ಥೆಗಳನ್ನು ನಿರ್ದಿಷ್ಟಪಡಿಸಿದ ಅವಧಿಯೊಳಗೆ ಮಾಡಲಾಗಿದೆ ಅಥವಾ ಮಾಡಲಾಗುವುದು;

(vii) ಸನ್ನಿವೇಶಗಳಲ್ಲಿ ಅವಕಾಶವಿರುವಷ್ಟರ ಮಟ್ಟಿಗೆ ಕಾಲೇಜಿನ ಪರಿಮಿತಿಯಲ್ಲಿ ಅಥವಾ ಅದರ ಹತ್ತಿರ ಅಥವಾ ವಿದ್ಯಾರ್ಥಿಗಳ ನಿವಾಸಕ್ಕಾಗಿ ಒದಗಿಸಿರುವ ಸ್ಥಳದಲ್ಲಿ ಪ್ರಾಂಶುಪಾಲರ ಮತ್ತು ಬೋಧಕ ಸಿಬ್ಬಂದಿಯ ಸದಸ್ಯರ ವಸತಿಗಾಗಿ ಸೂಕ್ತ ಏರ್ಪಾಟು ಮಾಡಲಾಗುವುದು;

(viii) ಕಾಲೇಜಿನ ನಿರಂತರ ನಿರ್ವಹಣೆ ಮತ್ತು ದಕ್ಷ ಕಾರ್ಯ ನಿರ್ವಹಣೆಗಾಗಿ ತಕ್ಕ ಏರ್ಪಾಟು ಮಾಡುವಷ್ಟು ಕಾಲೇಜಿನ ಹಣಕಾಸು ಸಂಪನ್ಮೂಲಗಳಿವೆ; ಮತ್ತು

(ix) ವಿದ್ಯಾರ್ಥಿಗಳು ಸಂದಾಯ ಮಾಡಬೇಕಾದ ಫೀಜು ಏನಾದರೂ ಇದ್ದರೆ ಅದನ್ನು ನಿಗದಿಮಾಡುವ ನಿಯಮಗಳನ್ನು ರಚಿಸಲಾಗಿದೆ.

(4) ಹೊಸ ಕಾಲೇಜುಗಳಿಗೆ ಸಂಯೋಜನೆಯ ಅರ್ಜಿಗಳನ್ನು ವ್ಯಕ್ತಿಗಳಿಂದ ಅಂಗೀಕರಿಸತಕ್ಕದ್ದಲ್ಲ ರಾಜ್ಯ ಸರ್ಕಾರದ ನೆರವು ಇಲ್ಲದೆಯೇ ಕಾಲೇಜುಗಳನ್ನು ನಡೆಸಲು ಸಾಧ್ಯವಾಗುವ ಹಣಕಾಸು ಚೈತನ್ಯ ಹೊಂದಿರುವ, ನೋಂದಾಯಿತ ಸಂಘ ಅಥವಾ ನೋಂದಾಯಿತ ಸಾರ್ವಜನಿಕ ಟ್ರಸ್ಟ್‌ಗಳಿಂದ ಮಾತ್ರವೇ ಅಂಗೀಕರಿಸತಕ್ಕದ್ದು.

(5) ಅರ್ಜಿಯ ಜೊತೆಗೆ ಕಾಲೇಜನ್ನು ಸಂಯೋಜಿಸಿದ ನಂತರ ರಾಜ್ಯ ಸರ್ಕಾರ ಮತ್ತು ವಿಶ್ವವಿದ್ಯಾಲಯದ ಪೂರ್ವಾನುಮೋದನೆ ಇಲ್ಲದೆ ವ್ಯವಸ್ಥಾಪನೆಯನ್ನು ವರ್ಗಾವಣೆ ಮಾಡುವುದಿಲ್ಲ ಅಥವಾ ಕಾಲೇಜಿನ ಹೆಸರು ಮತ್ತು ಅಭಿನಾಮವನ್ನು ಬದಲಾವಣೆ ಮಾಡುವುದಿಲ್ಲವೆಂಬ ಒಂದು ಮುಚ್ಚಳಿಕೆಯು ಇರತಕ್ಕದ್ದು.

(6) (2)ನೇ ಉಪಪ್ರಕರಣದ ಅಡಿಯಲ್ಲಿ ಅರ್ಜಿಯನ್ನು ಸ್ವೀಕರಿಸಿದ ತರುವಾಯ, ಅದನ್ನು ಪರಿಶೀಲನೆಗಾಗಿ ಮಂಡಳಿಯ ಮುಂದೆ ಇಡತಕ್ಕದ್ದು. ಮಂಡಳಿಯು ಸಂಯೋಜನೆಯ ಪ್ರತಿಯೊಂದು ಅರ್ಜಿಯನ್ನು ಪರಿಶೀಲಿಸಿದ ತರುವಾಯ ಒಂದು ಸ್ಥಳೀಯ ವಿಚಾರಣಾ ಸಮಿತಿಯಿಂದ ಸ್ಥಳೀಯ ವಿಚಾರಣೆ ಮಾಡಬೇಕೆಂದು ನಿರ್ದೇಶನ ನೀಡತಕ್ಕದ್ದು.

(7) ಸ್ಥಳೀಯ ವಿಚಾರಣಾ ಸಮಿತಿಯು, ಅದನ್ನು ರಚಿಸಿದ ದಿನಾಂಕದಿಂದ ಮೂವತ್ತು ದಿನಗಳೊಳಗಾಗಿ, ಒಂದು ವರದಿಯನ್ನು ವಿದ್ಯಾ ವಿಷಯಕ ಪರಿಷತ್ತಿಗೆ ಸಲ್ಲಿಸತಕ್ಕದ್ದು.

(8) ವಿದ್ಯಾ ವಿಷಯಕ ಪರಿಷತ್ತು, ಸ್ಥಳೀಯ ವಿಚಾರಣಾ ಸಮಿತಿಯ ವರದಿಯನ್ನು ಸ್ವೀಕರಿಸಿದ ತರುವಾಯ ಕೂಡಲೇ ವರದಿಯಲ್ಲಿ ವಿವರಿಸಿದ ಸಮಿತಿಯ ತೀರ್ಮಾನಗಳನ್ನು ಪರಿಗಣಿಸತಕ್ಕದ್ದು ಮತ್ತು ತನಗೆ ಅವಶ್ಯಕವೆಂದು

ಕಂಡುಬರಬಹುದಾದಂಥ ಹೆಚ್ಚಿನ ವಿಚಾರಣೆಯನ್ನು ಮಾಡತಕ್ಕದ್ದು ಮತ್ತು ಅಂಥ ಮನವಿಯ ಮೇಲೆ ತನ್ನ ಅಭಿಪ್ರಾಯವನ್ನು ದಾಖಲು ಮಾಡತಕ್ಕದ್ದು ಮತ್ತು ಅದನ್ನು ಮಂಡಳಿಗೆ ಕಳುಹಿಸತಕ್ಕದ್ದು.

(9) ಮಂಡಳಿಯು, ಸಮಿತಿಯ ವರದಿಯನ್ನು ಮತ್ತು ವಿದ್ಯಾ ವಿಷಯಕ ಪರಿಷತ್ತಿನ ಗೊತ್ತುವಳಿಯನ್ನು ಪರಿಗಣಿಸತಕ್ಕದ್ದು ಹಾಗೂ ತಾನು ಅವಶ್ಯವೆಂದು ಭಾವಿಸಬಹುದಾದಂತಹ ಹೆಚ್ಚಿನ ವಿಚಾರಣೆಯನ್ನು ಮಾಡಿದ ತರುವಾಯ ಮನವಿಯನ್ನು ಪೂರ್ಣವಾಗಿ ಅಥವಾ ಭಾಗಶ: ಮಂಜೂರುಮಾಡಬೇಕೆ ಅಥವಾ ನಿರಾಕರಿಸಬೇಕೆ ಎಂಬ ಪ್ರಶ್ನೆಯ ಬಗ್ಗೆ ತನ್ನ ಅಭಿಪ್ರಾಯವನ್ನು ದಾಖಲಿಸತಕ್ಕದ್ದು.

(10) ಕುಲಸಚಿವರು ಅರ್ಜಿಯನ್ನು ಅದರ ಅಡಕವನ್ನು, ಅನುಬಂಧಗಳನ್ನು ಸ್ಥಳೀಯ ವಿಚಾರಣಾ ಸಮಿತಿಯ ವರದಿ ಮತ್ತು ವಿದ್ಯಾ ವಿಷಯಕ ಪರಿಷತ್ತಿನ ಹಾಗೂ ಮಂಡಳಿಯ ಎಲ್ಲಾ ನಡವಳಿಗಳನ್ನು ಮುಂಬರುವ ವರ್ಷದ ಮಾರ್ಚ್ ಮೂವತ್ತೊಂದಕ್ಕೆ ಮೊದಲು ತೀರ್ಮಾನ ಕೈಗೊಳ್ಳುವುದಕ್ಕಾಗಿ ರಾಜ್ಯ ಸರ್ಕಾರಕ್ಕೆ ಕಳುಹಿಸತಕ್ಕದ್ದು.

(11) ರಾಜ್ಯ ಸರ್ಕಾರವು, ಸ್ಥಳಿಯ ವಿಚಾರಣಾ ಸಮಿತಿಯ, ವಿದ್ಯಾ ವಿಷಯಕ ಪರಿಷತ್ತಿನ ಮತ್ತು ಮಂಡಳಿಯ ಶಿಫಾರಸ್ಸುಗಳ ಹಿನ್ನೆಲೆಯಲ್ಲಿ ಅಂತಹ ಅರ್ಜಿಗಳನ್ನು ಪರಿಗಣಿಸತಕ್ಕದ್ದು ಮತ್ತು ಅವಶ್ಯಕವೆಂದು ಅದಕ್ಕೆ ಕಂಡುಬರುಬಹುದಾದಂತಹ ವಿಚಾರಣೆಯ ತರುವಾಯ ಪ್ರವೇಶಾವಕಾಶದಲ್ಲಿ ವ್ಯತ್ಯಾಸಗಳು ಸೇರಿದಂತೆ, ಸಂಯೋಜಿಸಲು ಅಥವಾ ಸಂಧರ್ಭಾನುಸಾರ ಸಂಯೋಜನೆಯನ್ನು ಅಥವಾ ಅದರ ಯಾವುದೇ ಭಾಗವನ್ನು ನಿರಾಕರಿಸಲು ವಿಶ್ವವಿದ್ಯಾಲಯಕ್ಕೆ ತನ್ನ ಶಿಫಾರಸ್ಸನ್ನು ಮಾಡತಕ್ಕದ್ದು.

(12) ವಿಶ್ವವಿದ್ಯಾಲಯವು ರಾಜ್ಯ ಸರ್ಕಾರದ ನಿರ್ದೇಶನಗಳನ್ನು ಸ್ವೀಕರಿಸಿದ ತರುವಾಯ ಅದರಂತೆ ಔಪಚಾರಿಕ ಆದೇಶಗಳನ್ನು ಹೊರಡಿಸತಕ್ಕದ್ದು.

(13) ಆದಾಗ್ಯೂ, ಸಂಯೋಜನೆಯ ಮಂಜೂರಾತಿಯು ಭಾರತೀಯ ಕೃಷಿ ಸಂಶೋಧನಾ ಪರಿಷತ್ತು ಅಥವಾ ಸಂಬಂಧಪಟ್ಟಂತಹ ಇತರ ಪ್ರಾಧಿಕಾರಗಳು ಅಥವಾ ನಿಕಾಯಗಳ ಪೂರ್ವಾನುಮೋದನೆ ಪಡೆಯುವುದಕ್ಕೆ ಒಳಪಟ್ಟಿರತಕ್ಕದ್ದು ಮತ್ತು ನಿರ್ಧರಿಸಲಾದ ಪ್ರವೇಶಾವಕಾಶದ ಸಂಖ್ಯೆಯು, ಅಂತಹ ಪ್ರಾಧಿಕಾರಗಳು ಅಥವಾ ನಿಕಾಯಗಳು ಆ ಸಂಖ್ಯೆಯನ್ನು ನಿರ್ದಿಷ್ಟಪಡಿಸಿದ್ದರೆ ಅದನ್ನು ಮೀರತಕ್ಕದ್ದಲ್ಲ.

(14) ಸಂಯೋಜನೆಗಾಗಿ ಅಥವಾ ಪ್ರವೇಶಾವಕಾಶದ ಸಂಖ್ಯೆಯನ್ನು ನಿಗದಿಪಡಿಸುವುದಕ್ಕಾಗಿ ಅಥವಾ ಅದರ ಯಾವುದೇ ಭಾಗಕ್ಕಾಗಿ, ಅರ್ಜಿಯನ್ನು ರಾಜ್ಯ ಸರ್ಕಾರದ ಶಿಫಾರಸ್ಸಿನ ಮೇಲೆ ವಿಶ್ವವಿದ್ಯಾಲಯವು ಮಂಜೂರು ಮಾಡಿದ್ದರೆ, ವಿಶ್ವವಿದ್ಯಾಲಯವು, ನಿರ್ದಿಷ್ಟ ಷರತ್ತುಗಳೊಡನೆ ಅಥವಾ ಷರತ್ತುಗಳಿಲ್ಲದೆ ನಿರ್ದಿಷ್ಟ ಪ್ರವೇಶಾವಕಾಶದ ಸಂಖ್ಯೆಯೊಡನೆ ಯಾವ ವ್ಯಾಸಂಗಕ್ರಮಗಳ ಸಂಬಂಧದಲ್ಲಿ ಮತ್ತು ಯಾವ ಅವಧಿಗಾಗಿ, ಕಾಲೇಜನ್ನು ಅಥವಾ ವ್ಯಾಸಂಗ ಕ್ರಮವನ್ನು ಸಂಯೋಜಿಸಲಾಗಿದೆಯೋ, ಆ ವ್ಯಾಸಂಗಕ್ರಮಗಳನ್ನು ಮತ್ತು ಅವಧಿಯನ್ನು ಆದೇಶದಲ್ಲಿ ನಿರ್ದಿಷ್ಟಪಡಿಸತಕ್ಕದ್ದು.

(15) ಅಂತಹ ಅರ್ಜಿಯನ್ನು ಅಥವಾ ಅದರ ಯಾವುದೇ ಭಾಗವನ್ನು ರಾಜ್ಯ ಸರ್ಕಾರವು ಅಥವಾ ವಿಶ್ವವಿದ್ಯಾಲಯವು ನಿರಾಕರಿಸಿದ್ದರೆ, ಹಾಗೆ ನಿರಾಕರಿಸಲು ಕಾರಣಗಳನ್ನು ತಿಳಿಸತಕ್ಕದ್ದು.

(16) (1)ನೇ ಉಪಪ್ರಕರಣದ ಅಡಿಯಲ್ಲಿ ಸಲ್ಲಿಸಿದ ಯಾವುದೇ ಅರ್ಜಿಯನ್ನು (12)ನೇ ಉಪ ಪ್ರಕರಣದ ಅಡಿಯಲ್ಲಿ ಆದೇಶವನ್ನು ಮಾಡುವುದಕ್ಕೆ ಮೊದಲು ಯಾವುದೇ ಸಮಯದಲ್ಲಿ ಅರ್ಜಿದಾರನು ಹಿಂದಕ್ಕೆ ಪಡೆಯಬಹುದು.

(17) ಪ್ರತಿಯೊಂದು ಶೈಕ್ಷಣಿಕ ವರ್ಷಕ್ಕಾಗಿ, ಪ್ರಸಕ್ತ ಇರುವ ವ್ಯಾಸಂಗ ಕ್ರಮಗಳಿಗಾಗಿ ಮತ್ತು ಹೊಸ ವ್ಯಾಸಂಗ ಕ್ರಮಗಳನ್ನು ಹೊರತುಪಡಿಸಿ ಅನುಸರಣಾ ವ್ಯಾಸಂಗ ಕ್ರಮಗಳಿಗೆ ಸಂಯೋಜನೆಯನ್ನು ನವೀಕರಿಸುವುದಕ್ಕಾಗಿ ಅಥವಾ ಮುಂದುವರೆಸುವುದಕ್ಕಾಗಿ ಮಂಜೂರಾತಿಯನ್ನು ಮಂಡಳಿಯು ಹೊಸ ಸಂಯೋಜನೆಯ ಮಂಜೂರಾತಿಗೆ ಅನ್ವಯವಾಗುವ ರೀತಿಯಲ್ಲಿಯೇ, ವಿದ್ಯಾ ವಿಷಯಕ ಪರಿಷತ್ತಿನೊಡನೆ ಸಮಾಲೋಚಿಸಿ ನೀಡಬಹುದು.

(18) ರಾಜ್ಯ ಸರ್ಕಾರವು ಪ್ರತಿಯೊಂದು ವ್ಯಾಸಂಗ ಕ್ರಮದ ಸಂಬಂಧದಲ್ಲಿ ಪ್ರವೇಶಾವಕಾಶವನ್ನು ವಾರ್ಷಿಕ ಆಧಾರದಲ್ಲಿ ನಿರ್ಧರಿಸತಕ್ಕದ್ದು.

**45. ಹೊಸ ಕಾಲೇಜಿನಲ್ಲಿ ವಿದ್ಯಾರ್ಥಿಗಳನ್ನು ಪ್ರವೇಶ ಮಾಡಿಕೊಳ್ಳುವುದಕ್ಕೆ ನಿರ್ಬಂಧ.–** (1) ಯಾವುದೇ ವಿಶ್ವವಿದ್ಯಾಲಯಕ್ಕೆ ಸಂಯೋಜನೆಯನ್ನು ಕೋರುತ್ತಿರುವ ಒಂದು ಹೊಸ ಕಾಲೇಜು ಹೊಸ ವ್ಯಾಸಂಗ ಕ್ರಮಕ್ಕೆ ಸಂಯೋಜನೆಯನ್ನು ಕೋರುತ್ತಿರುವ ಅಥವಾ ನಿರ್ದಿಷ್ಟಪಡಿಸಲಾದಂಥ ಪ್ರವೇಶಾವಕಾಶಕ್ಕಿಂತಲೂ ಹೆಚ್ಚು ಪ್ರವೇಶಾವಕಾಶವನ್ನು ಕೋರುತ್ತಿರುವ ಈಗಾಗಲೇ ಇರುವ ಒಂದು ಕಾಲೇಜು ಸಂದರ್ಭಾನುಸಾರ ಆ ಹೊಸ ಕಾಲೇಜಿಗೆ ಸಂಯೋಜನೆಯನ್ನು ಅಥವಾ ಈಗಾಗಲೇ ಇರುವ ಸಂಯೋಜಿತ ಕಾಲೇಜಿನಲ್ಲಿ ಒಂದು ಹೊಸ ವ್ಯಾಸಂಗ ಕ್ರಮವನ್ನು ಅಥವಾ ಅಂಥ ಒಂದು ವ್ಯಾಸಂಗ ಕ್ರಮದ ಸಂಬಂಧದಲ್ಲಿ ನಿರ್ದಿಷ್ಟಪಡಿಸಿದ ಪ್ರವೇಶಾವಕಾಶವನ್ನು ಬದಲಾಯಿಸಲು ವಿಶ್ವ ವಿದ್ಯಾಲಯವು ಮಂಜೂರಾತಿ ನೀಡಿದ್ದ ಹೊರತು ಅವುಗಳು ಆ ಸಂಬಂಧದಲ್ಲಿ ವಿದ್ಯಾರ್ಥಿಗಳನ್ನು ಪ್ರವೇಶ ಮಾಡಿಸಿಕೊಳ್ಳತಕ್ಕದ್ದಲ್ಲ.

(2) (1)ನೇ ಉಪ ಪ್ರಕರಣದ ಉಪಬಂಧವನ್ನು ಉಲ್ಲಂಘಿಸುವ ಯಾವುದೇ ಸಂಸ್ಥೆಯು ಕರ್ನಾಟಕ ಮಾನ್ಯತೆ ಪಡೆಯದ ಮತ್ತು ಸಂಯೋಜನೆ ಹೊಂದಿರದ ವಿದ್ಯಾ ಸಂಸ್ಥೆಗಳಿಗೆ ಪ್ರವೇಶ ನಿಷೇಧ ಅಧಿನಿಯಮ, 1992ರ (1993ರ ಕರ್ನಾಟಕ ಅಧಿನಿಯಮ 7) ಅಡಿಯಲ್ಲಿ ಕೈಗೊಳ್ಳುವ ಕ್ರಮಕ್ಕೆ ಗುರಿಯಾಗತಕ್ಕದ್ದು.

**46. ಪರೀಕ್ಷೆಗಳಿಗೆ ಹಾಜರಾಗಲು ನಿರ್ಬಂಧ.–** ತನ್ನ ಪ್ರವೇಶವು ಅಮಾನ್ಯವಾಗಿರುವ ಅಥವಾ ವಿಶ್ವವಿದ್ಯಾಲಯದಿಂದ ತನ್ನ ಪ್ರವೇಶವು ಅನುಮೋದಿತವಾಗಿಲ್ಲದ ಅಥವಾ ನಿರ್ದಿಷ್ಟಪಡಿಸಲಾದ ವಿದ್ಯಾರ್ಥಿಗಳ ಸಂಖ್ಯೆಗಿಂತ ಹೆಚ್ಚಿಗೆಯಾಗಿ ಕಾಲೇಜಿಗೆ ಅಥವಾ ವ್ಯಾಸಂಗ ಕ್ರಮಕ್ಕೆ ಪ್ರವೇಶಪಡೆದಿರುವ ಯಾವೊಬ್ಬ ವಿದ್ಯಾರ್ಥಿಯು, ಕಾಲೇಜು ಅಥವಾ ವಿಶ್ವವಿದ್ಯಾಲಯವು ನಡೆಸುವ ಪರೀಕ್ಷೆಗೆ ಹಾಜರಾಗಲು ಅರ್ಹನಾಗಿರತಕ್ಕದ್ದಲ್ಲ.

**47. ಖಾಯಂ ಸಂಯೋಜನೆ.–**(1) ಐದು ವರ್ಷಗಳಿಗೆ ಕಡಿಮೆ ಇಲ್ಲದ ಅವಧಿಗೆ ನಿರಂತರವಾಗಿ ಸಂಯೋಜನೆಗೊಂಡಿರುವ ಮತ್ತು ಕಾಲಕಾಲಕ್ಕೆ ವಿಶ್ವವಿದ್ಯಾಲಯವು ನಿರ್ದಿಷ್ಟಪಡಿಸಿದ ಸಂಯೋಜನೆಯ ಎಲ್ಲಾ ಷರತ್ತುಗಳನ್ನು ಪೂರೈಸಿರುವ ಮತ್ತು ವಿದ್ಯಾ ವಿಷಯದಲ್ಲಿ ಉತ್ಕೃಷ್ಟತೆಯನ್ನು ಸಾಧಿಸಿದ ಹಾಗೂ ಆಡಳಿತಾತ್ಮಕ ಗುಣಮಟ್ಟಗಳನ್ನು ಹೊಂದಿರುವ ಕಾಲೇಜು ಖಾಯಂ ಸಂಯೋಜನೆಯ ಮಂಜೂರಾತಿಗೆ ಅರ್ಹವಾಗಿರತಕ್ಕದ್ದು.

(2) 45ನೇ ಪ್ರಕರಣದ ಉಪಬಂಧಗಳು, ಯಥೋಚಿತ ವ್ಯತ್ಯಾಸಗಳೊಂದಿಗೆ ಖಾಯಂ ಸಂಯೋಜನೆಯ ಮಂಜೂರಾತಿಗೆ ಅನ್ವಯವಾಗತಕ್ಕದ್ದು.

(3) ಖಾಯಂ ಆಗಿ ವಿಶ್ವವಿದ್ಯಾಲಯಕ್ಕೆ ಸಂಯೋಜನೆಗೊಂಡ ಕಾಲೇಜಿನ, ಆಡಳಿತಾತ್ಮಕ ಮತ್ತು ಶೈಕ್ಷಣಿಕ ಕಾರ್ಯ ವೈಖರಿಯನ್ನು ಐದು ವರ್ಷಗಳ ಅವಧಿಯಲ್ಲಿ ಕೊನೆಪಕ್ಷ ಒಂದು ಸಲದಂತೆ ಆಗಾಗ್ಗೆ, ವಿಶ್ವವಿದ್ಯಾಲಯ ಮತ್ತು ರಾಜ್ಯ ಸರ್ಕಾರಗಳು ಪರಿಶೀಲನೆ ಮಾಡತಕ್ಕದ್ದು.

(4) ಪೂರ್ವೋಕ್ತ ಉಪ ಪ್ರಕರಣಗಳಲ್ಲಿ ಏನೇ ಇದ್ದರೂ, ಖಾಯಂ ಆಗಿ ಸಂಯೋಜನೆಗೊಂಡ ಕಾಲೇಜು, (1)ನೇ ಉಪ ಪ್ರಕರಣದಲ್ಲಿ ನಿರ್ದಿಷ್ಟಪಡಿಸಿದ ಯಾವುದೇ ಷರತ್ತುಗಳನ್ನು ಪೂರೈಸಲು ವಿಫಲವಾಗಿದ್ದಲ್ಲಿ, ಅದರ ಖಾಯಂ ಸಂಯೋಜನೆಯನ್ನು ರದ್ದುಪಡಿಸತಕ್ಕದ್ದು:

ಪರಂತು, ಸಂಬಂಧಪಟ್ಟ ಕಾಲೇಜಿಗೆ ತನ್ನ ಅಹವಾಲನ್ನು ಹೇಳಿಕೊಳ್ಳಲು ವಿಶ್ವವಿದ್ಯಾಲಯವು ಒಂದು ಅವಕಾಶಕೊಟ್ಟ ಹೊರತು ಖಾಯಂ ಸಂಯೋಜನೆಯನ್ನು ರದ್ದುಗೊಳಿಸತಕ್ಕದ್ದಲ್ಲ:

ಮತ್ತು ಪರಂತು, ಖಾಯಂ ಸಂಯೋಜನೆಯನ್ನು ರದ್ದುಗೊಳಿಸಿದ ತರುವಾಯ ಸಂಬಂಧಪಟ್ಟ ಕಾಲೇಜು, ಸಂಯೋಜನೆಯನ್ನು ವಾರ್ಷಿಕ ಆಧಾರದ ಮೇಲೆ ತಾತ್ಕಾಲಿಕವಾಗಿ ಮುಂದುವರೆಸಲು ಕೋರತಕ್ಕದ್ದು.

**48. ಸಂಯೋಜನೆಯನ್ನು ಹಿಂತೆಗೆದುಕೊಳ್ಳುವುದು.–** (1) ಸಂಯೋಜನೆಗೊಂಡ ಕಾಲೇಜು ಈ ಅಧಿನಿಯಮದ ಯಾವುದೇ ಉಪಬಂಧವನ್ನು ಪಾಲಿಸಲು ವಿಫಲವಾದರೆ ಅಥವಾ ಸಂಯೋಜನೆಯ ಯಾವುದೇ ಷರತ್ತುಗಳನ್ನು ಪಾಲಿಸಲು ವಿಫಲವಾದರೆ ಅಥವಾ ಕಾಲೇಜನ್ನು ಶಿಕ್ಷಣದ ಹಿತಾಸಕ್ತಿಗಳಿಗೆ ದಕ್ಕೆ ಉಂಟು ಮಾಡುವ ರೀತಿಯಲ್ಲಿ ನಡೆಸಿಕೊಂಡು ಬರುತ್ತಿದ್ದರೆ, ಸಂಯೋಜನೆಯ ಮೂಲಕ ಕಾಲೇಜಿಗೆ ತಾತ್ಕಾಲಿಕವಾಗಿ ಅಥವಾ ಶಾಶ್ವತವಾಗಿ ಪ್ರದತ್ತವಾದ ಹಕ್ಕುಗಳನ್ನು ಪೂರ್ಣವಾಗಿ ಅಥವಾ ಭಾಗಶ: ಹಿಂತೆಗೆದುಕೊಳ್ಳಬಹುದು ಅಥವಾ ಮಾರ್ಪಾಡು ಮಾಡಬಹುದು.

(2) ಅಂತಹ ಹಕ್ಕುಗಳನ್ನು ಹಿಂತೆಗೆದುಕೊಳ್ಳುವುದಕ್ಕೆ ಅಥವಾ ಮಾರ್ಪಾಟುಮಾಡುವುದಕ್ಕೆ ಸೂಚನೆಯನ್ನು ಮಂಡಳಿಯ ಸಭೆಯಲ್ಲಿ ಮಾತ್ರ ಮಂಡಿಸತಕ್ಕದ್ದು. ಮಂಡಳಿಯ ಪದನಿಮಿತ್ತ ಸದಸ್ಯನೂ ಒಳಗೊಂಡಂತೆ ಅಂತಹ ಸೂಚನೆಯನ್ನು ಮಂಡಿಸಲು ಉದ್ದೇಶಿಸುವ ಯಾವೊಬ್ಬ ಸದಸ್ಯನು ಯಾವ ಕಾರಣದ ಮೇಲೆ ಅಂತಹ ಸೂಚನೆಯನ್ನು ಮಂಡಿಸಲಾಗಿದೆಯೋ ಆ ಕಾರಣಗಳನ್ನು ಲಿಖಿತದಲ್ಲಿ ನಿರೂಪಿಸಿ ಅಂಥ ಒಂದು ನೋಟೀಸನ್ನು ನೀಡತಕ್ಕದ್ದು.

(3) ಸದರಿ ಸೂಚನೆಯನ್ನು ಪರಿಗಣನೆಗೆ ತೆಗೆದುಕೊಳ್ಳುವುದಕ್ಕೆ ಮೊದಲು ಮಂಡಳಿಯು, ನೋಟೀಸಿನ ಒಂದು ಪ್ರತಿಯನ್ನು, ತನ್ನ ತಿಳುವಳಿಕೆ ಪತ್ರದಲ್ಲಿ ನಿರ್ದಿಷ್ಟಪಡಿಸಿದ ಅವಧಿಯೊಳಗೆ ಆ ಕಾಲೇಜು ಸದರಿ ಸೂಚನೆಯ ಬಗ್ಗೆ ತನ್ನ ಯಾವುದೇ ಮನವಿಯನ್ನು ಬರೆದು ಸಲ್ಲಿಸತಕ್ಕದೆಂದು ಮತ್ತು ಅದನ್ನು ಮಂಡಳಿಯು ಪರ್ಯಾಲೋಚಿಸುವುದೆಂದು ನಿರ್ದಿಷ್ಟವಾಗಿ ತಿಳಿಸಿದ ಪತ್ರದೊಂದಿಗೆ ಸಂಬಂಧಪಟ್ಟ ಕಾಲೇಜಿನ ಪ್ರಾಂಶುಪಾಲರಿಗೆ ಕಳುಹಿಸತಕ್ಕದ್ದು.

(4) (3)ನೇ ಉಪ ಪ್ರಕರಣದಲ್ಲಿ ಹಾಗೆ ನಿರ್ದಿಷ್ಟಪಡಿಸಿದ ಅವಧಿಯನ್ನು ಅವಶ್ಯವಿದ್ದಲ್ಲಿ, ಮಂಡಳಿಯು ಸಮಂಜಸ ಸಮಯದವರೆಗೆ ವಿಸ್ತರಿಸಬಹುದು.

(5) ಮನವಿಯನ್ನು ಸ್ವೀಕರಿಸಿದ ಮೇಲೆ ಅಥವಾ ಹಿಂದಿನ ಉಪ ಪ್ರಕರಣದಲ್ಲಿ ಉಲ್ಲೇಖಿಸಲಾದ ಅವಧಿಯು ಮುಗಿದ ಮೇಲೆ, ಮಂಡಳಿಯು ಸೂಚನೆಯ ನೋಟೀಸನ್ನು, ಅದರಲ್ಲಿ ತಿಳಿಸಿದ ಕಾರಣಗಳನ್ನು ಮತ್ತು ಅದರ ಮೇಲೆ ಸಲ್ಲಿಸಿದ ಮನವಿಯನ್ನು ಪರ್ಯಾಲೋಚಿಸಿದ ತರುವಾಯ ಮತ್ತು ಈ ಸಂಬಂಧದಲ್ಲಿ ತಾನು ರಚಿಸಿದ ಮತ್ತು ಪ್ರಾಧಿಕಾರ ನೀಡಿದ ಒಂದು ಸಮಿತಿಯು ತನಗೆ ಅವಶ್ಯವೆಂದು ಕಂಡು ಬರಬಹುದಾದಂತಹ ಪರಿಶೀಲನೆಯನ್ನು ನಡೆಸಿದ ತರುವಾಯ ಮತ್ತು ಅಂತಹ

ಹೆಚ್ಚಿನ ವಿಚಾರಣೆಯನ್ನು ನಡೆಸಿದ ತರುವಾಯ, ಒಂದು ನಿರ್ಣಯವನ್ನು ಅದಕ್ಕೆ ಕಾರಣಗಳನ್ನು ದಾಖಲಿಸಿ ಅಂಗೀಕರಿಸತಕ್ಕದ್ದು ಮತ್ತು ಅದನ್ನು ವಿದ್ಯಾವಿಷಯಕ ಪರಿಷತ್ತಿಗೆ ಕಳುಹಿಸಿಕೊಡತಕ್ಕದ್ದು.

(6) (5)ನೇ ಉಪ ಪ್ರಕರಣದ ಅಡಿಯಲ್ಲಿನ ಒಂದು ವರದಿಯನ್ನು ಸ್ವೀಕರಿಸಿದ ಮೇಲೆ, ವಿದ್ಯಾ ವಿಷಯಕ ಪರಿಷತ್ತು ಅದಕ್ಕೆ ಅವಶ್ಯವೆಂದು ಕಂಡುಬರಬಹುದಾದಂತಹ ಹೆಚ್ಚಿನ ವಿಚಾರಣೆ ಯಾವುದಾದರೂ ಇದ್ದರೆ ಅದನ್ನು ಮಾಡಿದ ತರವಾಯ, ಆ ವಿಷಯದಲ್ಲಿ ತನ್ನ ಅಭಿಪ್ರಾಯವನ್ನು ದಾಖಲಿಸತಕ್ಕದ್ದು ಮತ್ತು ಅದನ್ನು ಮಂಡಳಿಗೆ ವಾಪಸ್ಸು ಕಳುಹಿಸಿಕೊಡತಕ್ಕದ್ದು.

(7) ಮಂಡಳಿಯು, ವಿದ್ಯಾ ವಿಷಯಕ ಪರಿಷತ್ತಿನ ನಿರ್ಣಯವನ್ನು ಪರ್ಯಾಲೋಚಿಸಿದ ತರುವಾಯ ಸಂಯೋಜನೆಯನ್ನು ಹಿಂತೆಗೆದುಕೊಳ್ಳಬೇಕೆಂದು ಶಿಫಾರಸ್ಸು ಮಾಡಿದ ಅಂತಿಮ ನಿರ್ಣಯವನ್ನು ಅಂಗೀಕರಿಸತಕ್ಕದ್ದು. ಅಂತಹ ನಿರ್ಣಯಕ್ಕೆ ಮಂಡಳಿಯ ಸಭೆಯಲ್ಲಿ ಹಾಜರಿದ್ದ ಸದಸ್ಯರ ಮೂರನೇ ಎರಡರಷ್ಟು ಸದಸ್ಯರ ಬೆಂಬಲ ದೊರೆತ ಹೊರತು ನಿರ್ಣಯವು ಮಂಡಳಿಯಿಂದ ಅಂಗೀಕೃತವಾಗಿರುವುದಾಗಿ ಭಾವಿಸತಕ್ಕದ್ದಲ್ಲ.

(8) ಕುಲಸಚಿವರು ಪ್ರಸ್ತಾವವನ್ನು, ಸೂಚನೆಯ ನೋಟೀಸು, ಕಾಲೇಜಿನ ಉತ್ತರ, ಮಂಡಳಿಯ ಮತ್ತು ವಿದ್ಯಾ ವಿಷಯಕ ಪರಿಷತ್ತಿನ ನಿರ್ಣಯವೂ ಒಳಗೊಂಡಂತೆ ಎಲ್ಲಾ ದಸ್ತಾವೇಜುಗಳ ಸಮೇತ ತೀರ್ಮಾನ ಕೈಗೊಳ್ಳುವುದಕ್ಕಾಗಿ ರಾಜ್ಯ ಸರ್ಕಾರಕ್ಕೆ ಒಪ್ಪಿಸತಕ್ಕದ್ದು.

(9) ರಾಜ್ಯ ಸರ್ಕಾರವು ತನಗೆ ಅವಶ್ಯವೆಂದು ಕಂಡುಬರಬಹುದಾದಂತಹ ಹೆಚ್ಚಿನ ವಿಚಾರಣೆಯನ್ನು ನಡೆಸಿದ ತರವಾಯ, ಒಂದು ನಿರ್ದಿಷ್ಟ ಶೈಕ್ಷಣಿಕ ವರ್ಷದಿಂದ ಅನ್ವಯವಾಗುವಂತೆ, ಸಂಯೋಜನೆಯನ್ನು ಪೂರ್ತಿಯಾಗಿ ಅಥವಾ ಭಾಗಶ: ಹಿಂತೆಗೆದುಕೊಳ್ಳುವಂತೆ ಅಥವಾ ಮಾರ್ಪಾಟು ಮಾಡುವಂತೆ ಅಥವಾ ಪ್ರಸ್ತಾವವನ್ನು ತಿರಸ್ಕರಿಸುವಂತೆ ವಿಶ್ವವಿದ್ಯಾಲಯಕ್ಕೆ ನಿರ್ದೇಶಿಸಬಹುದು.

(10) ವಿಶ್ವವಿದ್ಯಾಲಯವು ಅಂತಹ ನಿರ್ದೇಶನವನ್ನು ಸ್ವೀಕರಿಸಿದ ಮೇಲೆ, ಅಂತಹ ನಿರ್ದೇಶನಕ್ಕೆ ಅನುಸಾರವಾಗಿ ಔಪಚಾರಿಕ ಆದೇಶವನ್ನು ಹೊರಡಿಸತಕ್ಕದ್ದು.

(11) ಸಂಯೋಜನೆಯನ್ನು ಪೂರ್ಣವಾಗಿ ಅಥವಾ ಭಾಗಶ: ಹಿಂತೆಗೆದುಕೊಂಡ ಕಾಲೇಜಿನ ವಿದ್ಯಾರ್ಥಿಗಳಿಗೆ, ನಿರ್ದಿಷ್ಟ ವ್ಯಾಸಂಗ ಕ್ರಮದ ಸಂಬಂಧದಲ್ಲಿ ಹಾಗೆ ಸ್ಥಳಾವಕಾಶ ಕಲ್ಪಿಸಬೇಕಾದಂತಹ ವಿದ್ಯಾರ್ಥಿಗಳ ಸಂಖ್ಯೆಯಷ್ಟರ ಮಟ್ಟಿಗೆ ಪ್ರವೇಶ ಸಂಖ್ಯೆಯನ್ನು ಹೆಚ್ಚಿಸುವ ಮೂಲಕ, ವಿಶ್ವವಿದ್ಯಾಲಯವು, ಹತ್ತಿರದಲ್ಲಿರುವ ಕಾಲೇಜಿನಲ್ಲಿ ಅಂತಹ ವಿದ್ಯಾರ್ಥಿಗಳಿಗೆ ಸ್ಥಳಾವಕಾಶವನ್ನು ಕಲ್ಪಿಸುವ ವ್ಯವಸ್ಥೆ ಮಾಡತಕ್ಕದ್ದು. ಅಂತಹ ವಿದ್ಯಾರ್ಥಿಗಳಿಗೆ ಸಂಬಂಧಪಟ್ಟ ಎಲ್ಲ ದಾಖಲೆಗಳನ್ನು ಸಂಯೋಜನೆಯನ್ನು ಹಿಂತೆಗೆದುಕೊಂಡ ಕಾಲೇಜಿನಿಂದ ವಿಶ್ವವಿದ್ಯಾಲಯವು ಅವರನ್ನು ವರ್ಗಾಯಿಸಿದ ಕಾಲೇಜಿಗೆ ವರ್ಗಾಯಿಸತಕ್ಕದ್ದು.

**49. ಕಾಲೇಜು ಅಥವಾ ವ್ಯಾಸಂಗ ಕ್ರಮವನ್ನು ಸ್ವಯಂ ಮುಚ್ಚುವಿಕೆ.–** (1) ತನ್ನ ಅಸಾಮರ್ಥ್ಯದ ಅಥವಾ ಹಣಕಾಸು ದೃಷ್ಟಿಯಿಂದ ಉರ್ಜಿತವಾಗದ ಕಾರಣದಿಂದ ಅಥವಾ ಆಡಳಿತ ವ್ಯವಸ್ಥೆಯ ಕುಸಿತದ ಕಾರಣದಿಂದ ಕಾಲೇಜನ್ನು ಅಥವಾ ವ್ಯಾಸಂಗ ಕ್ರಮವನ್ನು ಮುಚ್ಚಲು ಉದ್ದೇಶಿಸಿರುವಂತಹ ಯಾವುದೇ ಕಾಲೇಜಿನ ಆಡಳಿತ ಮಂಡಳಿಯು ವಿಶ್ವವಿದ್ಯಾಲಯಕ್ಕೆ ಮತ್ತು ರಾಜ್ಯ ಸರ್ಕಾರಕ್ಕೆ, ಕಾಲೇಜನ್ನು ಮುಚ್ಚುವುದಕ್ಕೆ ಮೊದಲು ಮೂರು ತಿಂಗಳುಗಳಿಗಿಂತ ಕಡಿಮೆ ಇಲ್ಲದಂತೆ, ಆ ಬಗ್ಗೆ ಕಾರಣಗಳನ್ನು ತಿಳಿಸಿ, ನೋಟೀಸನ್ನು ನೀಡತಕ್ಕದ್ದು.

(2) ಕಾಲೇಜಿನ ಅಥವಾ ವ್ಯಾಸಂಗ ಕ್ರಮದ ಮುಚ್ಚುವಿಕೆಯ ಅರ್ಜಿಯನ್ನು ವಿದ್ಯಾವಿಷಯಕ ಪರಿಷತ್ತು ಮತ್ತು ಮಂಡಳಿಗಳು ಪರಿಗಣಿಸತಕ್ಕದ್ದು ಮತ್ತು ಅವು ಅದರ ಮೇಲೆ ಸೂಕ್ತ ಗೊತ್ತುವಳಿಗಳನ್ನು ಅಂಗೀಕರಿಸತಕ್ಕದ್ದು.

(3) ಕುಲಸಚಿವರು, ಅರ್ಜಿಯನ್ನು ಮತ್ತು ವಿದ್ಯಾವಿಷಯಕ ಪರಿಷತ್ತಿನ ಮತ್ತು ಮಂಡಳಿಯ ಗೊತ್ತುವಳಿಗಳನ್ನು ರಾಜ್ಯ ಸರ್ಕಾರಕ್ಕೆ ಕಳುಹಿಸತಕ್ಕದ್ದು, ಅದು ಅವುಗಳನ್ನು ಪರಿಗಣಿಸಿದ ತರುವಾಯ ಮುಚ್ಚುವ ಬಗ್ಗೆ ಅನುಮತಿ ನೀಡಬೇಕೆಂದು ಅಥವಾ ಮುಚ್ಚುವಿಕೆಗೆ ಅನುಮತಿ ನಿರಾಕರಿಸಬೇಕೆಂದು ವಿಶ್ವವಿದ್ಯಾಲಯಕ್ಕೆ ನಿರ್ದೇಶನ ನೀಡತಕ್ಕದ್ದು ಮತ್ತು ವಿಶ್ವವಿದ್ಯಾಲಯವು ಅಂಥ ನಿರ್ದೇಶನಗಳನ್ನು ಸ್ವೀಕರಿಸಿದ ತರುವಾಯ ಅದಕ್ಕನುಸಾರ ಆದೇಶಗಳನ್ನು ಹೊರಡಿಸತಕ್ಕದ್ದು.

(4) ಆಡಳಿತ ಮಂಡಳಿಯು, ಶೈಕ್ಷಣಿಕ ವರ್ಷದ ಚಾಲ್ತಿ ಅವಧಿಯಲ್ಲಿ ಮತ್ತು ವಿಶ್ವವಿದ್ಯಾಲಯವು ಸಂಬಂಧಪಟ್ಟ ವ್ಯಾಸಂಗಕ್ರಮದ ವಾರ್ಷಿಕ ಪರೀಕ್ಷೆಗಳನ್ನು ನಡೆಸುವವರೆಗೆ ಮತ್ತು ವಿಶ್ವವಿದ್ಯಾಲಯವು ಮುಚ್ಚಬಹುದೆಂದು ಒಂದು ಔಪಚಾರಿಕ ಆದೇಶವನ್ನು ಹೊರಡಿಸುವವರೆಗೆ ಕಾಲೇಜನ್ನು ಅಥವಾ ವ್ಯಾಸಂಗ ಕ್ರಮವನ್ನು ಮುಚ್ಚತಕ್ಕದ್ದಲ್ಲ.

(5) ಹಾಗೆ ಮುಚ್ಚಲಾದ ಕಾಲೇಜುಗಳ ವಿದ್ಯಾರ್ಥಿಗಳಿಗೆ ಅವರ ವರ್ಗಾವಣೆಯ ನಂತರ, ವಿಶ್ವವಿದ್ಯಾಲಯವು, ಹತ್ತಿರವಿರುವ ಕಾಲೇಜಿನಲ್ಲಿ ಸಂಬಂಧಪಟ್ಟ ವ್ಯಾಸಂಗಕ್ರಮದಲ್ಲಿ ಪ್ರವೇಶ ಸಂಖ್ಯೆಯನ್ನು ಅಂಥ ವಿದ್ಯಾರ್ಥಿಗಳಿಗೆ ಪ್ರವೇಶಾವಕಾಶ ನೀಡುವಷ್ಟರಮಟ್ಟಿಗೆ ಹೆಚ್ಚಿಸಿ ಪ್ರವೇಶವನ್ನು ನೀಡತಕ್ಕದ್ದು ಮತ್ತು ಅಂಥ ವಿದ್ಯಾರ್ಥಿಗಳಿಗೆ ಸಂಬಂಧಪಟ್ಟ ಎಲ್ಲ ದಾಖಲೆಗಳನ್ನು ಹಾಗೆ ಮುಚ್ಚಲ್ಪಟ್ಟ ಕಾಲೇಜಿನಿಂದ, ಯಾವ ಕಾಲೇಜಿನಲ್ಲಿ ಅಂಥ ವಿದ್ಯಾರ್ಥಿಗಳು ಪ್ರವೇಶವನ್ನು ಪಡೆದಿರುವರೋ ಅಲ್ಲಿಗೆ ವರ್ಗಾಯಿಸತಕ್ಕದ್ದು.

(6) (1)ನೇ ಉಪಪ್ರಕರಣದ ಅಡಿಯಲ್ಲಿ ನೋಟೀಸಿನ ಅವಧಿಯು ಮುಕ್ತಾಯವಾದ ತರುವಾಯ ತೊಂಬತ್ತು ದಿನಗಳೊಳಗೆ, ಹಾಗೆ ಮುಚ್ಚುವ ಬಗ್ಗೆ ಅನುಮತಿ ನೀಡುವ ಅಥವಾ ನಿರಾಕರಿಸುವ ಯಾವುದೇ ನಿರ್ದೇಶನವನ್ನು ರಾಜ್ಯ ಸರ್ಕಾರವು ನೀಡದಿದ್ದರೆ, (4)ನೇ ಉಪಪ್ರಕರಣದ ಉಪಬಂಧಗಳಿಗೊಳಪಟ್ಟು, ಕಾಲೇಜನ್ನು ಅಥವಾ ಸಂದರ್ಭಾನುಸಾರ ವ್ಯಾಸಂಗಕ್ರಮವನ್ನು ಮುಚ್ಚಲು ಆಡಳಿತ ಮಂಡಳಿಗೆ ಅನುಮತಿ ನೀಡಲಾಗಿದೆ ಎಂದು ಭಾವಿಸತಕ್ಕದ್ದು.

**50. ಕೆಲವು ಸಂಸ್ಥೆಗಳಿಗೆ ಮಾನ್ಯತೆ.–** (1) ಸಂಶೋಧನೆ ಅಥವಾ ನಿರ್ದಿಷ್ಟಪಡಿಸಿದ ಅಧ್ಯಯನಗಳನ್ನು ಅಥವಾ ವಿಶೇಷ ಅಧ್ಯಯನಗಳನ್ನು ನಡೆಸುವ ಕಾಲೇಜುಗಳನ್ನು ಹೊರತುಪಡಿಸಿ, ವಿಶ್ವವಿದ್ಯಾಲಯ ಪ್ರದೇಶದ ಒಳಗೆ ಅಥವಾ ಹೊರಗೆ ಇರುವ ಯಾವುದೇ ಸಂಸ್ಥೆಯನ್ನು, ಶಾಸನಗಳ ಮೂಲಕ ನಿಯಮಿಸಬಹುದಾದಂಥ ಉದ್ದೇಶಕ್ಕಾಗಿ ಮತ್ತು ಅಂಥ ವಿಧಾನದಲ್ಲಿ ಮತ್ತು ಅಂಥ ಷರತ್ತುಗಳಿಗೆ ಒಳಪಟ್ಟು, ಮಾನ್ಯತೆ ಪಡೆದ ಸಂಸ್ಥೆಯೆಂದು ಮಂಡಳಿಯು ಮಾನ್ಯತೆ ನೀಡಬಹುದು.

(2) ಯಾವುದೇ ಅಂಥ ಮಾನ್ಯತೆಯನ್ನು ಶಾಸನಗಳ ಮೂಲಕ ನಿಯಮಿಸಬಹುದಾದಂಥ ವಿಧಾನದಲ್ಲಿ ಮತ್ತು ಅಂಥ ಕಾರಣಗಳಿಗಾಗಿ ಪೂರ್ಣವಾಗಿಯಾಗಲಿ ಅಥವಾ ಭಾಗಶಃವಾಗಿಯಾಗಲಿ ಹಿಂತೆಗೆದುಕೊಳ್ಳಬಹುದು ಅಥವಾ ಮಾರ್ಪಾಟು ಮಾಡಬಹುದು.

**51. ಕಾಲೇಜುಗಳ ಪರಿವೀಕ್ಷಣೆ .–** (1) ಖಾಯಂ ಆಗಿ ಸಂಯೋಜನೆಗೊಂಡ ಕಾಲೇಜುಗಳೂ ಒಳಗೊಂಡಂತೆ ಸಂಯೋಜನೆಗೊಂಡ ಪ್ರತಿಯೊಂದು ಕಾಲೇಜು, ಮಂಡಳಿಯು ವಿದ್ಯಾವಿಷಯಕ ಪರಿಷತ್ತಿನೊಡನೆ ಸಮಾಲೋಚನೆ ನಡೆಸಿದ ತರುವಾಯ, ಆ ಕಾಲೇಜಿನ ಅಥವಾ ಸಂಸ್ಥೆಯ ದಕ್ಷತೆಯನ್ನು ಮತ್ತು ಅದು ಸಾಧಿಸಿದ ಶೈಕ್ಷಣಿಕ ಗುಣಮಟ್ಟವನ್ನು ನಿರ್ಣಯಿಸುವುದಕ್ಕೆ ಸಾಧ್ಯವಾಗುವಂತೆ ಅಗತ್ಯಪಡಿಸಬಹುದಾದಂಥ ವರದಿಗಳನ್ನು, ವಿವರಣ ಪಟ್ಟಿಕೆಗಳನ್ನು ಮತ್ತು ಇತರ ಮಾಹಿತಿಯನ್ನು ಕುಲಸಚಿವರಿಗೆ ಒದಗಿಸತಕ್ಕದ್ದು.

(2) ಮಂಡಳಿಯು, ಅಂಥ ಪ್ರತಿಯೊಂದು ಕಾಲೇಜನ್ನು ಈ ಉದ್ದೇಶಕ್ಕಾಗಿ ರಚಿಸಿದ ಒಂದು ಸಮಿತಿಯು ಕಾಲಕಾಲಕ್ಕೆ ಪರಿವೀಕ್ಷಣೆ ನಡೆಸುವಂತೆ ಮಾಡತಕ್ಕದ್ದು.

(3) ಮಂಡಳಿಯು, ಹಾಗೆ ಪರಿವೀಕ್ಷಣೆ ನಡೆಸಿದ ಮೇಲೆ ಯಾವುದೇ ಕಾಲೇಜನ್ನು, ನಿರ್ದಿಷ್ಟಪಡಿಸಿದ ಅವಧಿಯೊಳಗೆ, ಯಾವುವೇ ವಿಷಯಗಳ ಸಂಬಂಧದಲ್ಲಿ ತನಗೆ ಅವಶ್ಯವೆಂದು ಕಂಡುಬರಬಹುದಾದಂಥ ಕ್ರಮವನ್ನು ಕೈಗೊಳ್ಳಲು ಕೋರಬಹುದು.

(4) ಪ್ರತಿಯೊಂದು ಕಾಲೇಜು, ವಿಶ್ವವಿದ್ಯಾಲಯವು ವಿದ್ಯಾವಿಷಯಕ್ಕೆ ಮತ್ತು ಆಡಳಿತಕ್ಕೆ ಸಂಬಂಧಿಸಿದ ಎಲ್ಲಾ ವಿಷಯಗಳ ಬಗ್ಗೆ ಮತ್ತು ಅದಕ್ಕೆ ಪೂರಕವಾದ ವಿಷಯಗಳ ಬಗ್ಗೆ ಕಾಲಕಾಲಕ್ಕೆ ಹೊರಡಿಸುವ ನಿರ್ದೇಶನಗಳನ್ನು ಪಾಲಿಸತಕ್ಕದ್ದು.

## ಅಧ್ಯಾಯ - VIII

## ಶಾಸನಗಳು ಮತ್ತು ವಿನಿಯಮಗಳು

**52. ಶಾಸನಗಳು.–** ಈ ಅಧಿನಿಯಮದ ಉಪಬಂಧಗಳಿಗೊಳಪಟ್ಟು, ವಿಶ್ವವಿದ್ಯಾಲಯದ ಶಾಸನಗಳು, ವಿಶ್ವವಿದ್ಯಾಲಯದ ವ್ಯವಹಾರಗಳಿಗೆ ಸಂಬಂಧಪಟ್ಟ ಯಾವುದೇ ವಿಷಯಕ್ಕೆ ಉಪಬಂಧ ಕಲ್ಪಿಸಬಹುದು ಮತ್ತು ವಿಶೇಷವಾಗಿ, ಈ ಮುಂದಿನವುಗಳಿಗೆ ಉಪಬಂಧ ಕಲ್ಪಿಸತಕ್ಕದ್ದು, ಎಂದರೆ:–

(1) ಪ್ರಾಧಿಕಾರಗಳ ರಚನೆ, ಅಧಿಕಾರಗಳು ಮತ್ತು ಕರ್ತವ್ಯಗಳು;

(2) ವಿಶ್ವವಿದ್ಯಾಲಯದ ವಿದ್ಯಾವಿಷಯಕ ಜೀವನವನ್ನು ಉತ್ತಮಗೊಳಿಸಲು ಅವಶ್ಯವಾದ ಅಥವಾ ಅಪೇಕ್ಷಣೀಯವಾದ ಇತರ ನಿಕಾಯಗಳ ಅಥವಾ ಸಮಿತಿಗಳ ರಚನೆ, ಸಂಯೋಜನೆ ಮತ್ತು ಪ್ರಕಾರ್ಯಗಳು;

(3) ಕುಲಪತಿಯವರನ್ನು ಹೊರತುಪಡಿಸಿ ವಿಶ್ವವಿದ್ಯಾಲಯದ ಅಧಿಕಾರಿಗಳ ಪದನಾಮಗಳು, ಅಧಿಕಾರಗಳು, ಪ್ರಕಾರ್ಯಗಳು, ಕರ್ತವ್ಯಗಳು ಮತ್ತು ನೇಮಕಾತಿಯ ರೀತಿ ಮತ್ತು ಆಯ್ಕೆಗಳು ಮತ್ತು ಸೇವೆಯ ನಿಬಂಧನೆಗಳು ಮತ್ತು ಷರತ್ತುಗಳು;

(4) ವಿಶ್ವವಿದ್ಯಾಲಯದ ಬೋಧಕರ ಮತ್ತು ಇತರ ಸಿಬ್ಬಂದಿಗಳ ವರ್ಗೀಕರಣ, ವಿದ್ಯಾರ್ಹತೆ ಮತ್ತು ನೇಮಕಾತಿಯ ರೀತಿ, ಸೇವಾ ನಿಬಂಧನೆಗಳು ಮತ್ತು ಷರತ್ತುಗಳು ಹಾಗೂ ಕರ್ತವ್ಯಗಳು;

(5) ವಿಶ್ವವಿದ್ಯಾಲಯಗಳ ಫ್ಯಾಕಲ್ಟಿಗಳು, ಇಲಾಖೆಗಳು, ಸಂಶೋಧನಾ ಸಂಸ್ಥೆಗಳು, ಕೇಂದ್ರಗಳು ಮತ್ತು ಇತರ ಘಟಕಗಳ ಸ್ಥಾಪನೆ, ಸಮ್ಮಿಲನ, ಉಪವಿಭಜನೆ ಅಥವಾ ರದ್ಧತಿ;

(6) ವಿಶ್ವವಿದ್ಯಾಲಯದ ಅಧಿಕಾರಿಗಳು, ಬೋಧಕರು ಮತ್ತು ಇತರ ಸಿಬ್ಬಂದಿಗಳ ಪ್ರಯೋಜನಕ್ಕಾಗಿ ವಿಶ್ರಾಂತಿ ವೇತನ ಮತ್ತು ವಿಮಾ ಯೋಜನೆಗಳ ರಚನೆ ಮತ್ತು ಅಂಥ ಯೋಜನೆಗಳ ನಿಯಮಗಳು, ನಿಬಂಧನೆಗಳು ಮತ್ತು ಷರತ್ತುಗಳು;

(7) ಪದವಿ ಮತ್ತು ಡಿಪ್ಲೋಮಾಗಳನ್ನು ಪ್ರದಾನ ಮಾಡಲು ಘಟಕೋತ್ಸವಗಳನ್ನು ನಡೆಸುವುದು;

(8) ಗೌರವ ಪದವಿಗಳು ಮತ್ತು ವಿದ್ಯಾವಿಷಯಕ ಪ್ರಶಸ್ತಿಗಳನ್ನು ಪ್ರದಾನ ಮಾಡುವುದು ಮತ್ತು ಹಿಂಪಡೆಯುವುದು;

(9) ವಿಶ್ವವಿದ್ಯಾಲಯದಡಿಯಲ್ಲಿ, ನೇಮಕವಾದ ಅಧಿಕಾರಿಗಳು, ಬೋಧಕರು ಮತ್ತು ಇತರ ವ್ಯಕ್ತಿಗಳ ಸೇವಾಷರತ್ತುಗಳು ಸಂದಾಯಮಾಡಬೇಕಾದ ಪರಿಶ್ರಮಧನ ಮತ್ತು ಪ್ರಯಾಣ ಮತ್ತು ದಿನ ಭತ್ಯೆಗಳೂ ಸೇರಿದಂತೆ ಭತ್ಯೆಗಳು;

(10) ಪರೀಕ್ಷಾ ನಿಕಾಯಗಳು ಮತ್ತು ಪರೀಕ್ಷಕರ ನೇಮಕಾತಿಯ ಷರತ್ತುಗಳು ಮತ್ತು ವಿಧಾನ;

(11) ವಿಶ್ವವಿದ್ಯಾಲಯವು ಸ್ಥಾಪಿಸಿದ ಅಥವಾ ನಿರ್ವಹಿಸುವ ಕಾಲೇಜುಗಳು, ಕೇಂದ್ರಗಳು, ವಿಭಾಗಗಳು, ಇಲಾಖೆಗಳು, ವಲಯ ಮತ್ತು ಪ್ರಾದೇಶಿಕ ಸಂಸ್ಥೆಗಳು, ಕೃಷಿ ವಿಜ್ಞಾನ ಕೇಂದ್ರಗಳು ಮತ್ತು ಇತರ ಸಂಸ್ಥೆಗಳ ನಿರ್ವಹಣೆ;

(12) ವಿಶ್ವವಿದ್ಯಾಲಯದ ಅಧಿಕಾರಿಗಳು, ಬೋಧಕರು ಮತ್ತು ಇತರ ಸಿಬ್ಬಂದಿಗಳ ನೇಮಕಾತಿಗಾಗಿ ಆಯ್ಕೆ ಸಮಿತಿಗಳ ರಚನೆ;

(13) ಈ ಅಧಿನಿಯಮದ ಮೂಲಕ ಶಾಸನಗಳ ಉಪಬಂಧ ಕಲ್ಪಿಸಬೇಕಾದ ಇತರ ಎಲ್ಲಾ ವಿಷಯಗಳು.

**53. ಶಾಸನಗಳ ರಚನೆ.–** (1) ಇನ್ನು ಮುಂದೆ ಉಪಬಂಧಿಸಿದ ರೀತಿಯಲ್ಲಿ ಮಂಡಳಿಯು ಯಾವುದೇ ಶಾಸನವನ್ನು ರಚಿಸಬಹುದು, ತಿದ್ದುಪಡಿ ಮಾಡಬಹುದು ಅಥವಾ ನಿರಸನಗೊಳಿಸಬಹುದು.

(2) ಈ ಅಧಿನಿಯಮದಡಿಯಲ್ಲಿ ರಚಿಸಿದ ಶಾಸನಗಳನ್ನು ಮಂಡಳಿಯು ಪ್ರಸ್ತಾಪಿಸತಕ್ಕದ್ದು ಮತ್ತು ಸರ್ಕಾರದ ಮೂಲಕ ಕುಲಾಧಿಪತಿಯವರಿಗೆ ಅವರ ಅನುಮತಿ ಕೋರಿ ಸಲ್ಲಿಸತಕ್ಕದ್ದು ಮತ್ತು ಕುಲಾಧಿಪತಿಯವರ ಅನುಮತಿ ಪಡೆದ ಮತ್ತು ಸರ್ಕಾರಿ ರಾಜ್ಯಪತ್ರದಲ್ಲಿ ಅದು ಪ್ರಕಟಣೆಯಾದ ತರುವಾಯ ಮಾತ್ರವೇ ಇದು ಜಾರಿಗೆ ಬರತಕ್ಕದ್ದು.

(3) ಈ ಅಧಿನಿಯಮದಡಿಯಲ್ಲಿ ರಚಿಸಲಾದ ಎಲ್ಲಾ ಶಾಸನಗಳು ಸರ್ಕಾರಿ ರಾಜ್ಯಪತ್ರದಲ್ಲಿ ಪ್ರಕಟಣೆಗೊಳ್ಳತಕ್ಕದ್ದು.

**54. ವಿನಿಯಮಗಳು.–** (1) ವಿಶ್ವವಿದ್ಯಾಲಯದ ಪ್ರಾಧಿಕಾರಗಳು ಈ ಅಧಿನಿಯಮಕ್ಕೆ ಮತ್ತು ಶಾಸನಗಳಿಗೆ ಸುಸಂಗತವಾದ ವಿನಿಯಮಗಳನ್ನು,–

(ಎ) ತಮ್ಮ ಸಭೆಗಳ ಕಾರ್ಯ ವಿಧಾನ ಮತ್ತು ಕೋರಂಗಾಗಿ ಅಗತ್ಯವಿರುವ ಸದಸ್ಯರ ಸಂಖ್ಯೆ ನಿಗದಿಪಡಿಸುವುದಕ್ಕಾಗಿ:

(ಬಿ) ಈ ಅಧಿನಿಯಮ ಅಥವಾ ಶಾಸನಗಳ ಪ್ರಕಾರ ವಿನಿಯಮಗಳ ಮೂಲಕ ನಿಯಂತ್ರಿಸಬೇಕಾದ ವಿಷಯಗಳನ್ನು ಉಪಬಂಧಿಸುವುದಕ್ಕಾಗಿ:

(ಸಿ) ಈ ಅಧಿನಿಯಮ ಮತ್ತು ಶಾಸನಗಳಿಂದ ಉಪಬಂಧಿಸಿರದ ಮತ್ತು ಪ್ರಾಧಿಕಾರಗಳಿಗೇ ಪೂರ್ಣವಾಗಿ ಸಂಬಂಧಪಟ್ಟ ಯಾವುದೇ ಇತರ ವಿಷಯಗಳಿಗೆ ಉಪಬಂಧ ಕಲ್ಪಿಸುವುದಕ್ಕಾಗಿ:

- ರಚಿಸಬಹುದು.

(2) ವಿಶ್ವವಿದ್ಯಾಲಯದ ಯಾವುದೇ ಪ್ರಾಧಿಕಾರವು ರಚಿಸಿದ ವಿನಿಯಮಗಳು, ಈ ಬಗ್ಗೆ ಮಂಡಳಿಯು ಕಾಲದಿಂದ ಕಾಲಕ್ಕೆ ನೀಡುವ ನಿರ್ದೇಶನಗಳಿಗೆ ಒಳಪಟ್ಟಿರತಕ್ಕದ್ದು.

(3) ವಿದ್ಯಾವಿಷಯಕ ಪರಿಷತ್ತು, ಈ ಅಧಿನಿಯಮದ ಮತ್ತು ಶಾಸನಗಳ ಉಪಬಂಧಗಳಿಗೊಳಪಟ್ಟು, ವ್ಯಾಸಂಗ ಕ್ರಮಗಳು, ಪರೀಕ್ಷಾ ಪದ್ಧತಿ, ಶೈಕ್ಷಣಿಕ ಕರ್ತವ್ಯಗಳ ಕಾಲಾನುಕ್ರಮ, ವಿಶ್ವವಿದ್ಯಾಲಯದ ಪದವಿಗಳು ಮತ್ತು ಡಿಪ್ಲೊಮಾಗಳನ್ನು ನೀಡುವುದು ಮತ್ತು ಶಿಕ್ಷಣ ನಿರ್ದೇಶಕರಿಗೆ ಸಂಬಂಧಿಸಿದ ಇತರ ವಿಷಯಗಳ ಬಗ್ಗೆ ಉಪಬಂಧ ಕಲ್ಪಿಸುವುದಕ್ಕಾಗಿ ವಿನಿಯಮಗಳನ್ನು ರಚಿಸತಕ್ಕದ್ದು.

(4) ವಿದ್ಯಾವಿಷಯಕ ಪರಿಷತ್ತು, ಹಿಂದಿನ ಉಪಪ್ರಕರಣಗಳ ಉಪಬಂಧಗಳ ಸಾಮಾನ್ಯಾನ್ವಯಕ್ಕೆ ಧಕ್ಕೆಯಾಗದಂತೆ, ವಿನಿಯಮಗಳನ್ನು,–

(ಎ) ಪದವಿಗಳು ಮತ್ತು ಡಿಪ್ಲೊಮಾಗಳನ್ನು ಪ್ರದಾನಮಾಡಲು ಘಟಕೋತ್ಸವಗಳನ್ನು ನಡೆಸುವುದಕ್ಕಾಗಿ;

(ಬಿ) ಗೌರವ ಪದವಿಗಳು, ವಿದ್ಯಾ ಪ್ರಶಸ್ತಿಗಳನ್ನು ಪ್ರದಾನ ಮಾಡುವುದು, ಪದವಿ ಹಿಂಪಡೆಯುವುದಕ್ಕಾಗಿ ;

(ಸಿ) ವಿಶ್ವವಿದ್ಯಾಲಯವು ನಿರ್ವಹಿಸುತ್ತಿರುವ ವಿದ್ಯಾರ್ಥಿನಿಲಯಗಳ ಸ್ಥಾಪನೆ ಮತ್ತು ರದ್ಧತಿಗಾಗಿ;

(ಡಿ) ಫೆಲೋಶಿಪ್‌ಗಳು, ಸ್ಕಾಲರ್‌ಶಿಪ್‌ಗಳು, ಸ್ಟೈಪೆಂಡುಗಳು, ಶಿಷ್ಯವೇತನಗಳು, ಪದಕಗಳು ಮತ್ತು ಪ್ರಶಸ್ತಿಗಳನ್ನು ಸ್ಥಾಪಿಸುವುದು ಮತ್ತು ಅವುಗಳನ್ನು ನೀಡುವ ಬಗ್ಗೆ ಷರತ್ತುಗಳಿಗಾಗಿ;

(ಇ) ವಿಶ್ವವಿದ್ಯಾಲಯದ ವಿದ್ಯಾರ್ಥಿಗಳ ಪ್ರವೇಶ ಮತ್ತು ಅದರ ಪಟ್ಟಿಯಲ್ಲಿ ಹೆಸರು ಸೇರಿಸುವ ಮತ್ತು ವಿದ್ಯಾರ್ಥಿಗಳಾಗಿ ಮುಂದುವರಿಸುವ ಮತ್ತು ಪಟ್ಟಿಯಿಂದ ವಿದ್ಯಾರ್ಥಿಗಳನ್ನು ಬಿಟ್ಟುಬಿಡುವ ಬಗ್ಗೆ ಷರತ್ತುಗಳು ಮತ್ತು ಪ್ರಕ್ರಿಯೆಗಾಗಿ;

(ಎಫ್) ವಿಶ್ವವಿದ್ಯಾಲಯವು ಚಾರ್ಜು ಮಾಡಬಹುದಾದ ಶುಲ್ಕಕ್ಕಾಗಿ;

(ಜಿ) ವಿಶ್ವವಿದ್ಯಾಲಯದ ಎಲ್ಲಾ ಪದವಿಗಳು, ಡಿಪ್ಲೊಮಾಗಳು ಮತ್ತು ಪ್ರಮಾಣ ಪತ್ರಗಳಿಗಾಗಿ ರಚಿಸಲಾಗುವ ವ್ಯಾಸಂಗಕ್ರಮಗಳಿಗಾಗಿ;

(ಎಚ್) ವಿಶ್ವವಿದ್ಯಾಲಯದ ಪದವಿಗಳು, ಡಿಪ್ಲೊಮಾಗಳು ಅಥವಾ ಇತರ ವ್ಯಾಸಂಗಕ್ರಮಗಳು ಮತ್ತು ಪರೀಕ್ಷೆಗಳಿಗೆ ವಿದ್ಯಾರ್ಥಿಗಳು ಪ್ರವೇಶಿಸಲು ಷರತ್ತುಗಳು ಹಾಗೂ ಪದವಿಗಳು ಮತ್ತು ಡಿಪ್ಲೊಮಾಗಳನ್ನು ಪಡೆಯುವುದಕ್ಕಾಗಿ ಅಗತ್ಯವಾದ ಅರ್ಹತೆಗಾಗಿ;

(ಐ) ಪದವಿಗಳು ಮತ್ತು ಇತರ ವಿದ್ಯಾ ಪ್ರಶಸ್ತಿಗಳನ್ನು ಪ್ರದಾನ ಮಾಡುವ ಷರತ್ತುಗಳಿಗಾಗಿ;

(ಜೆ) ವಿಶ್ವವಿದ್ಯಾಲಯದ ವಿದ್ಯಾರ್ಥಿಗಳಲ್ಲಿ ಶಿಸ್ತನ್ನು ಕಾಪಾಡುವುದಕ್ಕಾಗಿ;

(ಕೆ) ವಿದ್ಯಾರ್ಥಿನಿಯರ ವಸತಿ, ಶಿಸ್ತು ಮತ್ತು ಅವರಿಗೆ ಬೋಧನೆಗೆ ಯಾವುದಾದರೂ ವಿಶೇಷ ಏರ್ಪಾಡುಗಳನ್ನು ಮಾಡುವುದಕ್ಕಾಗಿ ಮತ್ತು ವಿದ್ಯಾರ್ಥಿನಿಯರಿಗಾಗಿಯೇ ವಿಶೇಷ ವ್ಯಾಸಂಗಕ್ರಮಗಳಿಗೆ ಉಪಬಂಧಕಲ್ಪಿಸುವುದಕ್ಕಾಗಿ;

(ಎಲ್) ವಿಶ್ವವಿದ್ಯಾಲಯದ ವಿದ್ಯಾರ್ಥಿಗಳ ನಿವಾಸದ ಷರತ್ತುಗಳು ಮತ್ತು ವಿದ್ಯಾರ್ಥಿನಿಲಯಗಳ ನಿವಾಸಿಸುವುದಕ್ಕಾಗಿ ಶುಲ್ಕವನ್ನು ವಿಧಿಸುವುದಕ್ಕಾಗಿ;

(ಎಂ) ವಿಶ್ವವಿದ್ಯಾಲಯವು ನಿರ್ವಹಿಸುತ್ತಿರುವ ವಿದ್ಯಾರ್ಥಿನಿಲಯಗಳ ಮಾನ್ಯತೆ ಮತ್ತು ನಿರ್ವಹಣೆಗಾಗಿ;

– ರಚಿಸತಕ್ಕದ್ದು.

## ಅಧ್ಯಾಯ - IX

## ಸಂಕೀರ್ಣ

**55. ಕಾರ್ಯಗಳ ಹಾಗೂ ವ್ಯವಹರಣೆಗಳ ಸಿಂಧುತ್ವದ ಉಳಿಸುವಿಕೆಗಳು.–** ಈ ಅಧಿನಿಯಮದ ಅಡಿಯಲ್ಲಿ ಮಾಡಿದ ಯಾವುದೇ ಕಾರ್ಯ ಅಥವಾ ಕೈಗೊಂಡ ವ್ಯವಹರಣೆಗಳನ್ನು ಕೇವಲ ಈ ಮುಂದಿನ ಕಾರಣಗಳಿಗಾಗಿ ಪ್ರಶ್ನಿಸತಕ್ಕದ್ದಲ್ಲ, ಎಂದರೆ:–

(iii) ಯಾವುದೇ ಪ್ರಾಧಿಕಾರದ ರಚನೆಯಲ್ಲಿ ಯಾವುದೇ ಖಾಲಿಸ್ಥಾನ ಅಥವಾ ದೋಷ ಇರುವುದು, ಅಥವಾ

(iv) ಪ್ರಕರಣದ ಗುಣಾಂಶಗಳಿಗೆ ಬಾಧೆ ಉಂಟುಮಾಡದ ಆ ಕಾರ್ಯ ಅಥವಾ ವ್ಯವಹರಣೆಗಳಲ್ಲಿರುವ ಯಾವುದೇ ದೋಷ ಅಥವಾ ಕ್ರಮಬಾಹಿರತೆ.

**56. ವಿದ್ಯಾರ್ಥಿಗಳ ವಾಸಸ್ಥಳ.–** ವಿಶ್ವವಿದ್ಯಾಲಯವು ನಿರ್ವಹಿಸುವ ಅಥವಾ ಕುಲಪತಿಯವರು ಅನುಮೋದಿಸಿದ ವಾಸಸ್ಥಳದಲ್ಲಿ ವಿದ್ಯಾರ್ಥಿಗಳು ನಿಯಮಿಸಲಾದಂಥ ಷರತ್ತುಗಳಿಗೊಳಪಟ್ಟು ವಾಸಿಸತಕ್ಕದ್ದು. ಆದಾಗ್ಯೂ, ವಿಶ್ವವಿದ್ಯಾಲಯದಲ್ಲಿ ಅಂಥ ವಾಸಸ್ಥಳವು ದೊರಕದಿದ್ದಲ್ಲಿ ವಿಶ್ವವಿದ್ಯಾಲಯದ ಕುಲಪತಿಯವರು ಅಥವಾ ಅಧಿಕೃತರಾದ ಒಬ್ಬ ಅಧಿಕಾರಿಯು ವಿದ್ಯಾರ್ಥಿಗಳು ತಮ್ಮ ತಂದೆ ತಾಯಿಯವರೊಂದಿಗೆ ಅಥವಾ ಖಾಸಗಿ ವಾಸಸ್ಥಳಗಳಲ್ಲಿ ವಾಸಿಸಲು ಅನುಮತಿಸಬಹುದು.

**57. ವಾರ್ಷಿಕ ವರದಿ.–** ವಿಶ್ವವಿದ್ಯಾಲಯದ ವಾರ್ಷಿಕ ವರದಿಯನ್ನು ಕುಲಸಚಿವರು ಅಥವಾ ಕುಲಪತಿಯವರ ನಿರ್ದೇಶನಗಳಡಿಯಲ್ಲಿ ಇತರ ಯಾವೊಬ್ಬ ಅಧಿಕಾರಿಯು ಹಣಕಾಸು ವರ್ಷದ ಮುಕ್ತಾಯದಿಂದ ಆರು ತಿಂಗಳೊಳಗೆ ತಯಾರಿಸತಕ್ಕದ್ದು ಮತ್ತು ಇದನ್ನು ಪರಿಗಣನೆಗೆ ತೆಗೆದುಕೊಳ್ಳುವ ಸಭೆಯು ನಡೆಯುವುದಕ್ಕೆ ಒಂದು ತಿಂಗಳ ಮೊದಲು ಮಂಡಳಿಯ ಸದಸ್ಯರುಗಳಿಗೆ ಪರಿಚಲನೆ ಮಾಡತಕ್ಕದ್ದು. ಮಂಡಳಿಯು ವಾರ್ಷಿಕ ವರದಿಯ ಪರಿಗಣನೆಯ ತರುವಾಯ ಅದರ ಪ್ರತಿಯನ್ನು ಸರ್ಕಾರದ ಮುಂದಿಡತಕ್ಕದ್ದು, ಅದನ್ನು ವಿಧಾನಮಂಡಲದ ಎರಡೂ ಸದನಗಳ ಮುಂದೆ ಮಂಡಿಸತಕ್ಕದ್ದು.

**58. ಅಧಿಕಾರಗಳ ಪ್ರತ್ಯಾಯೋಜನೆ.–** ಕುಲಪತಿಯವರು, ಆದೇಶದ ಮೂಲಕ, ಈ ಅಧಿನಿಯಮ ಅಥವಾ ಅದರಡಿಯಲ್ಲಿ ರಚಿಸಲಾಗಿರುವ ಶಾಸನಗಳಡಿಯಲ್ಲಿ ತಾನು ಚಲಾಯಿಸಬಹುದಾದ ಅಧಿಕಾರಗಳನ್ನು ಕುಲಪತಿಯವರು ಸರಿಯಾಗಿದೆಯೆಂದು ಭಾವಿಸಬಹುದಾದಂಥ ಷರತ್ತುಗಳು ಮತ್ತು ಮಿತಿಗಳಿಗೊಳಪಟ್ಟು ಯಾವುದೇ ಪ್ರಾಧಿಕಾರ, ಅಧಿಕಾರಿ, ಕಾಲೇಜುಗಳ ಮುಖ್ಯಸ್ಥರು, ಇಲಾಖೆಗಳು, ಸಂಸ್ಥೆಗಳು ಅಥವಾ ಘಟಕಗಳು ಅಥವಾ ಕಚೇರಿಗೆ ಪ್ರತ್ಯಾಯೋಜಿಸಬಹುದು.

**59. ಅಡ್–ಹಾಕ್ ಸಮಿತಿಗಳ ರಚನೆ.–** ಈ ಅಧಿನಿಯಮದಲ್ಲಿ ಏನೇ ಇದ್ದರೂ ಮತ್ತು ಈ ಅಧಿನಿಯಮ ಅಥವಾ ಶಾಸನಗಳು ಅಥವಾ ವಿನಿಯಮಗಳ ಉಪಬಂಧಗಳನ್ವಯ ವಿಶ್ವವಿದ್ಯಾಲಯಗಳ ಪ್ರಾಧಿಕಾರಗಳು ಅಥವಾ ನಿಕಾಯಗಳು ರಚನೆಯಾಗುವವರೆಗೆ ಕುಲಾಧಿಪತಿಯವರ ಪೂರ್ವಾನುಮೋದನೆಗೊಳಪಟ್ಟು ಕುಲಪತಿಯವರು, ಈ ಅಧಿನಿಯಮ ಅಥವಾ

ಶಾಸನಗಳು ಅಥವಾ ವಿನಿಯಮಗಳಡಿಯಲ್ಲಿನ ಅಂಥ ಪ್ರಾಧಿಕಾರಗಳ ಅಥವಾ ನಿಕಾಯಗಳ ಯಾವುದೇ ಅಧಿಕಾರಗಳನ್ನು ಚಲಾಯಿಸಲು, ಪ್ರಕಾರ್ಯಗಳನ್ನು ನಿರ್ವಹಿಸಲು ಮತ್ತು ಕರ್ತವ್ಯಗಳನ್ನು ಮಾಡಲು ತಾತ್ಕಾಲಿಕವಾಗಿ ಅಡ್–ಹಾಕ್ ಸಮಿತಿಗಳನ್ನು ನೇಮಿಸಬಹುದು.

**60. ಪ್ರಾಧಿಕಾರಗಳು ಅಥವಾ ನಿಕಾಯಗಳ ಸ್ಥಾಪನೆಯಲ್ಲಿ ವಿವಾದಗಳು.–** ವಿಶ್ವವಿದ್ಯಾಲಯದ ಯಾವುದೇ ಪ್ರಾಧಿಕಾರ ಅಥವಾ ಇತರ ನಿಕಾಯದ ಸದಸ್ಯನಾಗಿ ನೇಮಕಾತಿ ಹೊಂದಲು ಅಥವಾ ಸದಸ್ಯನಾಗಲು ಯಾವುದೇ ವ್ಯಕ್ತಿಯ ಅರ್ಹತೆಯ ಬಗ್ಗೆ ಯಾವುದೇ ಪ್ರಶ್ನೆಯು ಉದ್ಭವಿಸಿದಲ್ಲಿ, ಆ ವಿಷಯವನ್ನು ಕುಲಾಧಿಪತಿಯವರಿಗೆ ತೀರ್ಮಾನಕ್ಕಾಗಿ ಕಳುಹಿಸತಕ್ಕದ್ದು ಮತ್ತು ಅದರ ಬಗ್ಗೆ ಅವರ ತೀರ್ಮಾನವೇ ಅಂತಿಮವಾಗಿರತಕ್ಕದ್ದು:

ಪರಂತು, ಯಾವುದೇ ಅಂಥ ತೀರ್ಮಾನವನ್ನು ತೆಗೆದುಕೊಳ್ಳುವ ಮುಂಚೆ, ಕುಲಾಧಿಪತಿಯವರು ಅದರಿಂದ ಬಾಧಿತನಾಗುವ ವ್ಯಕ್ತಿಗೆ ತನ್ನ ಅಹವಾಲು ಹೇಳಿಕೊಳ್ಳಲು ಯುಕ್ತ ಅವಕಾಶವನ್ನು ನೀಡತಕ್ಕದ್ದು.

**61. ವಿಶ್ವವಿದ್ಯಾಲಯದ ಪುನರಾವಲೋಕನ ಆಯೋಗದ ನೇಮಕ.–** (1) ಕುಲಾಧಿಪತಿಯು, ಪ್ರತಿ ಐದು ವರ್ಷಗಳಿಗೊಮ್ಮೆ ವಿಶ್ವವಿದ್ಯಾಲಯದ ಕಾರ್ಯ ನಿರ್ವಹಣೆಯನ್ನು ಪುನರವಲೋಕಿಸುವುದಕ್ಕಾಗಿ ಮತ್ತು ಶಿಫಾರಸುಗಳನ್ನು ಮಾಡುವುದಕ್ಕಾಗಿ ಒಂದು ಆಯೋಗವನ್ನು ರಚಿಸತಕ್ಕದ್ದು.

(2) ಆಯೋಗವು, ಮೂವರಿಗೆ ಕಡಿಮೆಯಿಲ್ಲದಂತೆ, ಕುಲಾಧಿಪತಿಯವರು ರಾಜ್ಯ ಸರ್ಕಾರದೊಂದಿಗೆ ಸಮಾಲೋಚಿಸಿ ನೇಮಿಸಿದ ಕೃಷಿ ಕ್ಷೇತ್ರದಲ್ಲಿ ಪ್ರಸಿದ್ಧ ಶಿಕ್ಷಣ ತಜ್ಞರನ್ನು ಒಳಗೊಂಡಿರತಕ್ಕದ್ದು. ಅವರಲ್ಲಿ ಒಬ್ಬರು ಅಧ್ಯಕ್ಷರಾಗತಕ್ಕದ್ದು.

(3) ಸದಸ್ಯರ ನೇಮಕಾತಿಯ ನಿಬಂಧನೆಗಳು ಮತ್ತು ಷರತ್ತುಗಳು, ಕುಲಾಧಿಪತಿಯವರು ನಿರ್ಧರಿಸಬಹುದಾದಂಥವುಗಳು ಆಗಿರತಕ್ಕದ್ದು.

(4) ಆಯೋಗವು ತಾನು ಸೂಕ್ತವೆಂದು ಭಾವಿಸುವಂಥ ವಿಚಾರಣೆಯನ್ನು ನಡೆಸಿದ ತರುವಾಯ ಕುಲಾಧಿಪತಿಯವರಿಗೆ ಮತ್ತು ರಾಜ್ಯ ಸರ್ಕಾರಕ್ಕೆ ಶಿಫಾರಸುಗಳನ್ನು ಮಾಡತಕ್ಕದ್ದು.

(5) ಕುಲಾಧಿಪತಿಯವರು, ರಾಜ್ಯ ಸರ್ಕಾರದೊಂದಿಗೆ ಸಮಾಲೋಚಿಸಿ, ಶಿಫಾರಸ್ಸಿನ ಮೇಲೆ ತಾನು ಸೂಕ್ತವೆಂದು ಭಾವಿಸುವಂಥ ಕ್ರಮವನ್ನು ಕೈಗೊಳ್ಳಬಹುದು.

(6) ರಾಜ್ಯ ಸರ್ಕಾರವು, ಕೈಗೊಂಡ ಕ್ರಮವನ್ನು ವಿವರಿಸುವ ಜ್ಞಾಪನ ಪತ್ರದೊಡನೆ ಶಿಫಾರಸುಗಳ ಒಂದು ಪ್ರತಿಯನ್ನು ರಾಜ್ಯ ವಿಧಾನ ಮಂಡಲದ ಉಭಯ ಸದನಗಳ ಮುಂದೆ ಮಂಡಿಸತಕ್ಕದ್ದು.

**62. ವಿಶ್ವವಿದ್ಯಾಲಯದ ವ್ಯವಹರಣೆಗಳ ಸಂಬಂಧದಲ್ಲಿ ಹುದ್ದೆಗಳಿಗೆ ನೇಮಕಾತಿ.–** (1) ಈ ಅಧಿನಿಯಮದ ಮತ್ತು ಶಾಸನಗಳ ಉಪಬಂಧಗಳಿಗೊಳಪಟ್ಟು ವಿಶ್ವವಿದ್ಯಾಲಯದ ವ್ಯವಹರಣೆಗಳಿಗೆ ಸಂಬಂಧಿಸಿದ ಹುದ್ದೆಗಳಿಗೆ ನೇಮಕಾತಿ ಮತ್ತು ಸೇವೆಗಳನ್ನು ನಿಯಮಿಸಲಾದಂತೆ ಮಂಡಳಿಯ ಪೂರ್ವಾನುಮತಿಯೊಡನೆ ಕುಲಪತಿಯವರು ಮಾಡಬಹುದು:

ಪರಂತು, ಸಹಾಯಕ ಪ್ರಾಧ್ಯಾಪಕರ ವೇತನ ಶ್ರೇಣಿಯದ್ದಕ್ಕಿಂತ ಕಡಿಮೆ ವೇತನಶ್ರೇಣಿಯಿರುವ ಹುದ್ದೆಗಳ ನೇಮಕಾತಿಯ ಸಂಬಂಧದಲ್ಲಿ ಅಂಥ ಅನುಮೋದನೆಯ ಅವಶ್ಯಕತೆ ಇರತಕ್ಕದ್ದಲ್ಲ.

(2) ಈ ಅಧಿನಿಯಮದಲ್ಲಿ ಏನೇ ಇದ್ದರೂ ಮತ್ತು ಶಾಸನಗಳು ರಚನೆಯಾಗುವ ಅಥವಾ ವಿಶ್ವವಿದ್ಯಾಲಯದ ಪ್ರಾಧಿಕಾರಗಳು ಸ್ಥಾಪನೆಯಾಗುವವರೆಗಿನ ಅವಧಿಗೆ, ವಿಶ್ವವಿದ್ಯಾಲಯದ ವ್ಯವಹರಣೆಗಳ ಸಂಬಂಧದಲ್ಲಿ ಹುದ್ದೆಗಳು ಮತ್ತು ಸೇವೆಗಳಿಗೆ ನೇಮಕಾತಿಗಳನ್ನು, ಕುಲಾಧಿಪತಿಯವರು ಅನುಮೋದಿಸಬಹುದಾದಂಥ ನಿಬಂಧನೆಗಳು ಮತ್ತು ಷರತ್ತುಗಳ ಮೇಲೆ ಕುಲಪತಿಯವರು ಮಾಡಬಹುದು.

**63. ತಾತ್ಕಾಲಿಕ ಉಪಬಂಧಗಳು.–** ಈ ಅಧಿನಿಯಮದಲ್ಲಿ ಏನೇ ಇದ್ದರೂ, ಕುಲಪತಿಯು ಕುಲಾಧಿಪತಿಯವರ ಪೂರ್ವಾನುಮೋದನೆಯೊಂದಿಗೆ ಈ ಅಧಿನಿಯಮದ ಪ್ರಾರಂಭದಿಂದ ಒಂದು ವರ್ಷದ ಅವಧಿಗಾಗಿ ಈ ಅಧಿನಿಯಮದ ಉಪಬಂಧಗಳನ್ನು ಕಾರ್ಯಗತಗೊಳಿಸುವ ಉದ್ದೇಶಕ್ಕಾಗಿ ವಿಶ್ವವಿದ್ಯಾಲಯದ ಎಲ್ಲಾ ಅಥವಾ ಯಾವುದೇ ಪ್ರಕಾರ್ಯಗಳನ್ನು ನಿರ್ವಹಿಸಬಹುದು ಮತ್ತು ಆ ಉದ್ದೇಶಕ್ಕಾಗಿ ಈ ಅಧಿನಿಯಮದ ಮೂಲಕ ವಿಶ್ವವಿದ್ಯಾಲಯದ ಯಾವುದೇ ಪ್ರಾಧಿಕಾರವು ಅಥವಾ ನಿಕಾಯವು ಚಲಾಯಿಸಬೇಕಾದ ಯಾವುವೇ ಅಧಿಕಾರಗಳನ್ನು ಅಥವಾ ನಿರ್ವಹಿಸಬೇಕಾದ ಯಾವುವೇ ಕರ್ತವ್ಯಗಳನ್ನು ಈ ಅಧಿನಿಯಮದಲ್ಲಿ ಅಥವಾ ಶಾಸನಗಳಲ್ಲಿ ಅಥವಾ ವಿನಿಯಮಗಳಲ್ಲಿ ಉಪಬಂಧಿಸಿದಂತೆ ಅಂಥ ಪ್ರಾಧಿಕಾರವು ಅಥವಾ ನಿಕಾಯವು ಅಸ್ತಿತ್ವಕ್ಕೆ ಬರುವವರೆಗೆ ಚಲಾಯಿಸಬಹುದು ಅಥವಾ ನೆರವೇರಿಸಬಹುದು.

**64. ಸದ್ಭಾವನೆಯಿಂದ ಕೈಗೊಂಡ ಕ್ರಮದ ರಕ್ಷಣೆ.–** ಈ ಅಧಿನಿಯಮದ ಅಥವಾ ಅದರಡಿಯಲ್ಲಿ ರಚಿಸಿದ ಶಾಸನಗಳು ಅಥವಾ ವಿನಿಯಮಗಳಿಗೆ ಅನುಸಾರವಾಗಿ ಸದ್ಭಾವನೆಯಿಂದ ಮಾಡಿದ ಅಥವಾ ಮಾಡಲು ಉದ್ದೇಶಿಸಿದ ಯಾವುದೇ ಕಾರ್ಯಕ್ಕಾಗಿ ವಿಶ್ವವಿದ್ಯಾಲಯದ ಅಥವಾ ಅದರ ಪ್ರಾಧಿಕಾರಗಳ, ನಿಕಾಯಗಳ ಅಥವಾ ಅಧಿಕಾರಿಗಳ ವಿರುದ್ಧ ಯಾವುದೇ ದಾವೆ ಅಥವಾ ಇತರ ಕಾನೂನು ವ್ಯವಹರಣೆ ನಡೆಸಲು ಅವಕಾಶ ಇರತಕ್ಕದ್ದಲ್ಲ ಮತ್ತು ಅವರಿಂದ ಯಾವುದೇ ನಷ್ಟ ಪರಿಹಾರಗಳನ್ನು ಕ್ಲೈಮ್ ಮಾಡತಕ್ಕದ್ದಲ್ಲ.

**65. ತೊಂದರೆಗಳ ನಿವಾರಣೆಗೆ ಅಧಿಕಾರ.–** (1) ವಿಶ್ವವಿದ್ಯಾಲಯದ ಯಾವುದೇ ಪ್ರಾಧಿಕಾರದ ಅಥವಾ ನಿಕಾಯದ ಮೊದಲ ರಚನೆಯ ಅಥವಾ ಪುನಾರಚನೆಯ ಸಂಬಂಧದಲ್ಲಿ ಅಥವಾ ಈ ಅಧಿನಿಯಮದ ಉಪಬಂಧಗಳನ್ನು ಜಾರಿಗೊಳಿಸುವ ಸಂಬಂಧದಲ್ಲಿ ಯಾವುದೇ ತೊಂದರೆ ಉದ್ಭವಿಸಿದರೆ, ರಾಜ್ಯ ಸರ್ಕಾರವು ಅಧಿಸೂಚನೆಯ ಮೂಲಕ ತೊಂದರೆಯ ನಿವಾರಣೆಗಾಗಿ ಅವಶ್ಯಕ ಹಾಗೂ ಸಮಂಜಸವೆಂದು ತನಗೆ ಕಂಡುಬರುವಂಥ ಹಾಗೂ ಈ ಅಧಿನಿಯಮದ ಉಪಬಂಧಗಳಿಗೆ ಅಸಂಗತವಲ್ಲದ ಉಪಬಂಧಗಳನ್ನು ರಚಿಸಬಹುದು:

ಪರಂತು, ಈ ಅಧಿನಿಯಮದ ಪ್ರಾರಂಭದ ದಿನಾಂಕದಿಂದ ಐದು ವರ್ಷಗಳು ಮುಕ್ತಾಯವಾದ ತರುವಾಯ ಅಂಥ ಯಾವುದೇ ಅಧಿಸೂಚನೆಯನ್ನು ಹೊರಡಿಸತಕ್ಕದ್ದಲ್ಲ.

(2) (1)ನೇ ಉಪಪ್ರಕರಣದ ಅಡಿಯಲ್ಲಿ ಹೊರಡಿಸಲಾದ ಪ್ರತಿಯೊಂದು ಅಧಿಸೂಚನೆಯನ್ನು ಮತ್ತು 8ನೇ ಪ್ರಕರಣದ (8)ನೇ ಉಪ–ಪ್ರಕರಣದಡಿಯಲ್ಲಿ ಹೊರಡಿಸಲಾದ ಪ್ರತಿಯೊಂದು ಆದೇಶವನ್ನು ಅದನ್ನು ಹೊರಡಿಸಿದ ತರುವಾಯ ಆದಷ್ಟು ಬೇಗನೆ ರಾಜ್ಯ ವಿಧಾನಮಂಡಲದ ಪ್ರತಿಯೊಂದು ಸದನದ ಮುಂದೆ ಅದು ಅಧಿವೇಶನದಲ್ಲಿರುವಾಗ ಒಂದು ಅಧಿವೇಶನದಲ್ಲಿ ಅಥವಾ ಎರಡು ಅಥವಾ ಹೆಚ್ಚು ನಿರಂತರ ಅಧಿವೇಶನಗಳಲ್ಲಿ ಅಡಕವಾಗಿರಬಹುದಾದ ಒಟ್ಟು ಮೂವತ್ತು ದಿನಗಳ ಅವಧಿಯವರೆಗೆ ಮಂಡಿಸತಕ್ಕದ್ದು ಮತ್ತು ಸದರಿ ಅವಧಿಯು ಮುಕ್ತಾಯವಾಗುವುದಕ್ಕೆ ಮುಂಚೆ ರಾಜ್ಯ ವಿಧಾನಮಂಡಲದ ಯಾವೊಂದು ಸದನವು ಅಧಿಸೂಚನೆಯಲ್ಲಿ ಯಾವುದೇ ಮಾರ್ಪಾಡು ಮಾಡಿದರೆ, ಅಥವಾ ಆ ಅಧಿಸೂಚನೆಯು ಪರಿಣಾಮಕ್ಕೆ ಬರತಕ್ಕದ್ದಲ್ಲವೆಂದು ನಿರ್ದೇಶಿಸಿದರೆ ಹಾಗೂ ಆ ಮಾರ್ಪಾಡು ಅಥವಾ ನಿರ್ದೇಶನವನ್ನು ಇನ್ನೊಂದು ಸದನವು ಒಪ್ಪಿದರೆ ತದನಂತರ ಅಂಥ ಅಧಿಸೂಚನೆಯು ಸಂದರ್ಭಾನುಸಾರ ಹಾಗೆ ಮಾರ್ಪಾಟಾದ ರೀತಿಯಲ್ಲಿ ಪರಿಣಾಮಕಾರಿಯಾಗತಕ್ಕದ್ದು ಅಥವಾ ಪರಿಣಾಮಕಾರಿಯಾಗತಕ್ಕದ್ದಲ್ಲ. ಆದಾಗ್ಯೂ, ಯಾವುದೇ ಅಂಥ ಮಾರ್ಪಾಡು ಅಥವಾ ರದ್ಧತಿಯು ಈ ಅಧಿಸೂಚನೆಯ ಅಡಿಯಲ್ಲಿ ಈ ಮುಂಚೆ ಮಾಡಲಾದ ಯಾವುದೇ ಕಾರ್ಯದ ಮಾನ್ಯತೆಗೆ ಬಾಧೆ ಉಂಟುಮಾಡತಕ್ಕದ್ದಲ್ಲ.

**66. ಕಾನೂನು ವ್ಯವಹರಣೆ.–** ವಿಶ್ವವಿದ್ಯಾಲಯವು ಹೂಡಿದ ಅಥವಾ ಅದರ ವಿರುದ್ಧವಾದ ಎಲ್ಲಾ ದಾವೆಗಳು ಮತ್ತು ಇತರ ಕಾನೂನು ವ್ಯವಹರಣೆಗಳನ್ನು ವಿಶ್ವವಿದ್ಯಾಲಯದ ಪರವಾಗಿ ಕುಲಸಚಿವರು ಅಥವಾ ಕುಲಪತಿಯವರು ಇದರ ಬಗ್ಗೆ ಆಧಿಕಾರ ನೀಡಿದ ಯಾವೊಬ್ಬ ಇತರ ಅಧಿಕಾರಿಯು ಪ್ರಾರಂಭಿಸತಕ್ಕದ್ದು, ಪ್ರಾಸಿಕ್ಯೂಟ್ ಮಾಡತಕ್ಕದ್ದು ಅಥವಾ ಪ್ರತಿರಕ್ಷಿಸತಕ್ಕದ್ದು.

**67. ಕೃಷಿ ಶಿಕ್ಷಣ, ಸಂಶೋಧನೆ ಮತ್ತು ವಿಸ್ತರಣೆಗೆ ರಾಜ್ಯ ಸಮನ್ವಯ ಸಮಿತಿ.–** (1) ರಾಜ್ಯದಲ್ಲಿನ ಎಲ್ಲಾ ಕೃಷಿ ವಿಶ್ವವಿದ್ಯಾಲಯಗಳ, ವಿಶೇಷವಾಗಿ, ಬೋಧನೆ, ಸಂಶೋಧನೆ, ವಿಸ್ತರಣಾ ಶಿಕ್ಷಣ ಮತ್ತು ಸಾಮಾನ್ಯ ಆಸಕ್ತಿಗಳ ಇತರ ವಿಷಯಗಳ ಸಂಬಂಧದಲ್ಲಿ ಪರಿಣಾಮಕಾರಿ ಸಮನ್ವಯದ ಉದ್ದೇಶಕ್ಕಾಗಿ ಕೃಷಿ ಶಿಕ್ಷಣ, ಸಂಶೋಧನೆ ಮತ್ತು ವಿಸ್ತರಣೆಗಾಗಿ ಒಂದು ರಾಜ್ಯ ಸಮನ್ವಯ ಸಮಿತಿಯು ಇರತಕ್ಕದ್ದು.

(2) ರಾಜ್ಯ ಸಮನ್ವಯ ಸಮಿತಿಯು ಈ ಮುಂದಿನ ಸದಸ್ಯರುಗಳನ್ನು ಒಳಗೊಂಡಿರತಕ್ಕದ್ದು, ಎಂದರೆ:–

(ಎ) ಕೃಷಿ ಪ್ರಭಾರದಲ್ಲಿರುವ ಸಚಿವರು, ಕರ್ನಾಟಕ ಸರ್ಕಾರ ಇವರು ಅಧ್ಯಕ್ಷರಾಗಿರತಕ್ಕದ್ದು;

(ಬಿ) ರಾಜ್ಯದಲ್ಲಿನ ಎಲ್ಲಾ ಕೃಷಿ ವಿಶ್ವವಿದ್ಯಾಲಯಗಳ ಕುಲಪತಿಯವರು;

(ಸಿ) ಎಲ್ಲಾ ಕೃಷಿ ವಿಶ್ವವಿದ್ಯಾಲಯಗಳ ಶಿಕ್ಷಣ, ಸಂಶೋಧನೆ ಮತ್ತು ವಿಸ್ತಾರಣೆ ನಿರ್ದೇಶಕರುಗಳು;

(ಡಿ) ರಾಜ್ಯದಲ್ಲಿಯ ಎಲ್ಲಾ ಕೃಷಿ ವಿಶ್ವವಿದ್ಯಾಲಯಗಳ ಕುಲಸಚಿವರು;

(ಇ) ಸರ್ಕಾರದ ಕಾರ್ಯದರ್ಶಿ, ಕೃಷಿ ಇಲಾಖೆ – ಇವರು ಸದಸ್ಯ ಕಾರ್ಯದರ್ಶಿಯಾಗಿರತಕ್ಕದ್ದು.

(3) ಸಮನ್ವಯ ಸಮಿತಿಯ ಪ್ರಕಾರ್ಯಗಳು ಈ ಮುಂದಿನಂತೆ ಇರತಕ್ಕದ್ದು, ಎಂದರೆ:–

(ಎ) ರಾಜ್ಯದಲ್ಲಿಯ ಕೃಷಿ ವಿಶ್ವವಿದ್ಯಾಲಯಗಳ ಸ್ವಾಯತ್ತತೆ ಭಂಗವಾಗದಂತೆ ನೋಡಿಕೊಳ್ಳುವುದು;

(ಬಿ) ಶೈಕ್ಷಣಿಕ ಕಾರ್ಯಕ್ರಮಗಳನ್ನು ವಿನಿಯಮಗಳನ್ನು ಸಮನ್ವಯಗೊಳಿಸುವುದು;

(ಸಿ) ರಾಜ್ಯದಲ್ಲಿಯ ವಿವಿಧ ಕೃಷಿ ವಿಶ್ವವಿದ್ಯಾಲಯಗಳ ಶಿಕ್ಷಣ, ಸಂಶೋಧನೆ ಮತ್ತು ವಿಸ್ತರಣಾ ಕ್ಷೇತ್ರಗಳಲ್ಲಿ ಸಹಕಾರದ ಪ್ರದೇಶಗಳನ್ನು ಗುರುತಿಸುವ ಮೂಲಕ ಪರಸ್ಪರ ಪೂರಕ ಮತ್ತು ಕೂಡುಬಲದಿಂದ ಕೆಲಸ ಮಾಡುವಂತೆ ನೋಡಿಕೊಳ್ಳುವುದು;

(ಡಿ) ರಾಜ್ಯದಲ್ಲಿಯ ಮತ್ತು ಸಂಬಂಧಿಸಿದ ಅಭಿವೃದ್ಧಿ ಇಲಾಖೆಗಳ ಸಮನ್ವಯದೊಡನೆ ಕೃಷಿ ಅಭಿವೃದ್ಧಿಗಾಗಿ ಹೊಸ ಕಾರ್ಯಕ್ರಮಗಳು ಮತ್ತು ಕ್ರಿಯಾ ಯೋಜನೆಗಳನ್ನು ಸಲಹೆ ಮಾಡುವುದು;

(ಇ) ಅಂತರ ವಿಶ್ವವಿದ್ಯಾಲಯ ಮತ್ತು ವಿಶ್ವವಿದ್ಯಾಲಯ – ರಾಜ್ಯ ಇವುಗಳ ನಡುವಿನ ವಿವಾದಗಳನ್ನು ಪರಿಹರಿಸುವುದು.

(4) ಸಮಿತಿಯು ವರ್ಷದಲ್ಲಿ ಕನಿಷ್ಠ ಎರಡು ಬಾರಿಯಾದರೂ ಸಭೆ ಸೇರತಕ್ಕದ್ದು.

**68. ಶಾಸನಗಳ ಮತ್ತು ವಿನಿಯಮಗಳು ಮುಂತಾದವುಗಳ ಮುಂದುವರಿಕೆ.–** (1) ಈ ಅಧಿನಿಯಮದ ಸೂಕ್ತ ಉಪಬಂಧಗಳಡಿಯಲ್ಲಿ ಶಾಸನಗಳು ಅಥವಾ ವಿನಿಯಮಗಳನ್ನು ರಚಿಸುವವರೆಗೆ, ಕರ್ನಾಟಕ ಕೃಷಿ ವಿಜ್ಞಾನಗಳ ವಿಶ್ವವಿದ್ಯಾಲಯಗಳ ಅಧಿನಿಯಮ 1963ರ ಉಪಬಂಧಗಳ ಅಡಿಯಲ್ಲಿ ರಚಿಸಿದ ಹಾಗೂ ಅಧಿನಿಯಮದ ಪ್ರಾರಂಭದ ನಿಕಟಪೂರ್ವದಲ್ಲಿ ಜಾರಿಯಲ್ಲಿರುವ ಶಾಸನಗಳು ಮತ್ತು ವಿನಿಯಮಗಳನ್ನು, ಅವು ಈ ಅಧಿನಿಯಮದ ಉಪಬಂಧಗಳಿಗೆ ಅಸಂಗತವಾಗದಿರುವಷ್ಟರ ಮಟ್ಟಿಗೆ ಮತ್ತು ಕುಲಾಧಿಪತಿಯವರ ಅನುಮೋದನೆ ಪಡೆದುಕೊಂಡು ಕುಲಪತಿಯು ಅದರಲ್ಲಿ ಮಾಡಬಹುದಾದಂತಹ ಅಳವಡಿಕೆಗಳು ಅಥವಾ ಮಾರ್ಪಾಡುಗಳಿಗೆ ಒಳಪಟ್ಟು, ಈ ಅಧಿನಿಯಮದ ಸೂಕ್ತ ಉಪಬಂಧಗಳಡಿಯಲ್ಲಿ ವಿಶ್ವವಿದ್ಯಾಲಯವು ರಚಿಸಿದ ಶಾಸನಗಳು ಮತ್ತು ವಿನಿಯಮಗಳೆಂದು ಭಾವಿಸತಕ್ಕದ್ದು.

(2) ಈ ಅಧಿನಿಯಮದ ಪ್ರಾರಂಭದ ದಿನದಂದು, ಕರ್ನಾಟಕ ಕೃಷಿ ವಿಜ್ಞಾನಗಳ ಅಧಿನಿಯಮ, 1963ರ ಅಡಿಯಲ್ಲಿ ಸ್ಥಾಪಿತವಾದ ವಿಶ್ವವಿದ್ಯಾಲಯದ ಕುಲಪತಿಗಳ ಪದವನ್ನು ಧಾರಣ ಮಾಡಿದ ವ್ಯಕ್ತಿಯು ಈ ಅಧಿನಿಯಮವನ್ನು ಪ್ರಖ್ಯಾಪಿಸದಿದ್ದರೆ ಎಲ್ಲಿಯವರೆಗೆ ಆತನು ತನ್ನ ಹುದ್ದೆಯನ್ನು ಧಾರಣ ಮಾಡಿರುತ್ತಿದ್ದನೋ ಅಲ್ಲಿಯವರೆಗೆ ಆ ಪದದಲ್ಲಿ ಮುಂದುವರೆಯತಕ್ಕದ್ದು.

**69. ನಿರಸನ ಮತ್ತು ಉಳಿಸುವಿಕೆಗಳು.–** (1) ಕೃಷಿ ವಿಜ್ಞಾನಗಳ ವಿಶ್ವವಿದ್ಯಾಲಯ ಅಧ್ಯಾದೇಶ, 2009ನ್ನು (2009ರ ಕರ್ನಾಟಕ ಅಧ್ಯಾದೇಶ ಸಂಖ್ಯೆ: 2) ಈ ಮೂಲಕ ನಿರಸನಗೊಳಿಸಲಾಗಿದೆ.

(2) ಹಾಗೆ ನಿರಸನಗೊಳಿಸಿದ್ದಾಗ್ಯೂ, ಸದರಿ ಅಧ್ಯಾದೇಶದ ಮೂಲಕ ತಿದ್ದುಪಡಿ ಮಾಡಲಾದ ಮೂಲ ಅಧಿನಿಯಮದ ಅಡಿಯಲ್ಲಿ ಮಾಡಲಾದ ಯಾವುದೇ ಕಾರ್ಯ ಅಥವಾ ಕೈಗೊಳ್ಳಲಾದ ಯಾವುದೇ ಕ್ರಮವನ್ನು ಈ ಅಧಿನಿಯಮದ ಮೂಲಕ ತಿದ್ದುಪಡಿ ಮಾಡಲಾದ ಮೂಲ ಅಧಿನಿಯಮದ ಅಡಿಯಲ್ಲಿ ಮಾಡಲಾಗಿದೆ ಅಥವಾ ಕೈಗೊಳ್ಳಲಾಗಿದೆ ಎಂದು ಭಾವಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಜಿ.ಕೆ.ಬೋರೇಗೌಡ**
ಸರ್ಕಾರದ ಕಾರ್ಯದರ್ಶಿ
ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನಾ ಇಲಾಖೆ

## ವಿಶೇಷ ಪತ್ರಿಕೆ

| ಭಾಗ – IV-A | ಬೆಂಗಳೂರು, ಶನಿವಾರ, ಏಪ್ರಿಲ್ ೩, ೨೦೧೦ (ಚೈತ್ರ ೧೩, ಶಕ ವರ್ಷ ೧೯೩೨) | ನಂ. ೩೩೮ |
|---|---|---|

**ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನಾ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ: ಸಂವ್ಯಶಾಇ 34 ಶಾಸನ 2009, ಬೆಂಗಳೂರು, ದಿನಾಂಕ: 3ನೇ ಏಪ್ರಿಲ್, 2010**

**ದಿ ಕರ್ನಾಟಕ ಸ್ಟಾಂಪ್ (ಅಮೆಂಡ್‌ಮೆಂಟ್) ಬಿಲ್, 2010**ಕ್ಕೆ 2010ರ ಮಾರ್ಚ್ ಮೂವತ್ತೊಂದನೇ ದಿನಾಂಕದಂದು ರಾಜ್ಯಪಾಲರ ಒಪ್ಪಿಗೆ ದೊರೆತಿದ್ದು, ಸಾಮಾನ್ಯ ತಿಳುವಳಿಕೆಗಾಗಿ ಇದನ್ನು 2010ರ ಕರ್ನಾಟಕ ಅಧಿನಿಯಮ ಸಂಖ್ಯೆ: 9 ಎಂಬುದಾಗಿ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಿಸಬೇಕೆಂದು ಆದೇಶಿಸಲಾಗಿದೆ.

**KARNATAKA ACT NO. 9 OF 2010**

(First published in the Karnataka Gazette Extra-ordinary on the Third day of April, 2010)

**THE KARNATAKA STAMP (AMENDMENT) ACT, 2010**

(Received the assent of the Governor on the Thirty First day of March, 2010)

An Act further to amend the Karnataka Stamp Act, 1957.

Whereas, it is expedient further to amend the Karnataka Stamp Act, 1957 (Karnataka Act 34 of 1957) for the purposes hereinafter appearing ;

Be it enacted by the Karnataka State Legislature in the sixty first year of the Republic of India, as follows :-

**1. Short title and Commencement.-** (1) This Act may be called the Karnataka Stamp (Amendment) Act, 2010.

(2) It shall come into force at once.

**2. Amendment of Section 9.-** In the Karnataka Stamp Act, 1957 (Karnataka Act No. 34 of 1957) in section 9, in sub-section (1), in clause (a), for the second proviso the following shall be substituted, namely :-

"Provided further that the State Government may, in public interest, by notification, reduce or remit the stamp duty payable on any instrument to be specified therein, executed by or between

Special Economic Zone Developer, Co-Developer, Land Owners, Karnataka Industrial Areas Development Board and Financial Institutions as defined in the State policy for Special Economic Zones – 2009, vide Government Order No. CI 114 SPI 2007, Bangalore, dated: 28-02-2009.

Provided also that the State Government may, in public interest, by notification, reduce or remit, till 31st March 2014, the stamp duty payable on any instrument to be specified therein executed by specified new and existing micro, small, medium enterprises, Large Scale Industrial Units and mega projects including expansion or modernization or diversification projects, as defined in the Karnataka Industrial Policy 2009-14 specified in the Government Order No. CI 233 SPI 2008, Dated: 28-02-2009 or by such key projects of core area as defined in the said policy or specified by State Government from time to time".

By Order and in the name of the Governor of Karnataka
**G.K. BOREGOWDA**
Secretary to Government,
Department of Parliamentary Affairs and Legislation

# ವಿಶೇಷ ಪತ್ರಿಕೆ



| ಭಾಗ – **IV-A** | ಬೆಂಗಳೂರು, ಶನಿವಾರ, ಏಪ್ರಿಲ್ ೩, ೨೦೧೦ (ಚೈತ್ರ ೧೩, ಶಕ ವರ್ಷ ೧೯೩೨) | ನಂ. ೩೩೯ |
|---|---|---|



## ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನಾ ಸಚಿವಾಲಯ

## ಅಧಿಸೂಚನೆ

**ಸಂಖ್ಯೆ: ಸಂವ್ಯಶಾಇ 45 ಶಾಸನ 2009, ಬೆಂಗಳೂರು, ದಿನಾಂಕ: 3ನೇ ಏಪ್ರಿಲ್, 2010**

ಕರ್ನಾಟಕ ಗಡಿ ಅಭಿವೃದ್ಧಿ ಪ್ರಾಧಿಕಾರ ವಿಧೇಯಕ, 2010ಕ್ಕೆ 2010ರ ಏಪ್ರಿಲ್ ತಿಂಗಳ ಒಂದನೇ ದಿನಾಂಕದಂದು ರಾಜ್ಯಪಾಲರ ಒಪ್ಪಿಗೆ ದೊರೆತಿದ್ದು, ಸಾಮಾನ್ಯ ತಿಳುವಳಿಕೆಗಾಗಿ ಇದನ್ನು 2010ರ ಕರ್ನಾಟಕ ಅಧಿನಿಯಮ ಸಂಖ್ಯೆ:12 ಎಂಬುದಾಗಿ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಿಸಬೇಕೆಂದು ಆದೇಶಿಸಲಾಗಿದೆ.

**2010ರ ಕರ್ನಾಟಕ ಅಧಿನಿಯಮ ಸಂಖ್ಯೆ: 12**

(2010ರ ಏಪ್ರಿಲ್ ಮೂರನೇ ದಿನಾಂಕದಂದು ಕರ್ನಾಟಕ ರಾಜ್ಯಪತ್ರದ ವಿಶೇಷ ಸಂಚಿಕೆಯಲ್ಲಿ ಪ್ರಕಟವಾಗಿದೆ)

**ಕರ್ನಾಟಕ ಗಡಿ ಪ್ರದೇಶ ಅಭಿವೃದ್ಧಿ ಪ್ರಾಧಿಕಾರ ಅಧಿನಿಯಮ, 2010**

(2010ರ ಏಪ್ರಿಲ್ ಒಂದನೇ ದಿನಾಂಕದಂದು ರಾಜ್ಯ ಪಾಲರಿಂದ ಅನುಮತಿಯನ್ನು ಪಡೆಯಲಾಗಿದೆ)

ಕರ್ನಾಟಕದ ಗಡಿ ಪ್ರದೇಶದ ಅಭಿವೃದ್ಧಿಗಾಗಿ **ಕರ್ನಾಟಕ ಗಡಿ ಪ್ರದೇಶ ಅಭಿವೃದ್ಧಿ ಪ್ರಾಧಿಕಾರ**ವೊಂದರ ಸ್ಥಾಪನೆಗೆ ಮತ್ತು ಕರ್ನಾಟಕ ಗಡಿ ಅಭಿವೃದ್ಧಿಗೆ ಸಂಬಂಧಪಟ್ಟ ಯೋಜನೆಗಳು ಮತ್ತು ಕಾರ್ಯಕ್ರಮಗಳ ಅನುಷ್ಠಾನ, ಮೇಲ್ವಿಚಾರಣೆ ಮತ್ತು ಮೌಲ್ಯಮಾಪನಕ್ಕೆ ಉಪಬಂಧ ಕಲ್ಪಿಸುವುದಕ್ಕಾಗಿ ಒಂದು ಅಧಿನಿಯಮ.

ಕರ್ನಾಟಕದ ಗಡಿ ಪ್ರದೇಶದ ಅಭಿವೃದ್ಧಿಗಾಗಿ ಕರ್ನಾಟಕ ಗಡಿ ಪ್ರದೇಶ ಅಭಿವೃದ್ಧಿ ಪ್ರಾಧಿಕಾರವೊಂದರ ಸ್ಥಾಪನೆಗೆ ಮತ್ತು ಕರ್ನಾಟಕದ ಗಡಿ ಪ್ರದೇಶದ ಅಭಿವೃದ್ಧಿಗೆ ಸಂಬಂಧಪಟ್ಟ ಯೋಜನೆಗಳು ಮತ್ತು ಕಾರ್ಯಕ್ರಮಗಳ ಅನುಷ್ಠಾನ, ಮೇಲ್ವಿಚಾರಣೆ ಮತ್ತು ಮೌಲ್ಯಮಾಪನಕ್ಕೆ ಉಪಬಂಧ ಕಲ್ಪಿಸುವುದು ಯುಕ್ತವಾಗಿರುವುದರಿಂದ,

ಭಾರತ ಗಣರಾಜ್ಯದ ಅರವತ್ತೊಂದನೇ ವರ್ಷದಲ್ಲಿ ಕರ್ನಾಟಕ ರಾಜ್ಯ ವಿಧಾನಮಂಡಲದಿಂದ ಈ ಮುಂದಿನಂತೆ ಅಧಿನಿಯಮಿತವಾಗತಕ್ಕದ್ದು.

**1. ಸಂಕ್ಷಿಪ್ತ ಹೆಸರು ಮತ್ತು ಪ್ರಾರಂಭ.–** (1) ಈ ಅಧಿನಿಯಮವನ್ನು **ಕರ್ನಾಟಕ ಗಡಿ ಪ್ರದೇಶ ಅಭಿವೃದ್ಧಿ ಪ್ರಾಧಿಕಾರ ಅಧಿನಿಯಮ, 2010** ಎಂದು ಕರೆಯತಕ್ಕದ್ದು.

(2) ಇದು ರಾಜ್ಯ ಸರ್ಕಾರವು ಅಧಿಸೂಚನೆ ಮೂಲಕ ಗೊತ್ತುಪಡಿಸಬಹುದಾದಂಥ ದಿನಾಂಕದಂದು ಜಾರಿಗೆ ಬರತಕ್ಕದ್ದು.

**2. ಪರಿಭಾಷೆಗಳು.–** ಈ ಅಧಿನಿಯಮದಲ್ಲಿ ಸಂದರ್ಭವು ಅನ್ಯಥಾ ಅಗತ್ಯಪಡಿಸಿದ ಹೊರತು,–

(ಎ) **"ಪ್ರಾಧಿಕಾರ"** ಎಂದರೆ, 3 ನೇ ಪ್ರಕರಣದ ಮೇರೆಗೆ ರಚಿಸಲಾದ ಕರ್ನಾಟಕ ಗಡಿ ಪ್ರದೇಶ ಅಭಿವೃದ್ಧಿ ಪ್ರಾಧಿಕಾರ;

(ಬಿ) **"ಗಡಿ ಪ್ರದೇಶ"** ಎಂದರೆ ಅನುಸೂಚಿಯಲ್ಲಿ ನಮೂದಿಸಲಾಗಿರುವ ಕರ್ನಾಟಕ ರಾಜ್ಯದ ಗಡಿ ಭಾಗದಲ್ಲಿರುವ ತಾಲ್ಲೂಕುಗಳು ಹಾಗೂ ಇತರ ಪ್ರದೇಶಗಳು;

(ಸಿ) "ಅಧ್ಯಕ್ಷ" ಎಂದರೆ ಪ್ರಾಧಿಕಾರದ ಅಧ್ಯಕ್ಷ;

(ಡಿ) "ಇಲಾಖೆ" ಎಂದರೆ ಯಾವುದೇ ಕಾನೂನಿನ ಮೂಲಕ ಅಥವಾ ಅದರಡಿಯಲ್ಲಿ ರಾಜ್ಯ ಸರ್ಕಾರದಿಂದ ಸ್ಥಾಪಿತವಾದ ಯಾವುದೇ ನಿಕಾಯ ಅಥವಾ ನಿಗಮ ಅಥವಾ ರಾಜ್ಯ ಸರ್ಕಾರದಿಂದ ಆರ್ಥಿಕ ನೆರವು ಪಡೆಯುತ್ತಿರುವ ಯಾವುದೇ ಸಂಸ್ಥೆ ಅಥವಾ ನಿಕಾಯವೂ ಸೇರಿದಂತೆ ರಾಜ್ಯ ಸರ್ಕಾರದ ಎಲ್ಲಾ ಇಲಾಖೆಗಳು:

(ಇ) "ಸದಸ್ಯ " ಎಂದರೆ ಪ್ರಾಧಿಕಾರದ ಸದಸ್ಯ ;

(ಎಫ್) "ಯೋಜನೆಗಳು ಮತ್ತು ಕಾರ್ಯಕ್ರಮಗಳು" ಎಂದರೆ, ವಿವಿಧ ಇಲಾಖೆಗಳಲ್ಲಿ ಕರ್ನಾಟಕ ಗಡಿ ಪ್ರದೇಶ ಅಭಿವೃದ್ಧಿಗಾಗಿ ಪ್ರಾಧಿಕಾರದಿಂದ ಸಿದ್ಧಪಡಿಸಿದ ವಾರ್ಷಿಕ ಯೋಜನೆಗಳು ಮತ್ತು ಕಾರ್ಯಕ್ರಮಗಳು;

(ಜಿ) "ಕಾರ್ಯದರ್ಶಿ" ಎಂದರೆ ಪ್ರಾಧಿಕಾರದ ಕಾರ್ಯದರ್ಶಿ;

(ಹೆಚ್) "ವಿನಿಯಮಗಳು" ಎಂದರೆ, ಈ ಅಧಿನಿಯಮದ ಮೇರೆಗೆ ರಚಿಸಲಾದ ವಿನಿಯಮಗಳು;

## ಅಧ್ಯಾಯ – II

**3. ಪ್ರಾಧಿಕಾರದ ರಚನೆ :–** (1) ಈ ಅಧಿನಿಯಮವು ಪ್ರಾರಂಭವಾದ ತರುವಾಯ ಸಾಧ್ಯವಾದಷ್ಟು ಬೇಗನೆ, ಈ ಅಧಿನಿಯಮದ ಉದ್ದೇಶಗಳಿಗಾಗಿ ಕರ್ನಾಟಕ ಗಡಿ ಪ್ರದೇಶ ಅಭಿವೃದ್ಧಿ ಪ್ರಾಧಿಕಾರ ಎಂದು ಕರೆಯಲಾಗುವ ಪ್ರಾಧಿಕಾರವನ್ನು ರಚಿಸತಕ್ಕದ್ದು ಮತ್ತು ಅದರ ಕೇಂದ್ರ ಸ್ಥಳವು ಬೆಂಗಳೂರಿನಲ್ಲಿ ಇರತಕ್ಕದ್ದು.

(2) ಪ್ರಾಧಿಕಾರವು ಕರಾರು ಮಾಡಿಕೊಳ್ಳಲು ಶಾಶ್ವತ ಉತ್ತರಾಧಿಕಾರ ಮತ್ತು ಸಾಮಾನ್ಯ ಮೊಹರನ್ನು ಹೊಂದಿರುವ, ಮೇಲೆ ಹೇಳಿದ ಹೆಸರಿನ ಒಂದು ನಿಗಮಿತ ನಿಕಾಯವಾಗಿ ಇರತಕ್ಕದ್ದು ಮತ್ತು ಸದರಿ ಹೆಸರಿನಿಂದ ದಾವೆ ಹೂಡತಕ್ಕದ್ದು ಮತ್ತು ದಾವೆಗೊಳಗಾಗತಕ್ಕದ್ದು.

(3) ಪ್ರಾಧಿಕಾರವು ಈ ಮುಂದಿನ ಸದಸ್ಯರುಗಳನ್ನು ಹೊಂದಿರತಕ್ಕದ್ದು:–

(ಎ) ಗಡಿ ಪ್ರದೇಶ ಅಭಿವೃದ್ಧಿಗಾಗಿ ಕೆಲಸ ಮಾಡಿರುವಂಥ ಸರ್ಕಾರದಿಂದ ನಾಮ ನಿರ್ದೇಶಿತನಾದ ಒಬ್ಬ ವ್ಯಕ್ತಿಯು ಪ್ರಾಧಿಕಾರದ ಅಧ್ಯಕ್ಷರಾಗಿರತಕ್ಕದ್ದು.

(ಬಿ) ಗಡಿ ಪ್ರದೇಶಗಳ ಸಮಸ್ಯೆಗಳ ಅರಿವಿರುವ ಹಾಗೂ ಸಾಹಿತ್ಯ, ಆಡಳಿತ, ಶಿಕ್ಷಣ ಅಥವಾ ಕಾನೂನು ಕ್ಷೇತ್ರಗಳಲ್ಲಿ ವಿಶೇಷ ಜ್ಞಾನ ಅಥವಾ ಪ್ರಾಯೋಗಿಕ ಅನುಭವ ಹೊಂದಿರುವ ರಾಜ್ಯ ಸರ್ಕಾರದಿಂದ ನಾಮ ನಿರ್ದೇಶಿತರಾದ **ಏಳು** ಜನ .... ಸದಸ್ಯರು

(ಸಿ) ಸರ್ಕಾರದ ಕಾರ್ಯದರ್ಶಿ,
ಕನ್ನಡ, ಸಂಸ್ಕೃತಿ ಮತ್ತು ವಾರ್ತಾ ಇಲಾಖೆ .... ಪದನಿಮಿತ್ತ ಸದಸ್ಯರು

(ಡಿ) ಸರ್ಕಾರದ ಕಾರ್ಯದರ್ಶಿ,
ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಇಲಾಖೆ .... ಪದನಿಮಿತ್ತ ಸದಸ್ಯರು

(ಇ) ಸರ್ಕಾರದ ಕಾರ್ಯದರ್ಶಿ, ಗ್ರಾಮೀಣಾಭಿವೃದ್ಧಿ ಮತ್ತು
ಪಂಚಾಯತ್ ರಾಜ್ ಇಲಾಖೆ .... ಪದನಿಮಿತ್ತ ಸದಸ್ಯರು

(ಎಫ್) ಸರ್ಕಾರದ ಪ್ರಧಾನ ಕಾರ್ಯದರ್ಶಿ,
ಕಂದಾಯ ಇಲಾಖೆ .... ಪದನಿಮಿತ್ತ ಸದಸ್ಯರು

(ಜಿ) ನಿರ್ದೇಶಕರು, ಕನ್ನಡ ಮತ್ತು
ಸಂಸ್ಕೃತಿ ಇಲಾಖೆ .... ಪದನಿಮಿತ್ತ ಸದಸ್ಯರು

(ಹೆಚ್) ಅಧ್ಯಕ್ಷರು, ಕನ್ನಡ ಸಾಹಿತ್ಯ ಪರಿಷತ್ತು .... ಪದನಿಮಿತ್ತ ಸದಸ್ಯ

(ಐ) ಅಧ್ಯಕ್ಷರು, ಕರ್ನಾಟಕ ಸಾಹಿತ್ಯ ಅಕಾಡೆಮಿ .... ಪದನಿಮಿತ್ತ ಸದಸ್ಯ

(ಜೆ) ಅಧ್ಯಕ್ಷರು, ಕನ್ನಡ ಅಭಿವೃದ್ಧಿ ಪ್ರಾಧಿಕಾರ .... ಪದನಿಮಿತ್ತ ಸದಸ್ಯ

(ಕೆ) ಪ್ರಾಧಿಕಾರದ ಕಾರ್ಯದರ್ಶಿ .... ಸದಸ್ಯ – ಕಾರ್ಯದರ್ಶಿ

**4. ಪದಾವಧಿ ಮತ್ತು ಸೇವಾ ಷರತ್ತುಗಳು.–** (1) ರಾಜ್ಯ ಸರ್ಕಾರದ ಇಚ್ಛೆಗೆ ಒಳಪಟ್ಟು ರಾಜ್ಯ ಸರ್ಕಾರದಿಂದ ನಾಮನಿರ್ದೇಶಿತರಾದ ಅಧ್ಯಕ್ಷ ಮತ್ತು ಇತರೆ ಅಧಿಕಾರೇತರ ಸದಸ್ಯರುಗಳು ಮೂರು ವರ್ಷಗಳ ಅವಧಿಯವರೆಗೆ ಪದಧಾರಣ ಮಾಡತಕ್ಕದ್ದು. ಸರ್ಕಾರದ ಅಧಿಕಾರಿ ಸದಸ್ಯರಿಗೆ ಸಂಬಂಧಿಸಿದಂತೆ ಇದು ಅನ್ವಯವಾಗತಕ್ಕದಲ್ಲ.

(2) ಅಧ್ಯಕ್ಷರು ಅಥವಾ ಪದನಿಮಿತ್ತ ಸದಸ್ಯರ ಹೊರತಾಗಿ ಯಾವೊಬ್ಬ ಸದಸ್ಯರೂ ಅದಕ್ಕೆ ತಮ್ಮ ಸಹಿ ಹಾಕಿ ರಾಜ್ಯ ಸರ್ಕಾರಕ್ಕೆ ಪತ್ರ ಬರೆದು ತಮ್ಮ ಸದಸ್ಯತ್ವಕ್ಕೆ ರಾಜೀನಾಮೆ ನೀಡಬಹುದು. ಆದರೆ ಅವರ ರಾಜೀನಾಮೆಯು ಅಂಗೀಕಾರವಾಗುವವರೆಗೆ ಹುದ್ದೆಯಲ್ಲಿ ಮುಂದುವರೆಯತಕ್ಕದ್ದು

(3) ಅಧ್ಯಕ್ಷರ ಅಥವಾ ಯಾವೊಬ್ಬ ಸದಸ್ಯರ ಹುದ್ದೆಗಳಲ್ಲಿ ಉಂಟಾಗುವ ಆಕಸ್ಮಿಕ ಖಾಲಿ ಸ್ಥಾನಕ್ಕೆ ರಾಜ್ಯ ಸರ್ಕಾರವು ಒಬ್ಬ ವ್ಯಕ್ತಿಯನ್ನು ಸಂದರ್ಭಾನುಸಾರ ಅಧ್ಯಕ್ಷರಾಗಿ ಅಥವಾ ಸದಸ್ಯರಾಗಿ ನಾಮ ನಿರ್ದೇಶನ ಮಾಡುವ ಮೂಲಕ ಭರ್ತಿ ಮಾಡತಕ್ಕದ್ದು ಮತ್ತು ಹಾಗೆ ನಾಮನಿರ್ದೇಶಿತರಾದ ಅಧ್ಯಕ್ಷ ಅಥವಾ ಸದಸ್ಯರು ತನಗಿಂತ ಮೊದಲಿದ್ದ ವ್ಯಕ್ತಿಯ ಪದಾವಧಿಯಲ್ಲಿ ಪೂರ್ಣವಾಗದೆ ಉಳಿದ ಭಾಗದವರೆಗೆ ಅಧಿಕಾರವನ್ನು ಹೊಂದಿರತಕ್ಕದ್ದು.

(4) ಅಧ್ಯಕ್ಷರು ಮತ್ತು ಇತರ ಸದಸ್ಯರು ನಿಯಮಿಸಬಹುದಾದಂಥ ಭತ್ಯೆಗಳನ್ನು ಪಡೆಯತಕ್ಕದ್ದು.

(5) ಅಧ್ಯಕ್ಷರು ಮತ್ತು ಇತರ ಸದಸ್ಯರುಗಳಿಗೆ ಸಂದಾಯ ಮಾಡಬೇಕಾದ ಭತ್ಯೆಗಳನ್ನು ಪ್ರಾಧಿಕಾರದ ನಿಧಿಯಿಂದ ಭರಿಸತಕ್ಕದ್ದು.

(6) ಪ್ರಾಧಿಕಾರದ ಯಾವುದೇ ಕ್ರಮ ಅಥವಾ ವ್ಯವಹರಣೆಯು ಪ್ರಾಧಿಕಾರದಲ್ಲಿ ಯಾವುದೇ ಖಾಲಿಸ್ಥಾನವಿರುವುದರಿಂದ ಅಥವಾ ಪ್ರಾಧಿಕಾರದ ರಚನೆಯಲ್ಲಿ ದೋಷವಿದೆ ಎಂಬ ಕಾರಣ ಮಾತ್ರದಿಂದಲೇ ಅಮಾನ್ಯವಾಗತಕ್ಕದ್ದಲ್ಲ.

**5. ಹುದ್ದೆಯ ಸದಸ್ಯತ್ವಕ್ಕೆ ಅನರ್ಹತೆ.–** (1) ಒಬ್ಬ ವ್ಯಕ್ತಿಯು, ಅವನು, –

(ಎ) ರಾಜ್ಯ ಸರ್ಕಾರದ ಅಭಿಪ್ರಾಯದಲ್ಲಿ ನೈತಿಕ ಅಧ:ಪತನವನ್ನೊಳಗೊಳ್ಳುವ ಒಂದು ಅಪರಾಧಕ್ಕಾಗಿ ಅಪರಾಧ ನಿರ್ಣಿತನಾಗಿದ್ದು ಕಾರಾವಾಸದ ಶಿಕ್ಷೆಗೆ ಗುರಿಯಾಗಿದ್ದರೆ, ಅಥವಾ

(ಬಿ) ಅಸ್ವಸ್ಥಚಿತ್ತದವನಾಗಿದ್ದು, ಹಾಗೆಂದು ಒಂದು ಸಕ್ಷಮ ನ್ಯಾಯಾಲಯದಿಂದ ಘೋಷಿತನಾಗಿದ್ದರೆ : ಅಥವಾ

(ಸಿ) ಅವಿಮುಕ್ತ ದಿವಾಳಿಯಾಗಿದ್ದರೆ : ಅಥವಾ

(ಡಿ) ಕೇಂದ್ರ ಸರ್ಕಾರ ಅಥವಾ ರಾಜ್ಯ ಸರ್ಕಾರ ಅಥವಾ ಕೇಂದ್ರ ಸರ್ಕಾರ ಅಥವಾ ರಾಜ್ಯ ಸರ್ಕಾರದ ಒಡೆತನ ಅಥವಾ ನಿಯಂತ್ರಣದಲ್ಲಿರುವ ಒಂದು ನಿಕಾಯ ಅಥವಾ ನಿಗಮದ ಸೇವೆಯಿಂದ ತೆಗೆದುಹಾಕಲಾದವನಾಗಿದ್ದರೆ ಅಥವಾ ವಜಾ ಆದವನಾಗಿದ್ದರೆ : ಅಥವಾ

(ಇ) ಪ್ರಾಧಿಕಾರದ ಆದೇಶದಿಂದ ಮಾಡಲಾದ ಯಾವುದೇ ಕಾರ್ಯದಲ್ಲಿ ಅಥವಾ ಪ್ರಾಧಿಕಾರದೊಡನೆ ಅಥವಾ ಅದರ ಮೇರೆಗೆ ಅಥವಾ ಅದರ ಮೂಲಕ ಅಥವಾ ಅದರ ಪರವಾಗಿ ಯಾವುದೇ ಕರಾರು ಅಥವಾ ನಿಯೋಜನೆಯಲ್ಲಿ ಸ್ವತ: ಅವನು ಅಥವಾ ಅವನ ಪಾಲುದಾರನು ಪ್ರತ್ಯಕ್ಷವಾಗಿ ಅಥವಾ ಪರೋಕ್ಷವಾಗಿ ಯಾವುದೇ ಷೇರನ್ನು ಅಥವಾ ಹಿತಾಸಕ್ತಿಯನ್ನು ಹೊಂದಿದ್ದರೆ:

(ಎಫ್) ಪ್ರಾಧಿಕಾರದ ಪರವಾಗಿ ವೇತನ ಪಡೆಯುವ ನ್ಯಾಯವಾದಿಯಾಗಿ ನಿಯೋಜಿತನಾದರೆ ಅಥವಾ ಪ್ರಾಧಿಕಾರದ ವಿರುದ್ಧವಾಗಿ ನ್ಯಾಯವಾದಿಯ ನಿಯೋಜನೆಯನ್ನು ಒಪ್ಪಿಕೊಂಡಿದ್ದರೆ,

– ಸದಸ್ಯನಾಗಿ ನೇಮಿತನಾಗುವುದಕ್ಕೆ ಮತ್ತು ಸದಸ್ಯನಾಗುವುದಕ್ಕೆ ಅನರ್ಹನಾಗಿರತಕ್ಕದ್ದು.

(2) ಯಾವೊಬ್ಬ ವ್ಯಕ್ತಿಯನ್ನು, ಆತನು ಪ್ರಾಧಿಕಾರದ ವ್ಯವಹಾರಗಳಿಗೆ ಸಂಬಂಧಪಟ್ಟ ಯಾವುದೇ ಜಾಹೀರಾತನ್ನು ಪ್ರಕಟಿಸಲಾಗಿರುವ ಯಾವುದೇ ವೃತ್ತ ಪತ್ರಿಕೆಯಲ್ಲಿ ಷೇರು ಅಥವಾ ಹಿತಾಸಕ್ತಿಯನ್ನು ಹೊಂದಿದ್ದಾನೆ ಎಂಬ ಕಾರಣ ಮಾತ್ರದಿಂದಲೇ ಉಪಪ್ರಕರಣ (1)ರ (ಇ) ಖಂಡದ ಅಡಿಯಲ್ಲಿ ಅನರ್ಹಗೊಳಿಸತಕ್ಕದ್ದಲ್ಲ ಅಥವಾ ಸದರಿ ಖಂಡದ ಅರ್ಥವ್ಯಾಪ್ತಿಯಲ್ಲಿ ಯಾವುದೇ ಕರಾರು ಅಥವಾ ನಿಯೋಜನೆಯಲ್ಲಿ ಷೇರು ಅಥವಾ ಹಿತಾಸಕ್ತಿ ಹೊಂದಿರುವನೆಂದು ಭಾವಿಸತಕ್ಕದ್ದಲ್ಲ.

**6. ಸದಸ್ಯನನ್ನು ತೆಗೆದುಹಾಕುವುದು.–** (1) ರಾಜ್ಯ ಸರ್ಕಾರವು ಅಧ್ಯಕ್ಷ ಅಥವಾ ಇತರ ಸದಸ್ಯನನ್ನು ಅವನು,–

(ಎ) 5ನೇ ಪ್ರಕರಣದಲ್ಲಿ ಹೇಳಲಾದ ಯಾವುದೇ ಅನರ್ಹತೆಗಳಿಗೆ ಒಳಪಟ್ಟರೆ:

ಪರಂತು, ಅಧ್ಯಕ್ಷ ಅಥವಾ ಸದಸ್ಯನನ್ನು ಪ್ರಸ್ತಾವದ ವಿರುದ್ಧ ತನ್ನ ಮನವಿಯನ್ನು ಸಲ್ಲಿಸಲು ಅವನಿಗೆ ಒಂದು ಅವಕಾಶವನ್ನು ಕೊಟ್ಟ ಹೊರತು, ಅವನು ಸದರಿ ಪ್ರಕರಣದ (1)ನೇ ಉಪ–ಪ್ರಕರಣದ (ಇ) ಖಂಡದಲ್ಲಿ ಹೇಳಲಾದ ಅನರ್ಹತೆಗೆ ಒಳಗಾಗಿದ್ದಾನೆಂಬ ಕಾರಣದ ಮೇಲೆ ತೆಗೆದುಹಾಕತಕ್ಕದ್ದಲ್ಲ ; ಅಥವಾ

(ಬಿ) ಅವನು ಕಾರ್ಯವನ್ನು ನಿರ್ವಹಿಸಲು ನಿರಾಕರಿಸಿದರೆ ಅಥವಾ ಕಾರ್ಯವನ್ನು ನಿರ್ವಹಿಸಲು ಅಸಮರ್ಥನಾದರೆ ; ಅಥವಾ

(ಸಿ) ಗೈರು ಹಾಜರಾಗಲು ಪ್ರಾಧಿಕಾರದಿಂದ ಅನುಮತಿ ಪಡೆಯದೆ ಪ್ರಾಧಿಕಾರದ ಮೂರು ನಿರಂತರ ಸಭೆಗಳಿಗೆ ಗೈರುಹಾಜರಾದರೆ : ಅಥವಾ

(ಡಿ) ರಾಜ್ಯ ಸರ್ಕಾರದ ಅಭಿಪ್ರಾಯದಲ್ಲಿ ತನ್ನ ಸ್ಥಾನವನ್ನು ಅವನು ದುರುಪಯೋಗ ಪಡಿಸಿಕೊಂಡಿದ್ದು, ಅವನನ್ನು ಆ ಪದದಲ್ಲಿ ಮುಂದುವರಿಸಿದರೆ ಸಾರ್ವಜನಿಕ ಹಿತಾಸಕ್ತಿಗೆ ಬಾಧಕ ಉಂಟಾಗುವುದೆಂದು ಕಂಡುಬಂದರೆ,

– ಸದಸ್ಯತ್ವದಿಂದ ಅವನನ್ನು ತೆಗೆದು ಹಾಕತಕ್ಕದ್ದು:

ಪರಂತು ಯಾವೊಬ್ಬ ಸದಸ್ಯರನ್ನು ಅವರಿಗೆ ಅಂಥ ಪ್ರಸ್ತಾವದ ವಿರುದ್ಧ ತನ್ನ ಮನವಿಯನ್ನು ಸಲ್ಲಿಸಲು ಒಂದು ಅವಕಾಶವನ್ನು ಕೊಟ್ಟ ಹೊರತು, ಈ ಖಂಡದ ಮೇರೆಗೆ ತೆಗೆದುಹಾಕತಕ್ಕದ್ದಲ್ಲ.

7. **ಕಾರ್ಯದರ್ಶಿ.–** (1) ರಾಜ್ಯ ಸರ್ಕಾರವು, ಗ್ರೂಪ್ – ಎ ದರ್ಜೆಗೆ ಕಡಿಮೆಯಿಲ್ಲದ ಒಬ್ಬ ಅಧಿಕಾರಿಯನ್ನು ಪ್ರಾಧಿಕಾರದ ಕಾರ್ಯದರ್ಶಿಯಾಗಿ ನೇಮಕ ಮಾಡತಕ್ಕದ್ದು. ಕಾರ್ಯದರ್ಶಿಯು ರಾಜ್ಯ ಸರ್ಕಾರವು ಆಗಿಂದಾಗ್ಗೆ ನಿರ್ಧರಿಸಬಹುದಾದಂಥ ವೇತನ ಮತ್ತು ಇತರ ಭತ್ಯೆಗಳನ್ನು ಪಡೆಯತಕ್ಕದ್ದು.

(2) ರಾಜ್ಯ ಸರ್ಕಾರವು, ಕಾಲಕಾಲಕ್ಕೆ ಕಾರ್ಯದರ್ಶಿಯವರಿಗೆ ರಜೆಗಳನ್ನು ಮಂಜೂರು ಮಾಡಬಹುದು.

(3) ಕಾರ್ಯದರ್ಶಿಯು ಪ್ರಾಧಿಕಾರದ ಮುಖ್ಯ ಕಾರ್ಯನಿರ್ವಾಹಕರಾಗಿರತಕ್ಕದ್ದು;

(ಎ) ಪ್ರಾಧಿಕಾರದಿಂದ ಅನುಮೋದಿತವಾದ ಯೋಜನೆಗಳು ಮತ್ತು ಕಾರ್ಯಕ್ರಮಗಳನ್ನು ಕಾರ್ಯಗತಗೊಳಿಸಲು ಜವಾಬ್ದಾರನಾಗಿರತಕ್ಕದ್ದು;

(ಬಿ) ಪ್ರಾಧಿಕಾರದ ನಿಧಿಯನ್ನು ನಿರ್ವಹಿಸತಕ್ಕದ್ದು;

(ಸಿ) ಪ್ರಾಧಿಕಾರದ ಲೆಕ್ಕಪತ್ರಗಳನ್ನು ಇಟ್ಟುಕೊಂಡು ಬರುವಂತೆ ಮಾಡತಕ್ಕದ್ದು ;

(ಡಿ) ಈ ಅಧಿನಿಯಮದ ಅಥವಾ ತತ್ಕಾಲದಲ್ಲಿ ಜಾರಿಯಲ್ಲಿರುವ ಯಾವುದೇ ಇತರ ಕಾನೂನಿನ ಮೂಲಕ ಅಥವಾ ಅದರ ಮೇರೆಗೆ ಅವನಿಗೆ ಪ್ರದಾನ ಮಾಡಲಾಗಿರುವಂಥ ಇತರ ಪ್ರಕಾರ್ಯಗಳನ್ನು ನೆರವೇರಿಸತಕ್ಕದ್ದು ; ಮತ್ತು

(ಇ) ಅಧ್ಯಕ್ಷರು ತಪಾಸಣೆ ಮಾಡುವ ಸಮಯದಲ್ಲಿ, ಕಚೇರಿಯ ದಾಖಲೆಗಳನ್ನು ಹಾಜರುಪಡಿಸಲು ಜವಾಬ್ದಾರನಾಗಿರತಕ್ಕದ್ದು.

8. **ಪ್ರಾಧಿಕಾರದ ಅಧಿಕಾರಿಗಳು ಮತ್ತು ಅವರ ಸೇವಾ ಷರತ್ತುಗಳು.–** (1) ನಿಯಮಿಸಬಹುದಾದಂಥ ನಿಯಮಗಳಿಗೊಳಪಟ್ಟು ರಾಜ್ಯ ಸರ್ಕಾರವು ಅಥವಾ ರಾಜ್ಯ ಸರ್ಕಾರವು ಪ್ರಾಧಿಕೃತಗೊಳಿಸಬಹುದಾದಂಥ ಇತರ ಅಧಿಕಾರಿಯು ಪ್ರಾಧಿಕಾರವು ಅದರ ಪ್ರಕಾರ್ಯಗಳನ್ನು ಪರಿಣಾಮಕಾರಿಯಾಗಿ ನಿರ್ವಹಿಸಲು ಅವಶ್ಯವೆಂದು ಭಾವಿಸಬಹುದಾದಂಥ ಇತರ ಅಧಿಕಾರಿಗಳನ್ನು ಮತ್ತು ನೌಕರರನ್ನು ನೇಮಕ ಮಾಡಬಹುದು ಅಥವಾ ಪ್ರತಿನಿಯೋಜಿಸಬಹುದು.

(2) ಮೇಲೆ ನಿರ್ದಿಷ್ಟಪಡಿಸಲಾದ ಅಧಿಕಾರಿಗಳ ಮತ್ತು ನೌಕರರ ಆಯ್ಕೆ ಹಾಗೂ ಸೇವಾ ನಿಬಂಧನೆಗಳು ಮತ್ತು ಷರತ್ತುಗಳು ನಿಯಮಿಸಬಹುದಾದಂಥವುಗಳಾಗಿರತಕ್ಕದ್ದು.

9. **ಪ್ರಾಧಿಕಾರದ ಸಭೆಗಳು.– (1)** ಪ್ರಾಧಿಕಾರದ ಸಭೆಗಳನ್ನು ಅಧ್ಯಕ್ಷರು ಅಥವಾ ಅಧ್ಯಕ್ಷರ ಪೂರ್ವಾನುಮತಿ ಪಡೆದು ಕಾರ್ಯದರ್ಶಿಯು ಕರೆಯತಕ್ಕದ್ದು ಮತ್ತು ಅವು ಪ್ರಾಧಿಕಾರದ ಅಧಿಕಾರ ವ್ಯಾಪ್ತಿಯೊಳಗೆ ಬರುವ ಯಾವುದೇ ಸ್ಥಳದಲ್ಲಿ ನಡೆಸತಕ್ಕದ್ದು.

(2) ಪ್ರಾಧಿಕಾರವು ಕಡೇ ಪಕ್ಷ ಎರಡು ತಿಂಗಳಿಗೊಮ್ಮೆಯಾದರೂ ಸಭೆ ಸೇರತಕ್ಕದ್ದು.

(3) ಅಧ್ಯಕ್ಷರು ವಿಶೇಷ ಸಭೆಯನ್ನು ಕರೆಯುವುದು ಅವಶ್ಯವೆಂದು ಭಾವಿಸಿದರೆ ಅಧ್ಯಕ್ಷರು ಅಥವಾ ಅಧ್ಯಕ್ಷರ ಪೂರ್ವಾನುಮತಿ ಪಡೆದು ಕಾರ್ಯದರ್ಶಿಯು ಅಂಥ ಸಭೆಯನ್ನು ಕರೆಯಬಹುದು.

(4) ಪ್ರಾಧಿಕಾರವು ತನ್ನ ಸಭೆಗಳಲ್ಲಿ ಕಾರ್ಯಕಲಾಪದ ಸಂಬಂಧದಲ್ಲಿ ವಿನಿಯಮಗಳ ಮೂಲಕ ಉಪಬಂಧ ಕಲ್ಪಿಸಬಹುದಾದಂಥ ಕಾರ್ಯವಿಧಾನದ ನಿಯಮಗಳನ್ನು ಅನುಸರಿಸತಕ್ಕದ್ದು.

(5) ಅಧ್ಯಕ್ಷರು ಪ್ರತಿಯೊಂದು ಸಭೆಯ ಅಧ್ಯಕ್ಷತೆ ವಹಿಸತಕ್ಕದ್ದು ಮತ್ತು ಯಾವುದೇ ಕಾರಣದಿಂದ ಅಧ್ಯಕ್ಷರಿಗೆ ಯಾವುದೇ ಸಭೆಯಲ್ಲಿ ಭಾಗವಹಿಸಲು ಸಾಧ್ಯವಾಗದಿದ್ದರೆ, ಸಭೆಯಲ್ಲಿ ಹಾಜರಿದ್ದ ಸದಸ್ಯರ ಪೈಕಿ ಆರಿಸಲ್ಪಟ್ಟ ಯಾವುದೇ ಇತರ ಸದಸ್ಯರು ಸಭೆಯಲ್ಲಿ ಅಧ್ಯಕ್ಷತೆ ವಹಿಸತಕ್ಕದು.

(6) ಗಣಪೂರ್ತಿ (ಕೋರಂ) ಆಗಲು ಒಂಬತ್ತು ಜನ ಸದಸ್ಯರಿರತಕ್ಕದ್ದು.

**10. ವ್ಯವಹರಣೆಗಳು ಸರಿಯಾಗಿವೆ ಮತ್ತು ಸಿಂಧುವಾಗಿವೆ ಎಂಬ ಪೂರ್ವಭಾವನೆ.–** ಪ್ರಾಧಿಕಾರದ ಯಾವುದೇ ಕ್ರಮ ಅಥವಾ ವ್ಯವಹರಣೆ ಅನ್ಯಥಾ ಈ ಅಧಿನಿಯಮದ ಉಪಬಂಧಗಳಿಗೆ ಅನುಸಾರವಾಗಿ ಇರುವಾಗ ಅಂಥ ಕ್ರಮ ಅಥವಾ ವ್ಯವಹರಣೆಯು ಅಧ್ಯಕ್ಷರು ಅಥವಾ ಸದಸ್ಯನಾಗಿ ಕೆಲಸ ಮಾಡುತ್ತಿರುವ ಯಾವುದೇ ವ್ಯಕ್ತಿಯ ಅನರ್ಹತೆಯ ಕಾರಣದಿಂದ ಅಥವಾ ನೇಮಕಾತಿಯಲ್ಲಿನ ದೋಷದ ಕಾರಣದಿಂದ ದೋಷಪೂರಿತವಾಗುತ್ತದೆ ಎಂದು ಭಾವಿಸತಕ್ಕದ್ದಲ್ಲ.

**11. ಉಪ ಸಮಿತಿ.–** ಪ್ರಾಧಿಕಾರವು ಯಾವುದೇ ನಿರ್ದಿಷ್ಟ ಉದ್ದೇಶಕ್ಕಾಗಿ ತನ್ನ ಸದಸ್ಯರ ಪೈಕಿಯಿಂದ ಆರು ಜನರನ್ನು ಮೀರದಷ್ಟು ಸಂಖ್ಯೆಯ ಸದಸ್ಯರಿರುವ ಒಂದು ಉಪ ಸಮಿತಿಯನ್ನು ರಚಿಸಬಹುದು. ಪ್ರಾಧಿಕಾರದ ಅಧ್ಯಕ್ಷರು ಈ ಉಪಸಮಿತಿಯ ಅಧ್ಯಕ್ಷರು ಸಹ ಆಗಿರತಕ್ಕದ್ದು.

**12. ಉಪ ಸಮಿತಿಯ ಅಧಿಕಾರಗಳು ಮತ್ತು ಕರ್ತವ್ಯಗಳು.– (1)**ಉಪಸಮಿತಿಯು, ಪ್ರಾಧಿಕಾರವು ತನಗೆ ಪ್ರತ್ಯಾಯೋಜಿಸಲಾದಂಥ ಪ್ರಾಧಿಕಾರದ ಅಧಿಕಾರಗಳನ್ನು ಚಲಾಯಿಸತಕ್ಕದ್ದು ಮತ್ತು ಕರ್ತವ್ಯಗಳನ್ನು ನಿರ್ವಹಿಸತಕ್ಕದ್ದು.

(2) ಉಪ ಸಮಿತಿಯು ಕಡೇಪಕ್ಷ ತಿಂಗಳಿಗೊಮ್ಮೆಯಾದರೂ ಸಭೆ ಸೇರತಕ್ಕದ್ದು.

(3) ಉಪಸಮಿತಿಯು, ಪ್ರಾಧಿಕಾರದ ನಿರ್ಧಾರಗಳನ್ನು ಸೂಕ್ತವಾಗಿ ಕಾರ್ಯಗತ ಗೊಳಿಸಲಾಗುತ್ತಿದೆಯೇ ಎಂಬ ಬಗ್ಗೆ ಪರಿಶೀಲಿಸಿ ನೋಡಲು ತುರ್ತು ಸ್ವರೂಪದ ವಿಷಯಗಳ ಬಗ್ಗೆ ಅಗತ್ಯ ನಿರ್ಧಾರ ಕೈಗೊಳ್ಳತಕ್ಕದ್ದು ಮತ್ತು ರಾಜ್ಯ ಸರ್ಕಾರವು ತುರ್ತು ವಿಷಯದ ಬಗ್ಗೆ ಕ್ರಮಕೈಗೊಳ್ಳಲು ಸಲಹೆ ನೀಡತಕ್ಕದ್ದು.

(4) ಉಪ ಸಮಿತಿಯು, ತನ್ನ ಸಭೆಗಳಲ್ಲಿ ಕಾರ್ಯನಿರ್ವಹಣೆಯ ಸಂಬಂಧದಲ್ಲಿ, ವಿನಿಯಮಗಳ ಮೂಲಕ ಉಪಬಂಧಿಸಬಹುದಾದಂಥ ಕಾರ್ಯವಿಧಾನದ ನಿಯಮಗಳನ್ನು ಅನುಸರಿಸತಕ್ಕದ್ದು.

**13. ತಜ್ಞರ ಸೇವೆಗಳನ್ನು ಪಡೆದುಕೊಳ್ಳುವುದು.–** (1) ಈ ಅಧಿನಿಯಮದ ಉದ್ದೇಶಗಳನ್ನು ನೆರವೇರಿಸುವ ಸಲುವಾಗಿ, ಪ್ರಾಧಿಕಾರವು ಅವಶ್ಯವಾದರೆ, ತಾನು ಸೂಕ್ತವೆಂದು ಭಾವಿಸಬಹುದಾದಂಥ ವಿಧಾನದಲ್ಲಿ ತಜ್ಞರ ಸೇವೆಗಳನ್ನು ಅಥವಾ ನೆರವನ್ನು ಪಡೆದುಕೊಳ್ಳಬಹುದು.

(2) ಅಂಥ ತಜ್ಞರು ಸಲ್ಲಿಸಿದ ಸೇವೆ ಅಥವಾ ನೆರವಿನ ಬಗ್ಗೆ ಸಂದಾಯಮಾಡತಕ್ಕ ಗೌರವಧನ ಮತ್ತು ಭತ್ಯೆಗಳು, ನಿಯಮಗಳಲ್ಲಿ ಗೊತ್ತುಪಡಿಸಬಹುದಾದಂಥ ಮೊಬಲಾಗಿರತಕ್ಕದ್ದು.

## ಅಧ್ಯಾಯ – III

**14. ಯೋಜನೆಗಳನ್ನು ಮತ್ತು ಕಾರ್ಯಕ್ರಮಗಳನ್ನು ಸಿದ್ಧಪಡಿಸುವುದು.–** (1) ಪ್ರಾಧಿಕಾರವು, ಪ್ರತಿವರ್ಷವೂ, ಗಡಿ ಪ್ರದೇಶಗಳ ಅಭಿವೃದ್ಧಿಗಾಗಿ ಯೋಜನೆಗಳನ್ನು ಮತ್ತು ಕಾರ್ಯಕ್ರಮಗಳನ್ನು ಸಿದ್ಧಪಡಿಸತಕ್ಕದ್ದು ಮತ್ತು ಅದನ್ನು ರಾಜ್ಯ ಸರ್ಕಾರಕ್ಕೆ ಅನುಮೋದನೆಗಾಗಿ ಕಳುಹಿಸತಕ್ಕದ್ದು. ರಾಜ್ಯ ಸರ್ಕಾರವು ಯೋಜನೆಗಳು ಮತ್ತು ಕಾರ್ಯಕ್ರಮಗಳನ್ನು ಮಾರ್ಪಾಟನ್ನು ಮಾಡಿ ಅಥವಾ ಮಾರ್ಪಾಟಿಲ್ಲದೆ ಅನುಮೋದಿಸಬಹುದು.

**15. ಪ್ರಾಧಿಕಾರದ ಪ್ರಕಾರ್ಯಗಳು.–** ಪ್ರಾಧಿಕಾರವು, ಕೆಳಕಂಡ ಪ್ರಕಾರ್ಯಗಳನ್ನು ನಿರ್ವಹಿಸತಕ್ಕದ್ದು:–

(1) ಗಡಿ ಪ್ರದೇಶದಲ್ಲಿ ಅಭಿವೃದ್ಧಿ ಕಾರ್ಯಗಳ ಅನುಷ್ಠಾನ, ಮೇಲ್ವಿಚಾರಣೆ ಮತ್ತು ಮೌಲ್ಯಮಾಪನ ಮಾಡುವುದು. ಇದಲ್ಲದೆ, ನೆರೆಹೊರೆಯ ರಾಜ್ಯದ ಗಡಿ ಭಾಗಗಳಲ್ಲಿ ಕನ್ನಡ ಮಾತನಾಡುವ ಜನರ ಶೈಕ್ಷಣಿಕ, ಸಾಮಾಜಿಕ ಹಾಗೂ ಸಾಂಸ್ಕೃತಿಕ ಸ್ಥಿತಿಯನ್ನು ಸುಧಾರಿಸುವುದು.

(2) ರಾಜ್ಯದ ಹೊರಭಾಗದ ಗಡಿಯಲ್ಲಿ ಅವಶ್ಯವಿರುವಷ್ಟು ಕನ್ನಡ ಶಾಲೆಗಳನ್ನು ತೆರೆಯಲು ಸಹಾಯ ಒದಗಿಸುವುದು. ನೆರೆ ರಾಜ್ಯದವರು ಕನ್ನಡ ಶಾಲೆಗಳನ್ನು ಮುಚ್ಚಿರುವಂತಹ ಗ್ರಾಮಗಳಲ್ಲಿ ಕನ್ನಡಿಗರಿಗೆ ಕನ್ನಡ ಮಾಧ್ಯಮದ ಮೂಲಕ ಶಿಕ್ಷಣ ನೀಡಲು ಕನ್ನಡ ಮಾಧ್ಯಮದ ಶಾಲೆಗಳನ್ನು ತೆರೆಯುವುದು. ಶಾಲಾ ಕಟ್ಟಡಗಳನ್ನು ನಿರ್ಮಾಣ ಮಾಡುವುದು.

(3) ಗಡಿ ಪ್ರದೇಶದಲ್ಲಿ ಕನ್ನಡದಲ್ಲಿ ಶಿಕ್ಷಣ ನೀಡುವುದಕ್ಕೆ ಅವಶ್ಯವಾದ ಶಿಕ್ಷಕರನ್ನು ನೇಮಕ ಮಾಡಲು ಸಹಾಯ ಮಾಡುವುದು. ಕನ್ನಡದಲ್ಲಿ ಕಲಿಯುವ ವಿದ್ಯಾರ್ಥಿಗಳಿಗೆ ಕನ್ನಡ ಮಾಧ್ಯಮದ ಪಠ್ಯ ಪುಸ್ತಕಗಳನ್ನು ಕಾಲಕಾಲಕ್ಕೆ ಒದಗಿಸುವುದು.

(4) ಕನ್ನಡಿಗರಿಗೆ–ಕನ್ನಡ ಭಾಷೆಯಲ್ಲಿ ದೈನಂದಿನ ಬೆಳವಣಿಗೆಗಳ ಬಗ್ಗೆ ತಿಳಿದುಕೊಳ್ಳಲು –ಕನ್ನಡ ವೃತ್ತ ಪತ್ರಿಕೆಗಳು, ಮಾಸ ಪತ್ರಿಕೆಗಳು, ವಾರ ಪತ್ರಿಕೆಗಳು ಆ ಭಾಗಗಳಲ್ಲಿ ದೊರಕುವಂತೆ ಮಾಡಲು ಗ್ರಂಥಾಲಯಗಳನ್ನು ಗಡಿ ಭಾಗಗಳಲ್ಲಿ ಪ್ರಾರಂಭ ಮಾಡುವುದು.

(5) ಕನ್ನಡ ಭಾಷೆ ಬೆಳವಣಿಗೆ ದೃಷ್ಟಿಯಿಂದ ನೋಂದಣಿಯಾದ ಕನ್ನಡಪರ ಸಂಘಟನೆಗಳಿಗೆ – ವಾರ್ಷಿಕವಾಗಿ ಭಾಷಾ ಚಟುವಟಿಕೆಗಳನ್ನು ನಡೆಸಲು ಅನುದಾನ ನೀಡುವುದು.

(6) ಗಡಿ ಪ್ರದೇಶದಲ್ಲಿ ಕನ್ನಡಪರ ಸಂಘಟನೆಗಳು ಕನ್ನಡಪರವಾಗಿ ಕ್ರಿಯಾಶೀಲರಾಗಿ ಕೆಲಸ ಮಾಡುವಂತೆ ಮಾಡುವ ಉದ್ದೇಶದಿಂದ ಹೆಚ್ಚು ಹೆಚ್ಚು ಸಂಘಗಳನ್ನು ಗಡಿ ಭಾಗಗಳಲ್ಲಿ ಕಟ್ಟಲು ಮತ್ತು ಈ ಸಂಘಟನೆಗಳು ಭಾಷಾ ಉಪನ್ಯಾಸ ಮಾಲಿಕೆಗಳನ್ನು ಸಂಘಟಿಸಲು ಸಹಾಯ ಮಾಡುವ ದೃಷ್ಟಿಯಿಂದ ಪ್ರಚಾರ ಉಪನ್ಯಾಸ ಕಾರ್ಯಕ್ರಮಗಳನ್ನು ನಡೆಸುವುದು.

(7) ಸಾಂಸ್ಕೃತಿಕ ಚಟುವಟಿಕೆಗಳನ್ನು ಗಡಿ ಪ್ರದೇಶಗಳಲ್ಲಿ ಹಮ್ಮಿಕೊಂಡು, ಗಡಿ ಕನ್ನಡಿಗರ ಸಾಂಸ್ಕೃತಿಕ ಅವಶ್ಯಕತೆಗಳನ್ನು ಪೂರೈಸುವುದು.

(8) ಕನ್ನಡ ಸಾಹಿತ್ಯ, ಚಲನಚಿತ್ರ, ನಾಟಕ, ಜಾನಪದ, ನೃತ್ಯ, ಯಕ್ಷಗಾನ, ಲಾವಣಿ, ಬಯಲಾಟ, ತೊಗಲುಬೊಂಬೆ ಆಟ, ಹರಿಕಥೆ, ಸಂಗೀತ, ಇತ್ಯಾದಿ ಕಲೆಗಳು ನಶಿಸಿಹೋಗದಂತೆ ಪ್ರದರ್ಶನಕ್ಕೆ ಸೂಕ್ತವಾದ ವೇದಿಕೆಗಳನ್ನು ಕಲ್ಪಿಸುವುದು. ರಾಜ್ಯದ ಗಡಿ ಭಾಗದ ತಾಲ್ಲೂಕುಗಳು ಹಾಗೂ ಗ್ರಾಮಗಳ ಕನ್ನಡಿಗರು ಹೊರ ರಾಜ್ಯಗಳ ಕನ್ನಡಿಗರಿಗೆ ಈ ಕಲೆಗಳನ್ನು ಪ್ರದರ್ಶಿಸಲು ಸಾಂಸ್ಕೃತಿಕ ಭವನಗಳನ್ನು ಕಟ್ಟುವುದು.

(9) ಗಡಿ ಪ್ರದೇಶ ಹಾಗೂ ಹೊರನಾಡು ಉತ್ಸವಗಳನ್ನು ಹಮ್ಮಿಕೊಳ್ಳುವುದು, ಕನ್ನಡ ಭವನಗಳನ್ನು ಕಟ್ಟುವುದು, ಗಡಿ ಪ್ರದೇಶದ ಜನರ ಪರಿಸ್ಥಿತಿಯನ್ನು ಸುಧಾರಿಸಲು ಹಲವಾರು ಅಭಿವೃದ್ಧಿ ಕಾರ್ಯಕ್ರಮಗಳನ್ನು ಹಾಕಿಕೊಳ್ಳುವುದು, ಅವರ ಸಾಂಸ್ಕೃತಿಕ, ಸಾಮಾಜಿಕ, ಆರ್ಥಿಕ, ಶೈಕ್ಷಣಿಕ ಆಶೆ ಆಕಾಂಕ್ಷೆಗಳನ್ನು ಈಡೇರಿಸುವುದು.

(10) ಗಡಿ ಪ್ರದೇಶದ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ಜನತೆಯ ಜೀವನ ಭದ್ರತೆಯ ದೃಷ್ಟಿಯಿಂದ ನೀಡಬಹುದಾದ ಸೌಲಭ್ಯಗಳ ಬಗ್ಗೆ ಅಧ್ಯಯನ ಮಾಡಿ ಸಂಬಂಧಿತ ಇಲಾಖೆಗಳ ಮೂಲಕ ನೆರವು ನೀಡುವುದು

(11) ಗಡಿ ಪ್ರದೇಶಗಳಲ್ಲಿ ಕರಕುಶಲ ಕೈಗಾರಿಕೆ, ಗುಡಿ ಕೈಗಾರಿಕೆ ಹಾಗೂ ಇತರೆ ಉದ್ಯಮಗಳಿಗೆ ಪ್ರೋತ್ಸಾಹದಾಯಕ ಕ್ರಮ ಕೈಗೊಳ್ಳುವುದು.

(12) ಗಡಿ ಪ್ರದೇಶದ ಹಳ್ಳಿಗಳಿಗೆ ಕುಡಿಯುವ ನೀರು, ಆರೋಗ್ಯ, ವ್ಯವಸಾಯ, ನೀರಾವರಿ, ರಸ್ತೆ, ಮುಂತಾದ ಅಭಿವೃದ್ಧಿ ಕೆಲಸಗಳಿಗೆ ಅಗತ್ಯವಾದ ಸೌಲಭ್ಯಗಳನ್ನು ಆಯಾಯ ಇಲಾಖೆಗಳು ಒದಗಿಸುವುದನ್ನು ಮೇಲ್ವಿಚಾರಣೆ ಮಾಡುವುದು.

**16. ಅಧಿನಿಯಮದ ಉದ್ದೇಶಗಳನ್ನು ಅನುಷ್ಠಾನಗೊಳಿಸುವುದು.–** ಪ್ರಾಧಿಕಾರವು ಜಿಲ್ಲಾ ಮಟ್ಟದಲ್ಲಿ ಜಿಲ್ಲಾಧಿಕಾರಿ, ಉಪ ವಿಭಾಗ ಮಟ್ಟದಲ್ಲಿ ಉಪ ವಿಭಾಗಾಧಿಕಾರಿ ಮತ್ತು ತಾಲ್ಲೂಕು ಮಟ್ಟದಲ್ಲಿ ತಹಶೀಲ್ದಾರ್ ಇವರ ಮೂಲಕ ಅಧಿನಿಯಮದ ಉದ್ದೇಶಗಳನ್ನು ಅನುಷ್ಠಾನಗೊಳಿಸತಕ್ಕದ್ದು.

**17. ಮಾಹಿತಿ ಪಡೆದುಕೊಳ್ಳುವುದು.–** ಪ್ರಾಧಿಕಾರವು ಈ ಅಧಿನಿಯಮದ ಉದ್ದೇಶಗಳಿಗಾಗಿ ರಾಜ್ಯ ಸರ್ಕಾರದ ಯಾವ ಅಧಿಕಾರಿಯಿಂದಲಾದರೂ ಕರ್ನಾಟಕ ಗಡಿ ಪ್ರದೇಶ ಅಭಿವೃದ್ಧಿಗೆ ಸಂಬಂಧಿಸಿದಂತೆ ಮಾಹಿತಿಯನ್ನು ಕೋರಬಹುದು ಮತ್ತು ಪಡೆದುಕೊಳ್ಳಬಹುದು ಮತ್ತು ಅಂಥ ಅಧಿಕಾರಿಯು ಪ್ರಾಧಿಕಾರವು ಕೋರಬಹುದಾದ ಮಾಹಿತಿಯನ್ನು ಒದಗಿಸಲು ಬದ್ಧನಾಗಿರತಕ್ಕದ್ದು.

**18. ಪ್ರಾಧಿಕಾರದ ಸಲಹೆಗಳು.–** ಪ್ರಾಧಿಕಾರವು ಈ ಅಧಿನಿಯಮದ ಉದ್ದೇಶಗಳನ್ನು ನೆರವೇರಿಸುವ ಸಲುವಾಗಿ ತನ್ನ ಯೋಜನೆಗಳನ್ನು ಮತ್ತು ಕಾರ್ಯಕ್ರಮಗಳನ್ನು ಅನುಷ್ಠಾನಕ್ಕೆ ತರುವ ಬಗ್ಗೆ ರಾಜ್ಯ ಸರ್ಕಾರಕ್ಕೆ ಸಲಹೆಗಳನ್ನು ನೀಡಬಹುದು.

**19. ಕರ್ತವ್ಯ ಲೋಪವನ್ನು ದಾಖಲಿಸುವ ಮತ್ತು ನೇಮಕಾತಿ ಪ್ರಾಧಿಕಾರಕ್ಕೆ ತಿಳಿಸುವ ಅಧಿಕಾರ.–** ಪ್ರಾಧಿಕಾರವು ಈ ಅಧಿನಿಯಮದ ಉದ್ದೇಶಗಳನ್ನು ನೆರವೇರಿಸುವ ಸಲುವಾಗಿ, ಸರ್ಕಾರವು ಕಾಲಕಾಲಕ್ಕೆ ಹೊರಡಿಸುವ ಅಥವಾ ಈಗಾಗಲೇ ಜಾರಿಯಲ್ಲಿರುವ ಯಾವುದೇ ಅದೇಶವನ್ನು ರಾಜ್ಯ ಸರ್ಕಾರ ಮತ್ತು ಸ್ಥಳೀಯ ನಿಕಾಯಗಳ ಅಧಿಕಾರಿಗಳು ಮತ್ತು ನೌಕರರು ಉಲ್ಲಂಘಿಸಿದರೆ, ಅಂಥ ಉಲ್ಲಂಘನೆಯನ್ನು ಕರ್ತವ್ಯ ಲೋಪವೆಂದು ದಾಖಲಿಸತಕ್ಕದ್ದು ಮತ್ತು ಅಂಥ ವ್ಯಕ್ತಿಗಳ ವಿರುದ್ಧ ಅಗತ್ಯ ಕ್ರಮ ಕೈಗೊಳ್ಳುವಂತೆ ನೇಮಕಾತಿ ಪ್ರಾಧಿಕಾರಕ್ಕೆ ಸಲಹೆಗಳನ್ನು ನೀಡತಕ್ಕದ್ದು.

## ಅಧ್ಯಾಯ - IV

**20. ಪ್ರಾಧಿಕಾರದ ನಿಧಿ.–** (1) ಪ್ರಾಧಿಕಾರವು, ಪ್ರಾಧಿಕಾರದ ನಿಧಿಯೆಂದು ಕರೆಯಲಾಗುವ ಒಂದು ನಿಧಿಯನ್ನು ಹೊಂದಿರತಕ್ಕದು.

(2) ಈ ಮುಂದಿನವುಗಳು ಪ್ರಾಧಿಕಾರದ ನಿಧಿಯ ಒಂದು ಭಾಗವಾಗಿರತಕ್ಕದ್ದು ಅಥವಾ ಪ್ರಾಧಿಕಾರದ ನಿಧಿಗೆ ಸಂದಾಯವಾಗತಕ್ಕದ್ದು, ಎಂದರೆ:–

(i) ಕೇಂದ್ರ ಸರ್ಕಾರ, ರಾಜ್ಯ ಸರ್ಕಾರ, ಯಾವುದೇ ಸ್ಥಳೀಯ ಪ್ರಾಧಿಕಾರ, ನಿಗಮಿತವಾದ ಅಥವಾ ನಿಗಮಿತವಾಗಿರದ ಯಾವುದೇ ನಿಕಾಯ ಅಥವಾ ಯಾರೇ ವ್ಯಕ್ತಿಗಳು ಮಾಡುವ ಎಲ್ಲ ಅನುದಾನಗಳು, ಧನಸಹಾಯಗಳು, ದಾನಗಳು ಮತ್ತು ಕೊಡುಗೆಗಳು ; ಮತ್ತು

(ii) ಯಾವುದೇ ರೀತಿಯ ಯಾವುದೇ ಮೂಲದಿಂದ ಪ್ರಾಧಿಕಾರದಿಂದ ಅಥವಾ ಅದರ ಪರವಾಗಿ ಸ್ವೀಕರಿಸಲಾದ ಇತರ ಎಲ್ಲ ಮೊತ್ತಗಳು :

(3) ರಾಜ್ಯ ಸರ್ಕಾರವು ಅನ್ಯಥಾ ನಿರ್ದೇಶಿಸಿದ ಹೊರತು, ನಿಧಿಗೆ ಜಮೆ ಮಾಡಲಾದ ಎಲ್ಲ ಹಣವನ್ನು ಯಾವುದೇ ಅನುಸೂಚಿತ ಬ್ಯಾಂಕಿನಲ್ಲಿ ಹೂಡತಕ್ಕದ್ದು.

(4) ಪ್ರಾಧಿಕಾರದ ಕಾರ್ಯದರ್ಶಿ ಮತ್ತು ಅದರ ಅಧಿಕಾರಿಗಳು ಮತ್ತು ನೌಕರರಿಗೆ ಸಂದಾಯವಾಗತಕ್ಕ ವೇತನಗಳು, ಭತ್ಯೆಗಳು ಮತ್ತು ನಿವೃತ್ತಿ ವೇತನಗಳೂ ಸೇರಿದಂತೆ ಪ್ರಾಧಿಕಾರದ ಆಡಳಿತಾತ್ಮಕ ವೆಚ್ಚಗಳನ್ನು ಪ್ರಾಧಿಕಾರದ ನಿಧಿಯಿಂದ ಭರಿಸತಕ್ಕದ್ದು.

**21. ರಾಜ್ಯ ಸರ್ಕಾರದಿಂದ ಅನುದಾನ.– (1)** ರಾಜ್ಯ ಸರ್ಕಾರವು ಪ್ರತಿ ವರ್ಷ ಪ್ರಾಧಿಕಾರದ ಆಡಳಿತಾತ್ಮಕ ವೆಚ್ಚಗಳಿಗೆ ಸಮನಾದ ಮೊಬಲಗನ್ನು ಪ್ರಾಧಿಕಾರಕ್ಕೆ ಅನುದಾನ ನೀಡತಕ್ಕದ್ದು.

(2) ರಾಜ್ಯ ಸರ್ಕಾರವು ಪ್ರಾಧಿಕಾರದ ಯೋಜನೆ ಮತ್ತು ಕಾರ್ಯಕ್ರಮಗಳನ್ನು ಗಮನದಲ್ಲಿಟ್ಟುಕೊಂಡು ರಾಜ್ಯದ ವಾರ್ಷಿಕ ಬಜೆಟ್ಟಿನಲ್ಲಿ ಪ್ರಾಧಿಕಾರಕ್ಕೆ ಹಣಕಾಸಿನ ಹಂಚಿಕೆಗಳನ್ನು ಮಾಡಬಹುದು.

**22. ಲೆಕ್ಕಪತ್ರಗಳು ಮತ್ತು ಲೆಕ್ಕಪರಿಶೋಧನೆ.–** (1) ಪ್ರಾಧಿಕಾರದ ನಿಧಿಯ ಆದಾಯ ಮತ್ತು ವೆಚ್ಚದ ಲೆಕ್ಕಪತ್ರಗಳನ್ನು ಗೊತ್ತುಪಡಿಸಬಹುದಾದಂಥ ನಿಯಮಗಳ ಅನುಸಾರವಾಗಿ ಇಡತಕ್ಕದ್ದು;

(2) ಪ್ರಾಧಿಕಾರವು ಗೊತ್ತುಪಡಿಸಬಹುದಾದಂಥ ಪ್ರಪತ್ರದಲ್ಲಿ ಲೆಕ್ಕಪತ್ರಗಳ ವಾರ್ಷಿಕ ವಿವರಣಾ ಪಟ್ಟಿಯನ್ನು ತಯಾರಿಸತಕ್ಕದ್ದು.

(3) ರಾಜ್ಯ ಸರ್ಕಾರವು ನೇಮಕ ಮಾಡಬಹುದಾದಂಥ ಲೆಕ್ಕ ಪರಿಶೋಧಕರಿಂದ ಪ್ರಾಧಿಕಾರದ ಲೆಕ್ಕಪತ್ರಗಳ ವಾರ್ಷಿಕ ಲೆಕ್ಕಪರಿಶೋಧನೆ ಮಾಡಿಸತಕ್ಕದ್ದು.

(4) ಲೆಕ್ಕ ಪರಿಶೋಧಕರು ಲೆಕ್ಕ ಪರಿಶೋಧನೆಯ ಉದ್ದೇಶಗಳಿಗಾಗಿ ಪ್ರಾಧಿಕಾರದ ಎಲ್ಲ ಲೆಕ್ಕಪತ್ರಗಳನ್ನು ಮತ್ತು ಇತರ ದಾಖಲೆಗಳನ್ನು ನೋಡುವ ಅಧಿಕಾರ ಹೊಂದಿರತಕ್ಕದ್ದು.

(5) ಪ್ರಾಧಿಕಾರವು, ಲೆಕ್ಕ ಪರಿಶೋಧನೆಗಾಗಿ ಗೊತ್ತುಪಡಿಸಬಹುದಾದಂಥ ವೆಚ್ಚಗಳನ್ನು ತನ್ನ ನಿಧಿಯಿಂದ ಸಂದಾಯ ಮಾಡತಕ್ಕದ್ದು.

(6) ಲೆಕ್ಕ ಪರಿಶೋಧಕರ ವರದಿಯನ್ನು ಸ್ವೀಕರಿಸಿದ ತರುವಾಯ ಸಾಧ್ಯವಾದಷ್ಟು ಬೇಗ, ಪ್ರಾಧಿಕಾರವು ಲೆಕ್ಕ ಪರಿಶೋಧಕರ ವರದಿಯ ಒಂದು ಪ್ರತಿಯೊಂದಿಗೆ ಲೆಕ್ಕಪತ್ರಗಳ ವಾರ್ಷಿಕ ವಿವರಣಾಪಟ್ಟಿಯ ಪ್ರತಿಯೊಂದನ್ನು ಸರ್ಕಾರಕ್ಕೆ ಕಳುಹಿಸತಕ್ಕದ್ದು ಮತ್ತು ಗೊತ್ತುಪಡಿಸಬಹುದಾದಂಥ ರೀತಿಯಲ್ಲಿ ಲೆಕ್ಕಪತ್ರಗಳ ವಾರ್ಷಿಕ ವಿವರಣಾ ಪಟ್ಟಿಯನ್ನು ಪ್ರಕಟಿಸುವಂತೆ ಮಾಡತಕ್ಕದ್ದು.

(7) ರಾಜ್ಯ ಸರ್ಕಾರವು, ಲೆಕ್ಕ ಪರಿಶೋಧಕರ ವರದಿಯನ್ನು ಪರಿಶೀಲಿಸಿದ ತರುವಾಯ ತಾನು ಸೂಕ್ತವೆಂದು ಭಾವಿಸಬಹುದಾದಂಥ ನಿರ್ದೇಶನಗಳನ್ನು ಪ್ರಾಧಿಕಾರಕ್ಕೆ ನೀಡಬಹುದು ಮತ್ತು ಪ್ರಾಧಿಕಾರವು ಅಂಥ ನಿರ್ದೇಶನಗಳನ್ನು ಪಾಲಿಸತಕ್ಕದ್ದು.

## ಅಧ್ಯಾಯ – V

## ಸಂಕೀರ್ಣ

**23. ವರದಿ.–** ಪ್ರಾಧಿಕಾರವು, ನಿಯಮಿಸಬಹುದಾದಂಥ ದಿನಾಂಕಗಳ ಒಳಗೆ ಅಂಥ ರೀತಿಯಲ್ಲಿ ಮತ್ತು ಅಂಥ ಕಾಲಾಂತರಗಳಲ್ಲಿ ನಿಯಮಿಸಬಹುದಾದ ವರದಿಯನ್ನು ರಾಜ್ಯ ಸರ್ಕಾರಕ್ಕೆ ಸಲ್ಲಿಸತಕ್ಕದ್ದು.

**24. ಪ್ರಾಧಿಕಾರದ ಆಯವ್ಯಯ.–** ಪ್ರಾಧಿಕಾರವು ಪ್ರತಿವರ್ಷ, ಮುಂದಿನ ಏಪ್ರಿಲ್ ತಿಂಗಳ ಮೊದಲನೇ ದಿನಾಂಕದಿಂದ ಪ್ರಾರಂಭವಾಗುವ ಹಣಕಾಸು ವರ್ಷಕ್ಕಾಗಿ ತನ್ನ ಆದಾಯ ಮತ್ತು ವೆಚ್ಚದ ಅಂದಾಜನ್ನು ನಿಯಮಿಸಬಹುದಾದಂಥ ದಿನಾಂಕದಂದು ಮತ್ತು ಅಂಥ ಪ್ರಪತ್ರದಲ್ಲಿ ಸಿದ್ಧಪಡಿಸತಕ್ಕದ್ದು ಮತ್ತು ಅದನ್ನು ರಾಜ್ಯ ಸರ್ಕಾರಕ್ಕೆ ಕಳುಹಿಸತಕ್ಕದ್ದು.

**25. ನಿಯಮಗಳ ರಚನಾಧಿಕಾರ.– (1)** ರಾಜ್ಯ ಸರ್ಕಾರವು ಈ ಅಧಿನಿಯಮದ ಉದ್ದೇಶಗಳನ್ನು ನೆರವೇರಿಸಲು ಅಧಿಸೂಚನೆಯ ಮೂಲಕ ಪೂರ್ವ ಪ್ರಕಟಣೆಯ ತರುವಾಯ ನಿಯಮಗಳನ್ನು ರಚಿಸಬಹುದು.

(2) ಈ ಅಧಿನಿಯಮದ ಅಡಿಯಲ್ಲಿ ರಚಿಸಲಾದ ಪ್ರತಿಯೊಂದು ನಿಯಮವನ್ನು ಅದನ್ನು ರಚಿಸಿದ ತರುವಾಯ ಆದಷ್ಟು ಬೇಗನೆ ರಾಜ್ಯ ವಿಧಾನ ಮಂಡಲವು ಅಧಿವೇಶನದಲ್ಲಿರುವಾಗ ಅದರ ಪ್ರತಿಯೊಂದು ಸದನದ ಮುಂದೆ ಒಂದು ಅಥವಾ ಎರಡು ಅಥವಾ ಅದಕ್ಕೂ ಹೆಚ್ಚು ನಿರಂತರ ಅಧಿವೇಶನಗಳಲ್ಲಿ ಅಡಕವಾಗಬಹುದಾದ ಒಟ್ಟು ಮೂವತ್ತು ದಿನಗಳ ಅವಧಿಯವರೆಗೆ ಮಂಡಿಸತಕ್ಕದ್ದು ಮತ್ತು ಅದನ್ನು ಹಾಗೆ ಮಂಡಿಸಿದ ಅಧಿವೇಶನ ಅಥವಾ ಅದರ ನಿಕಟ ತರುವಾಯದ ಅಧಿವೇಶನ ಮುಕ್ತಾಯವಾಗುವ ಮೊದಲು ಉಭಯ ಸದನಗಳೂ ನಿಯಮದಲ್ಲಿ ಯಾವುದೇ ಮಾರ್ಪಾಡು ಮಾಡಬೇಕೆಂದು ಒಪ್ಪಿದರೆ ಅಥವಾ ಯಾವುದೇ ನಿಯಮ ರಚಿಸಬಾರದೆಂದು ನಿರ್ಧರಿಸಿದರೆ ಆ ತರುವಾಯ, ನಿಯಮವು ಸಂದರ್ಭಾನುಸಾರ ಹಾಗೆ ಮಾರ್ಪಾಟಾದ ರೂಪದಲ್ಲಿ ಮಾತ್ರ ಪರಿಣಾಮಕಾರಿಯಾಗತಕ್ಕದು ಅಥವಾ ಯಾವುದೇ ಪರಿಣಾಮ ಹೊಂದತಕ್ಕದ್ದಲ್ಲ. ಆದರೆ ಅಂಥ ಯಾವುದೇ ಮಾರ್ಪಾಟು ಅಥವಾ ರದ್ದತಿಯು ಆ ನಿಯಮದ ಅಡಿಯಲ್ಲಿ ಆ ಮೊದಲು ಮಾಡಿದ ಯಾವುದೇ ಕೃತ್ಯದ ಮಾನ್ಯತೆಗೆ ಬಾಧಕವಾಗತಕ್ಕದ್ದಲ್ಲ.

**26. ವಿನಿಯಮಗಳನ್ನು ರಚಿಸಲು ಪ್ರಾಧಿಕಾರದ ಅಧಿಕಾರ.–** ಪ್ರಾಧಿಕಾರವು ಈ ಅಧಿನಿಯಮದ ಉಪಬಂಧಗಳಿಗೆ ಮತ್ತು 26ನೇ ಪ್ರಕರಣದ ಮೇರೆಗೆ ಮಾಡಲಾದ ನಿಯಮಗಳಿಗೆ ಒಳಪಟ್ಟು ಮತ್ತು ರಾಜ್ಯ ಸರ್ಕಾರದ ಪೂರ್ವ ಮಂಜೂರಾತಿಯೊಂದಿಗೆ, ಈ ಅಧಿನಿಯಮದ ಉದ್ದೇಶಗಳನ್ನು ನೆರವೇರಿಸಲು ಅಧಿಸೂಚನೆಯ ಮೂಲಕ ವಿನಿಯಮಗಳನ್ನು ರಚಿಸಬಹುದು.

**ಅನುಸೂಚಿ**

**(ಪ್ರಕರಣ (2) (ಬಿ) ಖಂಡ ಗಮನಿಸಿ)**

| **ಕ್ರಮ ಸಂಖ್ಯೆ** | **ತಾಲ್ಲೂಕಿನ ಮತ್ತು ಇತರೆ ಪ್ರದೇಶಗಳ ಹೆಸರುಗಳು** |
|---|---|
| **(1)** | **(2)** |
| 1 | ಆನೇಕಲ್ |
| 2 | ಹೊಸಕೋಟೆ |
| 3 | ಕನಕಪುರ |
| 4 | ಚಳ್ಳಕೆರೆ |
| 5 | ಹಿರಿಯೂರು |
| 6 | ಮೊಳಕಾಲ್ಮೂರು |
| 7 | ಬಾಗೇಪಲ್ಲಿ |
| 8 | ಬಂಗಾರುಪೇಟೆ |
| 9 | ಚಿಂತಾಮಣಿ |
| 10 | ಗೌರಿಬಿದನೂರು |
| 11 | ಗುಡಿಬಂಡೆ |
| 12 | ಮಾಲೂರು |
| 13 | ಮುಳಬಾಗಿಲು |
| 14 | ಶ್ರೀನಿವಾಸಪುರ |
| 15 | ಮಧುಗಿರಿ |
| 16 | ಪಾವಗಡ |
| 17 | ಸಿರಾ |
| 18 | ಬಂಟ್ವಾಳ |
| 19 | ಮಂಗಳೂರು |
| 20 | ಪುತ್ತೂರು |
| 21 | ಸುಳ್ಯ |
| 22 | ಮಡಿಕೇರಿ |
| 23 | ವಿರಾಜಪೇಟೆ |
| 24 | ಚಾಮರಾಜನಗರ |
| 25 | ಗುಂಡ್ಲುಪೇಟೆ |
| 26 | ಹೆಗ್ಗಡದೇವನಕೋಟೆ |
| 27 | ಕೊಳ್ಳೇಗಾಲ |
| 28 | ಬಿಜಾಪುರ |
| 29 | ಇಂಡಿ |
| 30 | ಬಳ್ಳಾರಿ |

| ಕ್ರಮ ಸಂಖ್ಯೆ | ತಾಲ್ಲೂಕಿನ ಮತ್ತು ಇತರೆ ಪ್ರದೇಶಗಳ ಹೆಸರುಗಳು |
|---|---|
| (1) | (2) |
| 31 | ಸಂಡೂರು |
| 32 | ಸಿರಿಗುಪ್ಪೆ |
| 33 | ಅಫಜಲ್ಪುರ |
| 34 | ಆಳಂದ |
| 35 | ಚಿಂಚೋಳಿ |
| 36 | ಸೇಡಂ |
| 37 | ಶಹಪುರ |
| 38 | ಯಾದಗೀರ್ |
| 39 | ಮಾನ್ವಿ |
| 40 | ರಾಯಚೂರು |
| 41 | ಅಥಣಿ |
| 42 | ಬೆಳಗಾವಿ |
| 43 | ಹುಕ್ಕೇರಿ |
| 44 | ಚಿಕ್ಕೋಡಿ |
| 45 | ಖಾನಾಪುರ |
| 46 | ಕಾರವಾರ |
| 47 | ಜೋಯಿಡಾ |
| 48 | ಔರಾದ್ |
| 49 | ಬಸವಕಲ್ಯಾಣ |
| 50 | ಭಾಲ್ಕಿ |
| 51 | ಬೀದರ್ |
| 52 | ಹುಮ್ನಾಬಾದ್ |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಜಿ.ಕೆ.ಬೋರೇಗೌಡ**
ಸರ್ಕಾರದ ಕಾರ್ಯದರ್ಶಿ
ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನಾ ಇಲಾಖೆ

## ವಿಶೇಷ ಪತ್ರಿಕೆ

| ಭಾಗ – IV-A | ಬೆಂಗಳೂರು, ಶನಿವಾರ, ಏಪ್ರಿಲ್ ೩, ೨೦೧೦ (ಚೈತ್ರ ೧೩, ಶಕ ವರ್ಷ ೧೯೩೨) | ನಂ. ೩೪೦ |
|---|---|---|

**REVENUE SECRETARIAT**

**NOTIFICATION**

**No. RD 40 MUNOMU 2010, Bangalore, dated: 1st April, 2010**

In exercise of the powers conferred by clause (a) of sub-section (1) of section 9 of the Karnataka Stamp Act, 1957 (Karnataka Act 34 of 1957) and section 78 of the Registration Act, 1908 (Central Act 16 of 1908) the Government of Karnataka with effect from 01.04.2010 in public interest hereby remit the Stamp duty and the Registration fees payable on the instruments executed for the following purposes namely,-

